# ಪುರಂದರದಾಸರ ಜನಪ್ರಿಯ ಕೀರ್ತನೆಗಳು

ಸಂಪಾದಕರು

**ಡಾ। ಶ್ರೀನಿವಾಸ ಹಾವನೂರ**

**ಹೊ. ರಾ. ಸತ್ಯನಾರಾಯಣರಾವ್**




ಅಂಕಿತ ಪುಸ್ತಕ
53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯರಸ್ತೆ
ಬಸವನಗುಡಿ, ಬೆಂಗಳೂರು - 560 004
☎ 661 7100(O) 652 6134(R)

**PURANDARADASARA JANAPRIYA KEERTHANEGALU**—Edited By Dr. Shrinivasa Havanoor & Sri H. R. Satyanarayana Rao. Published by Ankita Pustaka, No. 53, Shamsingh Complex, Gandhi Bazar Main Road, Basavanagudi, Bangalore - 560 004.
☎ 661 7100 (O) 652 6134(R)

Price : Rs. 90/- Pages: xxiv + 248

ಪ್ರಥಮ ಮುದ್ರಣ - 2002

ಬೆಲೆ : ರೂ. 90/-

ಮುಖಪುಟ ವಿನ್ಯಾಸ: ಮೋನಪ್ಪ

ISBN: 81-87321-71-7

ಪ್ರಕಾಶಕರು
**ಅಂಕಿತ ಪುಸ್ತಕ**
53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್
ಗಾಂಧಿಬಜಾರ್ ಮುಖ್ಯರಸ್ತೆ
ಬಸವನಗುಡಿ, ಬೆಂಗಳೂರು - 560 004
☎ 661 7100 (O) 652 6134 (R)

ಮುದ್ರಣ
**ಅಂಕಿತ ಎಂಟರ್‌ಪ್ರೈಸಸ್**
ಬೆಂಗಳೂರು

# ಪ್ರಸ್ತಾವನೆ

ಉಡುಪಿಯ ಓರ್ವ ಮಠಾಧೀಶರು ಹೇಳಿದ ಪ್ರಸಂಗವಿದು: ಒಬ್ಬ ಹಾಡುಗಾರ್ತಿ ಅವರೆದುರು ಕೆಲವು ಕೀರ್ತನೆಗಳನ್ನು ಹಾಡಿದಳಂತೆ. ಅವುಗಳಲ್ಲಿ ಒಂದಕ್ಕೆ 'ಪುರಂದರ ವಿಠಲ' ಎಂಬ ಮುದ್ರಿಕೆ ಇತ್ತು. 'ಪುರಂದರದಾಸರ ಈ ಹಾಡನ್ನು ನಾನು ಈ ಹಿಂದೆ ನೋಡಿದಂತಿಲ್ಲ' ಎಂಬ ಶಂಕೆಯಿಂದ ಅದರ ಪ್ರಕಟನೆಯ ವಿಚಾರವಾಗಿ ಕೇಳಿದರು. ಅದಕ್ಕೆ ಆಕೆ ಉತ್ತರಿಸಿದಳು:

"ಇಲ್ಲ ಆ ಈ ನುಡಿಗಳನ್ನು ಎತ್ತಿಕೊಂಡು ನಾನೇ ರಚಿಸಿದೆ—ಹಾಡಲಿಕ್ಕೆ ಅನುಕೂಲವಾಗುವಂತೆ ಅದಕ್ಕೆ 'ಪುರಂದರ ವಿಠಲ' ಎಂಬ ಅಂಕಿತವನ್ನೂ ಸೇರಿಸಿದೆ ಚೆನ್ನಾಗಿದೆಯಲ್ಲವೆ?"

ಪುರಂದರದಾಸರ ಬಗ್ಗೆ ಇನ್ನೂ ಅನೇಕರು ವಿವಿಧ ರೀತಿಗಳಲ್ಲಿ ಸ್ವಾತಂತ್ರ್ಯವಹಿಸಿ ಅಪಚಾರ ಮಾಡಿದ್ದಾರೆ. ಇದು ಪುರಂದರದಾಸರದು ಎಂದು ಹೇಳಿದ್ದಾದರೆ ತಮ್ಮ ಹಾಡುಗಾರಿಕೆಗೆ ಮನ್ನಣೆ ಬರುವುದೆಂದು, ಬೇರೆ ದಾಸರ ರಚನೆಗಳಿಗೆ 'ಪುರಂದರ ವಿಠಲ' ಎಂದು ಅಂಕಿತವನ್ನು ಬದಲಿಸುವುದು ಸುಲಭ-ಸಹಜವಾಯಿತು.

ಪುರಂದರದಾಸರ ಹಾಡುಗಳಲ್ಲಿ ಉತ್ತರ ಕರ್ನಾಟಕದ ನುಡಿಗಟ್ಟು ಸಾಕಷ್ಟು ಕಂಡುಬರುತ್ತದೆ. ಅದು ತಿಳಿಯದೇ ದಕ್ಷಿಣ ಭಾಗದವರು, ಅದರಂತೆ ತಮಿಳುನಾಡು, ಆಂಧ್ರದ ಕಡೆಯ ಹಾಡುಗಾರರು ಸಿಕ್ಕಾಪಟ್ಟೆ ತಪ್ಪುತಪ್ಪಾಗಿ ಹಾಡುವುದೂ ರೂಢಿಗತವೆನಿಸಿದೆ. ಉಚ್ಚಾರಭೇದವಂತೂ ತಲೆಬೇಸರ ಮೂಡಿಸುತ್ತದೆ. ರಾಮನವಮಿ ಸಂಗೀತೋತ್ಸವದ ಕಾಲಕ್ಕೆ ಒಬ್ಬರು 'ಪುರಂಧರ ವಿಠಲ' ಎಂದು ಹೇಳತೊಡಗಿದರು. ಆಮೇಲೆ ಗೊತ್ತಾಯಿತು—ಅವರು ಇಟ್ಟುಕೊಂಡಿದ್ದ ಹಾಡಿನ ನೋಟ್‌ಬುಕ್ಕಿನಲ್ಲಿ ಅನೇಕ ಕಡೆ, ಅವರ ಮುದ್ರಿಕೆಯಲ್ಲಿ ಈ ಮಹಾಪ್ರಾಣವನ್ನೇ ಬರೆದುಕೊಂಡಿದ್ದರು.

ಹರಿದಾಸರುಗಳ ಕೀರ್ತನ ಸಂಗ್ರಹ ಪ್ರಕಟಣೆ ನೂರೈವತ್ತು ವರ್ಷಗಳಿಂದ ಸಾಗಿಬಂದಿದೆ. ನೂರಕ್ಕೂ ಮೇಲ್ಪಟ್ಟು ಸಣ್ಣ ದೊಡ್ಡ ಸಂಕಲನಗಳು ಪ್ರಕಟವಾಗಿವೆ. ಅವುಗಳಲ್ಲಿ ಪುರಂದರದಾಸರ ಕೃತಿಗಳೇ ಬಹುಸಂಖ್ಯೆಯಲ್ಲಿರುತ್ತವೆ. ಪುರಂದರವಿಠಲೀಯ ಕೃತಿಗಳನ್ನು ಮಾತ್ರವೆ ಒಳಗೊಂಡಿರುವ ಪ್ರತ್ಯೇಕ ಸಂಗ್ರಹಗಳೂ, ವಿಶೇಷತಃ ಜನಬಳಕೆಯಲ್ಲಿರುವಂಥ ಹಾಡುಗಳದ್ದು, ಹೊರಬರುತ್ತಲೇ ಇವೆ; ಒಂದರ ಮೇಲೊಂದು ಮರುಮುದ್ರಣಗಳನ್ನು ಕಾಣುತ್ತಿವೆ. ಉದಾಹರಣೆಗೆ ಮಂಗಳೂರಿನ ನಿತ್ಯಾನಂದ ಗ್ರಂಥಮಾಲೆಯವರು ಪ್ರಕಟಿಸುತ್ತಾ ಇರುವ ಪುರಂದರದಾಸರ ಕೃತಿಸಂಗ್ರಹದ ಈಗಿನ ಆವೃತ್ತಿ ೨೬ನೆಯದು. ಈ ಆಯ್ದ ಸಂಗ್ರಹಗಳ ಜೊತೆಗೆ, ಪುರಂದರದಾಸರ ಸಮಗ್ರ ಕೀರ್ತನ ಸಂಪುಟಗಳೂ ಪ್ರಕಟವಾಗಿವೆ. ಉಡುಪಿಯ ಪಾವಂಜೆ ಗುರುರಾವ್ (೧೯೧೭-೧೯೩೨), ಸುಬೋಧ ರಾಮರಾವ್, ಬೆಟಗೇರಿ-ಬೆಂಗೇರಿಯವರು (೧೯೬೩-೬೫) ಮತ್ತು ಎಸ್.ಕೆ. ರಾಮಚಂದ್ರರಾವ್ (೧೯೮೫)—ಇವರುಗಳು ಹೊರತಂದಿದ್ದು, ಸಂಪಾದನ ವಿಚಾರದಲ್ಲಿ ಅವರ ಶ್ರದ್ಧೆ ಮತ್ತು ಪರಿಶ್ರಮ ಒಡೆದು ತೋರುತ್ತದೆ.

ಪ್ರಾಚೀನ ಗ್ರಂಥಗಳ ಸಂಪಾದನ ಕಾರ್ಯ ಅತಿ ಕಠಿಣವಾದದ್ದು. ಅದರಲ್ಲಿಯೂ ಪುರಂದರದಾಸರಂತಹ ವಿಶೇಷ ಜನಪ್ರಚುರವಾಗಿರುವವರ ಕೃತಿಗಳದ್ದು ಇನ್ನೂ ಕಷ್ಟಕರವಾದದ್ದು. 'ತೋಂಡೀ' ಸಂಪ್ರದಾಯದ ಹಾಗೂ ಸಂಪೂರ್ಣವಾಗಿ ಶಿಷ್ಟ ರೂಪದ್ದಲ್ಲದ ಈ ಸಾಹಿತ್ಯದ ಸಂಪಾದನೆ ಸವಾಲನ್ನು ಒಡ್ಡುವಂತಹದು.

ಆದರೆ ಸಂಪಾದನ-ಪ್ರಕಟನೆಯ ಕಾರ್ಯ ಅತ್ಯಂತ ಸುಲಭವಾದದ್ದೂ ಹೌದು! ಯಾರಿಗೆ? ಅಲ್ಲಿ ಇಲ್ಲಿ ಈಗಾಗಲೇ ಪ್ರಕಟವಾದವುಗಳನ್ನು ಎತ್ತಿಕೊಂಡು ಮುದ್ರಣಕ್ಕೆ ಕೊಟ್ಟರಾಯಿತು ಎನ್ನುವವರಿಗೆ!

ಇಂಥವರು ನಾಲ್ಕು ರೀತಿಯಲ್ಲಿ ತಮ್ಮ ದಿವ್ಯ ನಿರ್ಲಕ್ಷ್ಯವನ್ನು ತೋರುತ್ತಾರೆ. ೧) ಪುರಂದರ ದಾಸರದೇ ರಚನೆ ಎನ್ನುವುದಕ್ಕೆ ಎಳ್ಳಷ್ಟೂ ಗಮನ ಕೊಡುವುದಿಲ್ಲ. ಬೇರೆಯವರ ಹಾಡಿನ ಮುದ್ರಿಕೆ ತೆಗೆದು ನಮ್ಮ ದಾಸವರ್ಯರಿಗೆ ಅನ್ವಯಿಸುತ್ತಾರೆ ಎನ್ನುವುದರ ವಿಚಾರ ಮಾಡುವುದೇ ಇಲ್ಲ. ೨) ಪುರಂದರದಾಸರ ನುಡಿಗಟ್ಟು ಆಡುನುಡಿಗೆ ಮತ್ತು ನಡುಗನ್ನಡ ಭಾಷೆಗೆ ಹೆಚ್ಚು ಸಮೀಪ ವೆಂಬುದನ್ನು ತಿಳಿದುಕೊಳ್ಳದೇ ತಮಗೆ ಖುಶಿ ಬಂದಂತೆ ಬದಲಿಸುತ್ತಾರೆ. ಅದಕ್ಕೆ ಗ್ರಾಂಥಿಕ ಅಥವಾ ಶಿಷ್ಟರೂಪವನ್ನು ಕೊಡುತ್ತಾರೆ. ೩) ಒಂದೇ ಸಂಗ್ರಹದಲ್ಲಿ ಕೆಲವು ಹಾಡುಗಳು ಪುನಃ ಕಾಣಿಸಿಕೊಳ್ಳುತ್ತವೆ. ಬೇರೆಯವರ ಹಾಡುಗಳನ್ನು - ಅವರ ಮುದ್ರಿಕೆ ಸ್ಪಷ್ಟವಾಗಿ ಇದ್ದರೂ ಪುರಂದರದಾಸರ ಸಂಗ್ರಹದಲ್ಲಿಯೇ ಸೇರಿಸುವಷ್ಟು ಅಲಕ್ಷ್ಯ ತೋರುತ್ತಾರೆ. ೪) ಸರಿಯಾದ ಪಾಠ ಇದೆಯಾ? ದಾಸರು ತಪ್ಪದೇ ಪಾಲಿಸುತ್ತಿದ್ದ ದ್ವಿತೀಯಾಕ್ಷರ ಪ್ರಾಸ ಇದೆಯೊ? ಹಾಡು ಪೂರ್ಣವಾಗಿ ಬಂದಿದೆಯೊ? ಇದಾವುದರ ಬಗ್ಗೆ ಕಾಳಜಿ ವಹಿಸುವುದಿಲ್ಲ. ಪಠ್ಯದ ಅಪೂರ್ಣತೆಗೆ ಇಲ್ಲೊಂದು ಮೋಜಿನ ಉದಾಹರಣೆ ಇದೆ. ಸಾಮಾನ್ಯವಾಗಿ ಕೀರ್ತನೆಗಳಲ್ಲಿ ಬೆಸಸಂಖ್ಯೆಯ (೩,೫,೭...) ನುಡಿಗಳಿರುತ್ತವೆ. 'ಮೂರ್ಖರಾದರು ಜನರು' ಈ ಕೀರ್ತನೆಯ ನುಡಿಗಳ ಸಂಖ್ಯೆ ವೈವಿಧ್ಯಮಯವಾಗಿದೆ. (ರಾಮಚಂದ್ರರಾಯರದ್ದಲ್ಲಿ ೬ ನುಡಿಗಳು; ಬೆಟಗೇರಿ-ಬೆಂಗೇರಿ ಸಂಗ್ರಹದಲ್ಲಿ ೭; ಪಾವಂಜೆ ಸಂಗ್ರಹದಲ್ಲಿ ೮.)

ಈ ಬಗೆಯ ನಿರ್ಲಕ್ಷ್ಯದ ಮಾದರಿಯಾಗಿ ಎರಡು ಕೃತಿಗಳನ್ನು ಮಾತ್ರ ಉಲ್ಲೇಖಿಸುವೆ. ಮೇಲೆ ಹೇಳಿದ, ಮಂಗಳೂರ ಪ್ರಕಟನೆಯು (ಕ್ರಿ.ಶ. ೨೦೦೦) 'ಪೂರ್ಣ ತಿದ್ದಿದ ಹೊಸ' ಮುದ್ರಣವೆಂದೂ, ಹೇಳಿಕೊಂಡಿದ್ದಾರೆ. ಅದರಲ್ಲಿ 'ಅಂತರಂಗದಲಿ ಹರಿಯ ಕಾಣದವ' ಎಂಬ ರಚನೆ ಶ್ರೀ ವ್ಯಾಸರಾಯರದೆಂಬುದು ದಾಸ ಸಾಹಿತ್ಯವನ್ನು ಸ್ವಲ್ಪ ತಿಳಿದವರಿಗೂ ಗೊತ್ತಿದ್ದ ವಿಷಯ. ಇಲ್ಲಿ ಅದು 'ಪುರಂದರ ವಿಠಲ'ನೆಂಬ ಮುದ್ರಿಕೆಯನ್ನು ಹೊದ್ದು ಕಾಣಿಸಿಕೊಂಡಿದೆ. (ಹಾಡಿನ ಸಂಖ್ಯೆ ೩) ಇತ್ತ 'ವಂದಿಪೆ ನಿನಗೆ ಗಣನಾಥ' ಎಂಬ ಹಾಡು ಶ್ರೀಪಾದರಾಜರ 'ರಂಗವಿಠಲ' ಮುದ್ರಿಕೆಯಲ್ಲಿ ಈ ಸಂಗ್ರಹದೊಳಗೆ ಸೇರಿಕೊಂಡಿದೆ. ಈ ಹಾಡು ಶ್ರೀಪಾದರಾಜರದಲ್ಲ; ಪುರಂದರದಾಸರ ಯಾವ ಸಮಗ್ರ ಸಂಗ್ರಹದಲ್ಲಿಯೂ ಇಲ್ಲ! 'ಮೆಚ್ಚನಯ್ಯ ಹರಿಮೆಚ್ಚನಯ್ಯ' ಎಂಬ ಹಾಡಿನಲ್ಲಿ 'ಮನವನೊಂದು ಕಡೆಯಲಿಟ್ಟು ತನುವನಡ್ಡ ಕೆಡಹಿಕೊಂಡು' ಎಂಬ ಸಾಲು ೪ನೇ ನುಡಿಯಲ್ಲಿದ್ದದ್ದು ೭ನೇ ನುಡಿಯಲ್ಲಿ ಇದ್ದುದಿದ್ದಂತೆ ಮತ್ತೆ ಬಂದಿದೆ. ೨೬ನೆಯ ಆವೃತ್ತಿಯವರೆಗೂ ಅದು ಹಾಗೇ ಉಳಿದುಕೊಂಡು ಬರಬೇಕೆ?

ಇನ್ನೊಂದು ಮಾದರಿ 'ಪುರಂದರದಾಸರ ಹಾಡುಗಳು' ಎಂಬ ಅರಳುಮಲ್ಲಿಗೆ ಪಾರ್ಥಸಾರಥಿ ಯವರ ಈಚಿನ ಬೃಹತ್ ಸಂಪುಟ. ಮೇಲೆ ಹೇಳಿದ ಲೋಪ ಮತ್ತು ದೋಷದ ಬಾಬತ್ತಿನಲ್ಲಿ ಇದರಲ್ಲಿ ಕಂಡುಬರುವುದು ಲೋಪವಲ್ಲ; ಹೆಚ್ಚಳ! ಪುರಂದರದಾಸರ ಸಮಸ್ತ ಹಾಡುಗಳ ಸಂಖ್ಯೆ—ಇತರರು ಈ ಹಿಂದೆ ತಂದದ್ದರ ಲೆಕ್ಕದಿಂದ—ಒಂದು ಸಾವಿರದ ಒಳಹೊರಗೆ ಮಾತ್ರ ಇವೆ. ಕೆಲವು ಅವರುಗಳ ಕಣ್ತಪ್ಪಿ ಉಳಿದಿರಬಹುದು. ಇನ್ನು ಕೆಲವನ್ನು-ಅವು ಪುರಂದರಕೃತವಲ್ಲವೆಂದು ಬಿಟ್ಟಿರಬಹುದು. ಅ.ಪಾ. ಅವರ ಬೃಹತ್ ಸಂಪುಟದಲ್ಲಿ ಹಾಡುಗಳ ಸಂಖ್ಯೆ ೧೫೦೦! ವಿಶೇಷವಾಗಿ ಶೋಧಮಾಡಿ ಹೊಸ ಹಾಡುಗಳನ್ನು ದೊರಕಿಸಿದರೆಂದೇನಲ್ಲ. ಈ ಹೆಚ್ಚಳದ ಮುಖ್ಯ ಕಾರಣವೆಂದರೆ ಹಾಡುಗಳ ಪುನರಾವೃತ್ತಿ. ಹಾಗೂ ಅನ್ಯರ—ಆದರೆ 'ಪುರಂದರ ವಿಠಲ'ನನ್ನು ಅಳವಡಿಸಿಕೊಂಡ ಕೃತಿಗಳ ಸೇರ್ಪಡೆ. ಇವು ಕೆಲವು ವಿಶಿಷ್ಟ ಮಾದರಿಗಳು (specimens):

ಏಕೆನ್ನ ಈ ರಾಜ್ಯಕೆಳತಂದೆ.... (ನಂ. ೨೧೨)
ಯಾಕೆನ್ನ ಈ ರಾಜ್ಯಕ್ಕೆ ತಂದೆ (೯೨೨)

ನೀ ದಯಾಪರನೊ ನಿನ್ನವರ ಸಾಧನೆಯೊ (೬೫೯)
ನೀ ದಯಾಪರನೊ ನಿನ್ನ  ವರ ಸಾಧನೆಯೊ (೬೬೭)

ತನುವ ನಂಬಲು ಬೇಡವೊ ಜೀವವೆ (೧೨೧)
ಈ ತನುವ ನಂಬಲು ಬೇಡ ಜೀವವೆ (೪೮೮)

ಗೂಡು ಸಿಕ್ಕಲಿಲ್ಲ ಗೂಡಿನ ಜಾಡು (೪೧೨)
ಮಾಡು ಸಿಕ್ಕದಲ್ಲಾ ಮಾಡಿನ ಗೂಡು (೮೬೭)

ನಾರಾಯಣ ನಿನ್ನ ನಾಮದ ಸ್ಮರಣೆಯು (೬೧೭ ಮತ್ತು ೬೧೮)
(ಇವೆರಡೂ ಒಂದೇ ಪುಟದಲ್ಲಿ ಒಂದರ ಕೆಳಗೆ ಇನ್ನೊಂದಾಗಿ ಬಂದಿವೆ)

ಆರು ಮುನಿದರೇನು ನಮಗಿನ್ನಾರು ಒಲಿದರೇನು (೭೦)
ಆರು ಒಲಿದರೇನು ನಮಗಿನ್ನಾರು ಮುನಿದರೇನು (೬೭)

ಯಾರು ಒಲಿದರೇನು... (೯೩೫)
(ಒಂದೇ ಹಾಡು ಮೂರು ಕಡೆಗೆ ಬಂದದ್ದು)

ಮೇಲಿನ ಉದಾಹರಣೆಗಳು ಪುನರಾವರ್ತಿಯ ಪ್ರಕಾರಗಳನ್ನು ಸೂಚಿಸುತ್ತಿದ್ದು ಒಟ್ಟಿನ ಪುನರಾವರ್ತನೆಗಳನ್ನು ಎಣಿಸಹೋಗಿಲ್ಲ.

ಇನ್ನು ಅನ್ಯರ ಹಾಡುಗಳು, ಅವರವೇ ಆದ ಅಂಕಿತಗಳಲ್ಲಿ ಸೇರಿಕೊಂಡದ್ದು ಅಕಸ್ಮಾತ್ತಾಗಿ ಯಾದರೂ ಕಣ್ಣಿಗೆ ಬೀಳುತ್ತವೆ.

'ಬಂದ ದುರಿತ ವಿನಾಶನಾ... ಇಂದು ಪುರಂದರನ ದರ್ಶನ' (೭೪೩) ಮತ್ತು 'ವ್ಯಾಸಮುನಿರಾಯಾ ದಾಸರೊಳು ಪುರಂದರದಾಸರ ಮಹಿಮೆ ವರ್ಣಿಸಲಾರೆನವ್ವಾ' (೯೯೯) —ಇವುಗಳಲ್ಲಿ ಪುರಂದರದಾಸರ ಹೆಸರನ್ನು ಹೇಳಿ ವರ್ಣಿಸಿದ್ದು ಸ್ಪಷ್ಟವಾಗಿ ಇದ್ದರೂ, ಮುದ್ರಿಕೆಗಳು

ಬೇರೆಯೇ ಇದ್ದರೂ (ವಿಜಯ ವಿಠಲ; ಗುರುಪುರಂದರ ವಿಠಲ) ಪಠ್ಯಭಾಗದಲ್ಲಿಯೇ ಸೇರಿಕೊಂಡಿವೆ. ವ್ಯಾಸಮುನಿರಾಯಾ—ಎಂಬುದು ಸಂಬೋಧನೆ ಮುಂದೆ 'ವರ್ಣಿಸಲಾರೆನವ್ವಾ' ಎಂಬ ಮಾತು ಸರಿಯಾದೀತೆ?

ಬೇಸರದ ಸಂಗತಿಯೆಂದರೆ, ಪುರಂದರದಾಸರ ಜನಪ್ರಿಯತೆಯನ್ನು ಮನದಂದು ವ್ಯಾಪಾರೀ ದೃಷ್ಟಿಯಿಂದ ಪ್ರಕಟಿಸುವವರು ಮಾಡುವ ತಪ್ಪುಗಳನ್ನು ಕ್ಷಮಿಸಬಹುದು. ಇತ್ತ ದಾಸಸಾಹಿತ್ಯವನ್ನು ತಿಳಿದುಕೊಂಡವರು ಹಾಗೂ ಸಂಪಾದನ ಕಾರ್ಯದಲ್ಲಿ ಪ್ರಾಮಾಣಿಕವಾಗಿ ಪ್ರಯತ್ನಿಸಿದವರಲ್ಲಿ ತಪ್ಪುಗಳು ಕಂಡುಬಂದರೆ ಅದು ಕೂಡಾ ಕ್ಷಮ್ಯವೇ. ಆದರೆ ನಿರ್ಲಕ್ಷ್ಯದಿಂದ ಮತ್ತು ಸ್ವಂತದ ವೈಭವೀಕರಣದ ದೃಷ್ಟಿಯಿಂದ ದಾಸರ ಹಾಡುಗಳನ್ನು ಪ್ರಕಟಿಸ ಹೊರಡುವವರ ಪ್ರಯತ್ನವು ಅಕ್ಷಮ್ಯವಷ್ಟೆ ಪುರಂದರ ಸಾಹಿತ್ಯವೆಂಬುದು ಪುಷ್ಪಪರಿಮಳದ, ಫಲಭರಿತವಾದ ಉದ್ಯಾನದಂತಿದೆ; ಆದರೆ ಒಡೆಯರಿಲ್ಲ! ಯಾರೂ ಪ್ರವೇಶಿಸಬಹುದು; ಏನು ಬೇಕಾದರೂ ಕಿತ್ತಿಕೊಳ್ಳಬಹುದಾಗಿದೆ. ಈ ಪರಿಸ್ಥಿತಿ ನಿಲ್ಲಬೇಕು.

'ಈ ಪರಿಸ್ಥಿತಿ ನಿಲ್ಲಬೇಕು' ಹೌದು; ಹೀಗೆಂದು ಮೊದಲು ಯೋಚಿಸಿದವರು ಸಂಪಾದಕರಾದ ನಾವಲ್ಲ. ಪ್ರಕಾಶಕರಾದ ಶ್ರೀ ಪ್ರಕಾಶ್ ಕಂಬತ್ತಳ್ಳಿಯವರು. ಜನಸಾಮಾನ್ಯರಿಗೆ ಹಿಡಿಸುವಂಥ ಪುರಂದರರ ಕೀರ್ತನೆಗಳನ್ನು ಆಯ್ದು ಶುದ್ಧ ಪಾಠದ ಒಂದು ಸಂಗ್ರಹ ಹೊರಬರಬೇಕೆಂದು ಅವರು ಆಶಿಸಿದರು. ಈಗಲೂ ಅಂಥದೊಂದು ಹಿತಮಿತ ಗಾತ್ರದ ಸಂಕಲನವಿಲ್ಲದ್ದನ್ನು ಮನಗೊಂಡು ಒಪ್ಪಿದೆವು. ಶ್ರೀ ಸಾಮಾನ್ಯನಿಗೆ ಹಿಡಿಸುವಂಥ ಕೃತಿಗಳನ್ನು ಆರಿಸುವ ಕೆಲಸ ತುಸು ಪರಿಶ್ರಮದ್ದೇ ಆಗಿ ಪರಿಣಮಿಸಿತು. ಯಾವುದೊಂದು ಕೃತಿ-ಪುರಂದರದಾಸರದೇ ಎಂಬುದು ನಮಗೆ ಖಾತ್ರಿಯಾಗಬೇಕು. ಹೇಗೆ ಸಾಧ್ಯ? ಮೇಲ್ಕಾಣಿಸಿದ ನಾಲ್ಕೂ ಸಮಗ್ರ ಸಂಗ್ರಹಗಳಲ್ಲಿ ಎರಡು ಕಡೆಗಾದರೂ ಬಂದಿರಬೇಕು ಎಂಬ ಮಾನದಂಡವನ್ನಿಟ್ಟುಕೊಂಡೆವು. ಇನ್ನು ಶುದ್ಧ ಪಾಠದ ದೃಷ್ಟಿಯಿಂದ ನಾವು ವಿಶೇಷವಾಗಿ ನೆಚ್ಚಿದ್ದು ಬೆಟಗೇರಿ-ಬೆಂಗೇರಿ ಸಂಪುಟಗಳನ್ನು. ಏಕೆಂದರೆ ಹತ್ತಾರು ಹಸ್ತಪ್ರತಿ ಸಂಗ್ರಹಗಳನ್ನು ಮುಂದೆ ಇರಿಸಿಕೊಂಡು ಅವರು ಪಾಠನಿರ್ಣಯ ಮಾಡಿದ್ದಾರೆ. ಸಂಪಾದಕರಿಗಾಗಿ ನಾವೇ ಇಟ್ಟುಕೊಂಡ ಉದ್ದೇಶವೆಂದರೆ, ಅವರ ಕೀರ್ತನೆಗಳ ಆಶಯವನ್ನು ತಿಳಿಯಪಡಿಸಬೇಕೆನ್ನುವುದು. ಹರಿದಾಸರ ರಚನೆಗಳು ಸಂಗೀತ ಮಾತ್ರವಲ್ಲ, ಸಾಹಿತ್ಯದ ದೃಷ್ಟಿಯಿಂದ ಅಷ್ಟೇ ಮಹತ್ವಪೂರ್ಣವಾದವುಗಳು. ಅದರಲ್ಲಿಯೂ ಪುರಂದರದಾಸರು ಭಗವದ್ಭಕ್ತಿಯ ಕಡೆಗೆ ಸದಾಚಾರದತ್ತ ಜನ ತಿರುಗಬೇಕೆನ್ನುವ ಆತ್ಯಂತಿಕ ಕಳಕಳಿಯಿಂದ ಕೃತಿ ರಚಿಸಿದವರು. ಈ ಕಾರಣದಿಂದ ಪ್ರತಿಯೊಂದು ಹಾಡಿನ ಸುರುವಿಗೆ ಅದರ ಆಶಯವನ್ನು ತಿಳಿಯಪಡಿಸಿದ್ದಲ್ಲದೆ ಅಗತ್ಯವಿದ್ದಲ್ಲಿ, ಅಗತ್ಯವಿದ್ದಷ್ಟು ಮಾತ್ರ ಟಿಪ್ಪಣೆಗಳನ್ನು ಕೂಡ ಮಾಡಿದೆ. ಇದೊಂದು ಸ್ತುತ್ಯವಾದ ಹೊಸಉಪಕ್ರಮವೆಂದು ತಿಳಿದಿದ್ದೇವೆ.

ಇಲ್ಲಿಯ ೩೧೦ ಕೀರ್ತನೆಗಳಲ್ಲಿ ಬಂದಿರುವ ಮುಖ್ಯ ವಿಷಯಗಳನ್ನು ಈ ರೀತಿ ರೂಪಿಸಬಹುದು:

**೧. ಶ್ರೀಹರಿಯ ಸ್ತುತಿ**

ತಿರುಪತಿಯ ಶ್ರೀನಿವಾಸ, ದಶಾವತಾರ ವರ್ಣನೆ ಪರಮಾತ್ಮನ ಭಕ್ತವಾತ್ಸಲ್ಯ ಒಂದು ಬಗೆಯಾದರೆ ಭಕ್ತರ ದೃಷ್ಟಿಯಿಂದ ಅದರಲ್ಲಿರಬೇಕಾದ ಸರ್ವಸಮರ್ಪಣಭಾವವನ್ನೂ, ಆತ್ಮ

ನಿವೇದನೆಯನ್ನೂ ಈ ಸ್ತುತಿಪರ ರಚನೆಗಳಲ್ಲಿ ಕಾಣುತ್ತೇವೆ. ವಿಶೇಷವೆಂದರೆ ಭಗವಂತನ ಸ್ತುತಿ ವಿಚಾರವಲ್ಲಿ ದಾಸರು ಅಲ್ಲಲ್ಲಿ ತೋರಿದ ನಿಂದಾಸ್ತುತಿ ಮತ್ತು ಚತುರೋಕ್ತಿ.

**೨. ಶ್ರೀಕೃಷ್ಣಲೀಲೆ**

ಇಲ್ಲಿ ವಿಶೇಷವಾಗಿ ಇರುವುದು ಬಾಲಕೃಷ್ಣನ ಲೀಲೆಗಳು. ಪುರಂದರದಾಸರ ಈ ನಿಟ್ಟಿನ ಹಾಡುಗಳು ಮನೆಮನೆಗಳಲ್ಲಿ ಕೇಳಬರುವಂತಹವು.

**೩. ದೇವ-ದೇವಿಯರ ಸ್ತುತಿ**

ಹಾಗೆ ಸ್ತುತಿಸಲ್ಪಟ್ಟವರೆಂದರೆ ಮಹಾಲಕ್ಷ್ಮಿ, ವಾಯುದೇವರು, ಸರಸ್ವತಿ-ಭಾರತಿ ದೇವಿಯರು ರುದ್ರದೇವರು, ಶ್ರೀತುಳಸಿ ಮುಂತಾದವರು.

**೪. ಲೋಕನೀತಿ**

ಈ ವಿಷಯವು ಪುರಂದರದಾಸರಿಗೆ ಭಗವಚ್ಚಿಂತನೆಯಷ್ಟೇ ಮಹತ್ವದ್ದಾಗಿ ಕಂಡಿದೆ. ಅಂತೆಯೇ ನಮ್ಮ ಆಯ್ಕೆಯಲ್ಲಿ ಸೂರಕ್ಕೆ ಮೇಲ್ಪಟ್ಟು ಈ ಹಾಡುಗಳಿಗೆ ಇಂಬು ದೊರೆತಿದೆ. ಅವರಲ್ಲಿಯೂ ಪ್ರಾಪಂಚಿಕ ದೃಷ್ಟಿಯಿಂದ ಜನಮನಕ್ಕೆ ಹಿಡಿಸುವಂಥವುಗಳನ್ನು ಇಲ್ಲಿ ಕಾಣಬಹುದು. ಮೇಲೆ ಗಮನಿಸಿದ ನಿಂದಾಸ್ತುತಿಯು ಇವುಗಳಲ್ಲಿಯೂ ಯಥೇಚ್ಛವಾಗಿ ಬಂದಿದೆ. ಪುರಂದರದಾಸರ ಜೀವನ ಬೋಧೆಯ ಸ್ವಾರಸ್ಯ ಇರುವುದು ಇಂಥ ಚತುರೋಕ್ತಿಯಲ್ಲಿಯೇ. ಹಾಡುಗಳ ವಿಷಯವನ್ನು ಗ್ರಹಿಸುವಲ್ಲಿ ಅನುಬಂಧವಾಗಿ ಕೊಟ್ಟಿರುವ ಹನುಮಂತ, ಮುಂತಾದ ಅಂಕಿತ ನಾಮಗಳ ಪಟ್ಟಿಯೂ ನೆರವಾಗಬಲ್ಲುದು.

ಪುರಂದರದಾಸರ ಜೀವನ ವಿಚಾರ ಎಲ್ಲರಿಗೆ ತಿಳಿದದ್ದೇ ಆಗಿದೆ. ನಮ್ಮ ನಿಮ್ಮಂತೆಯೇ ಸಂಸಾರಿಯಾಗಿದ್ದು, ಐಹಿಕಸುಖ ಲೋಲುಪತೆಯಲ್ಲಿ ಅರ್ಧದಷ್ಟು ಜೀವನವನ್ನು ಸವೆಸಿದರು. ಪತ್ನಿಯ ದೈವಭಕ್ತಿಯಿಂದ ಅವರು ವೈರಾಗ್ಯದತ್ತ ತಿರುಗಿದರೆನ್ನುವುದೂ, ಅದನ್ನು ಪ್ರಾಂಜಲವಾಗಿ ಒಪ್ಪಿಕೊಂಡಿದ್ದುದೂ ಎಷ್ಟೊಂದು ಗಮ್ಯವಾದುದು! ಅವರು ನಾರದರ ಅವತಾರ ಎನ್ನುವ ನಂಬಿಕೆ ಏನೇ ಇರಲಿ, ನಾರದೀಯ ಸಂಗೀತ ಪ್ರವೃತ್ತಿ ಮಾತ್ರ ಪೂರ್ವಜನ್ಮದ ಪರಿಪಾಕವಾಗಿ ಅವರಲ್ಲಿ ವಿಜೃಂಭಿಸಿತು. ಮನೆಮನೆಗೆ ಹೋದರು, ಸಂಗೀತ ಮಾಧ್ಯಮದ ಮೂಲಕ ಭಗವದ್ಭಕ್ತಿಯನ್ನು ಉಪದೇಶಿಸಿದರು. ಪ್ರಾಯಶಃ ಅವರಿಗೆ ಅರಿವಿಲ್ಲದೆಯೇ ಕರ್ನಾಟಕ ಸಂಗೀತದ ಪಿತಾಮಹರಾಗಿ ಬಿಟ್ಟರು! ಪರಮಾತ್ಮನ ಕೃಪೆ ಇದ್ದರೆ ಏನನ್ನೂ ಸಾಧಿಸಬಹುದು; ಹಾಗೆಂದು ಅವರೇ ಹೇಳಿದ್ದಾರೆ.

ಜೊತೆಗೆ ಗುರುಕೃಪೆಯೂ ಇರಬೇಕಲ್ಲವೆ ಗುರುಗಳಾದ ಶ್ರೀ ವ್ಯಾಸರಾಯರು 'ಶಿಷ್ಯಾದಿಚ್ಛೇತ್ ಪರಾಜಯಂ' ಎಂಬ ಮನೋಭಾವದವರು. 'ದಾಸರೆಂದರೆ ಪುರಂದರದಾಸರಯ್ಯ' ಎಂದು ಖಿದ್ದಾಗಿ ಹೊಗಳಿದ ಆ ನಿಲುವು ಅಭಿಮಾನ ಪುರಸ್ಸರವಾದುದು. ಇದೇ ನಿಲುವು ಕನಕದಾಸರ ಬಗೆಗೂ ಇತ್ತೆಂಬುವನ್ನು ಪುರಂದರದಾಸರ—ಈ ಸಂಗ್ರಹದಲ್ಲಿ ಬಂದಿರುವ—ಈ ವಿಷಯದ ಹಾಡಿನಿಂದಲೇ ತಿಳಿಯಬಹುದು.

ಇಲ್ಲಿ ಬಂದಿರುವ ಬಹುತರ ಎಲ್ಲ ಹಾಡುಗಳನ್ನು ನಾವು ಈ ಹಿಂದೆ ಕೇಳಿದ್ದೆವು; ಓದಿದ್ದೆವು. ಈಗ ಅವುಗಳ ಸಂಪಾದನಾ ಕೆಲಸದ ನಿಮಿತ್ತದಿಂದ ಮತ್ತೊಮ್ಮೆ ಪರಿಶೀಲಿಸುವಾಗ ಹೊಸದೊಂದು ದರ್ಶನವೇ ನಮಗೆ ಗೋಚರವಾಯಿತು. ಔನ್ನತ್ಯ-ಲಾಲಿತ್ಯಗಳೆರಡನ್ನೂ ಮೈಗೂಡಿಸಿಕೊಂಡ ಈ

ಕೀರ್ತನೆಗಳು ಪುರಂದರದಾಸರನ್ನು ದಾಸಶ್ರೇಷ್ಠರನ್ನಾಗಿ ಮಾಡಿವೆ. ಅವರ ಕೃತಿಗಳನ್ನು ಉಪನಿಷತ್ತುಗಳಿಗೆ ಹೋಲಿಸಿದ್ದಾರೆ; ಸರಿಯೇ. ಆದರೆ ಈ ಪುನರ್‌ಪರಿಶೀಲನೆಯಲ್ಲಿ ನಮಗೆ ಅಲ್ಲಿ ಕಂಡು ಬಂದದ್ದು ಭಗವದ್ಗೀತೆಯ ಸಾದೃಶ್ಯ. 'ಮಾಮೇಕಂ ಶರಣಂ ವ್ರಜ' ಎಂದು ಶ್ರೀಕೃಷ್ಣ ಹೇಳಿದ ಭಕ್ತರ ಪಾಲಿಗೆ ಅದು ಶರಣಾಗತಿಯ ಬೀಜಮಂತ್ರ. ಪುರಂದರದಾಸರು ಈ ಸರ್ವಸಮರ್ಪಣಾ ಭಾವವನ್ನು ಒತ್ತಿ ಹೇಳಿದ್ದಾರೆ. ಶ್ರೀಕೃಷ್ಣ ಅರ್ಜುನನಿಗೆ ಹೇಳುತ್ತಾನೆ 'ತತಃ ಯುದ್ಧಾಯ ಯುಜಸ್ವ' ನಿನಗೆ 'ಕರ್ಮಣ್ಯೇವ ಅಧಿಕಾರಃ' ಅದೇ ಧರತಿಯಲ್ಲಿ ಪುರಂದರದಾಸರು "ಈಸಬೇಕು ಇದ್ದು ಜಯಿಸಬೇಕು, ಮಾನವ ಜನ್ಮದೊಡ್ಡದು" ಮುಂತಾಗಿ ಉಪದೇಶಿಸುತ್ತಾರೆ. ಇಲ್ಲಿ ಬದುಕಿನ ಬಗ್ಗೆ ನಿಷೇಧಾತ್ಮಕ ನಿಲುವು ಸರ್ವಥಾ ಇಲ್ಲ. "ಅವಶ್ಯವಾಗಿ ನಿತ್ಯ ಜೀವನದ ಎಲ್ಲ ಕಾರ್ಯ ಕೈಕೊಳ್ಳಿರಿ. ಆದರೆ ಅದು ನಶ್ವರ ಎಂಬ ಎಚ್ಚರವಿರಲಿ. ಶಾಶ್ವತವಾದ ಸುಖವೀಯುವ ಪರಮಾತ್ಮನನ್ನು ಮರೆಯದಿರಿ" ಎಂದು ಮತ್ತೆ ಮತ್ತೆ ಉಪದೇಶಿಸಿದ್ದಾರೆ. ಪುರಂದರದಾಸರ ಕೀರ್ತನೆಗಳಲ್ಲಿ ಸಾಹಿತ್ಯಿಕವಾದ ಎಲ್ಲ ಅಂಶಗಳೂ ಇವೆ. ಕಲ್ಪಕತೆ, ಉಪಮೆ ಮುಂತಾದ ಅಲಂಕಾರಗಳು ರೂಪಕಗಳು ಧ್ವನಿವಿಶೇಷತೆ ವಾಚ್ಯಾರ್ಥದ ಜೊತೆಗೆ ವ್ಯಂಗ್ಯಾರ್ಥ. ಈ ಕಾರಣದಿಂದ ಅವರ ಸಾಹಿತ್ಯವನ್ನು ಕುರಿತ ಲೇಖನಗಳು ನಾಲ್ಕು ನೂರನ್ನು ಮಿಕ್ಕಿವೆ. (ಮೊದಲ ಲೇಖನ ರೆ. ಕಿಟೆಲ್ಲರದು-೧೮೭೨ ರಲ್ಲಿ) ಪಿಎಚ್.ಡಿ. ಮಟ್ಟದ ಉದ್ಗ್ರಂಥಗಳು ರಚಿತವಾಗಿವೆ.

ಇಂಥ ಮಹಾತ್ಮರನ್ನು ಪಡೆದ ನಮ್ಮ ನಾಡು ಧನ್ಯವಾಗಿದೆ. ಅಷ್ಟೇಕೆ ವೈದಿಕ ಪರಂಪರೆಯ ಭಾರತೀಯ ಸಂತರುಗಳಲ್ಲಿ ಅವರೊಂದು ಧ್ರುವನಕ್ಷತ್ರ. ಪುರಂದರದಾಸರ ಹೆಸರು ಯಾವ ಕಾಲಕ್ಕೂ ಪುರೋಧ್ವರ್ವವಾಗಿ ಉಳಿಯುತ್ತದೆ.

ಇದರ ಸಂಪಾದನ ಕಾರ್ಯದಲ್ಲಿ ನೆರವಾದ ಒಬ್ಬರ ಹೆಸರನ್ನು ತಪ್ಪದೇ ಕಾಣಿಸಬೇಕು. ಅವರೇ ಶ್ರೀ ಎ.ಎನ್. ಅನಂತಸ್ವಾಮಿ ರಾವ್. ದಾಸ ಸಾಹಿತ್ಯವನ್ನು ಕರತಲಾಮಲಕವಾಗಿ ಮಾಡಿಕೊಂಡವರು. ಯಾವ ಕಾರಣದಿಂದ? ಲೇಖನ ಪುಸ್ತಕಗಳನ್ನು ಬರೆಯುವುದಕ್ಕಲ್ಲ, ಭಾಷಣ ಮಾಡುವುದಕ್ಕಲ್ಲ. ಸ್ವಾಂತಸ್ಸುಖಾಯ! ಅವರ ದೃಷ್ಟಿ ಹಾಗಿರಲಿ ನಾವು ಮಾತ್ರ ಧಾರಾಳವಾಗಿ ಅದರ ಪ್ರಯೋಜನವನ್ನು ಪಡೆದಿದ್ದೇವೆ. ಕೀರ್ತನೆಗಳ ಆಯ್ಕೆ, ಶುದ್ಧ ಪಾಠವನ್ನು ಗುರುತಿಸುವುದು, ಅವರ ಅಗತ್ಯವೆನಿಸಿದಾಗ ಅರ್ಥವಿಸುವಲ್ಲಿಯೂ ಅವರ ನೆರವನ್ನು ನಿಸ್ಸಂಕೋಚದಿಂದ ಪಡೆದಿರುವೆವು.

ಶ್ರೀ ಪ್ರಕಾಶ್ ಕಂಬತ್ತಳ್ಳಿ ಮತ್ತು ಅವರ ಶ್ರೀಮತಿ ಪ್ರಭಾ ಅವರು ನಮ್ಮಲ್ಲಿ ಭರವಸೆಯಿಟ್ಟು ಈ ಕೆಲಸವನ್ನು ಒಪ್ಪಿಸಿದ್ದಕ್ಕಾಗಿ ನಾವು ಕೃತಜ್ಞರಾಗಿದ್ದೇವೆ.

ಇತಿ

'ಆಶ್ರಯ' ೩೬ ವಿನಾಯಕ ಲೇಔಟ್
ವಿಜಯನಗರ III, ಬೆಂಗಳೂರು - ೪೦
(ಫೋನ್: ೩೩೮೪೫೫೨೯)

ಶ್ರೀನಿವಾಸ ಹಾವನೂರ

೧೨೩, ಬಿ. ಬಾಪೂಜಿ ನಗರ
ಮೈಸೂರು ರಸ್ತೆ
ಬೆಂಗಳೂರು- ೨೬

ಹೊ.ರಾ. ಸತ್ಯನಾರಾಯಣರಾವ್

# ಪರಿವಿಡಿ



ಆರು ಎಲ್ಲಿ ಏಕೆ ಏನು ಇವನ್ನು ಯಾರು, ಯೆಲ್ಲಿ, ಯೇಕೆ ಎಂದೂ ಉಚ್ಚರಿಸುವುದುಂಟು ಇಂಥ ಒಂದು ಶಬ್ದ ಅಕಾರದಲ್ಲಿ ಇಲ್ಲದಿದ್ದರೆ ಯಕಾರದಲ್ಲಿ ನೋಡಬೇಕಾಗಬಹುದು.

## ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ

ಸತತ ಗಣನಾಥ ಸಿದ್ಧಿಯನೀವ ಕಾರ್ಯದಲಿ
ಮತಿ ಪ್ರೇರಿಸುವಳು ಪಾರ್ವತೀದೇವಿ ಮು-
ಕುತಿ ಪಥಕೆ ಮನವೀವ ಮಹರುದ್ರದೇವರು ಭ-
ಕುತಿದಾಯಕಳು ಸಿರಿ ಭಾರತೀದೇವಿ ಯು-
ಕುತಿ ಶಾಸ್ತ್ರಗಳಲ್ಲಿ ವನಜಸಂಭವನರಸಿ
ಸತ್ಕರ್ಮಗಳ ನಡೆಸಿ ಸುಜ್ಞಾನಮತಿಯಿತ್ತು ಮತಿ-
ಪಾಲಿಸುವ ನಮ್ಮ ಪವಮಾನನು
ಚಿತ್ತದಲಿ ಆನಂದ ಸುಖವನೀವಳು ರಮಾ ಭ-
ಕುತ ಜನರೊಡೆಯ ನಮ್ಮ ಪುರಂದರವಿಟ್ಠಲನು
ಸತತ ಇವರಲಿ ನಿಂತು ಕೃತಿಯ ನಡೆಸುವನು

## ಶ್ರೀಪತಿಯು ನಮಗೆ ಸಂಪದವೀಯಲಿ

ರಾಗ: ನಟ್ಟ ತಾಳ: ಅಟ್ಟ

ಶ್ರೀಪತಿಯು ನಮಗೆ ಸಂಪದವೀಯಲಿ ಪ.

ವಾಣೀಪತಿಯು ನಮಗೆ ದೀರ್ಘಾಯು ಕೊಡಲಿ ಅ.ಪ.

ಸುರರ ಗಣವನು ಪೊರೆಯೆ ವಿಷವ ಕಂಠದಲಿಟ್ಟ
ಹರ ನಮಗೆ ಸತತ ಸಹಾಯಕನಾಗಲಿ
ನರರೊಳುನ್ನತವಾದ ಭೋಗ ಭಾಗ್ಯಂಗಳನು
ಪುರುಹೂತ ಪೂರ್ಣ ಮಾಡಿಸಲಿ ನಮಗೆ ೧

ವಿನುತ ಸಿದ್ಧಿಪ್ರದನು ವಿಘ್ನೇಶ ದಯದಿಂದ
ನೆನೆದ ಕಾರ್ಯಗಳೆಲ್ಲ ನೆರೆವೇರಲಿ
ದಿನದಿನದಿ ಅಶ್ವಿನಿಗಳಾಪತ್ತುಗಳ ಕಳೆದು
ಮನಕೆ ಹರುಷವನಿತ್ತು ಮನ್ನಿಸಲಿ ಬಿಡದೆ ೨

ನಿರುತ ಸುಜ್ಞಾನವನು ಈವ ಮಧ್ವರಾಯ
ಗುರುಗಳಾಶೀರ್ವಾದ ನಮಗಾಗಲಿ
ಪುರಂದರವಿಠಲನ ಕರುಣದಿಂದಲಿ ಸಕಲ
ಸುರರೊಲುಮೆ ನಮಗೆ ಸುಸ್ಥಿರವಾಗಲಿ ೩

# ಪುರಂದರದಾಸರ ಜನಪ್ರಿಯ ಕೀರ್ತನೆಗಳು

## ೧. ಅಂಗನೆಯರೆಲ್ಲ ನೆರೆದು ಚಪ್ಪಾಳಿಕ್ಕುತ

[ ಶ್ರೀಕೃಷ್ಣಲೀಲೆ ]

ರಾಗ: ಕಾಂಬೋದಿ ತಾಳ: ಆದಿ

ಅಂಗನೆಯರೆಲ್ಲ ನೆರೆದು ಚಪ್ಪಾಳಿಕ್ಕುತ ದಿವ್ಯ ಪ.
ಮಂಗಳ ನಾಮವ ಪಾಡಿ ರಂಗನ ಕುಣಿಸುವರು ಅ.ಪ.

ಪಾಡಿ ಮಲಹರಿ ಭೈರವಿ ಸಾರಂಗಿ ದೇಶಿ
ಗುಂಡಕ್ರಿಯ ಗುರ್ಜರಿ ಕಲ್ಯಾಣಿ ರಾಗದಿ
ತಂಡ ತಂಡದಲಿ ನೆರೆದು ರಂಗನ ಉಡಿಯ ಘಂಟೆ
ಢಂಢಣಢಣರೆಂದು ಹಿಡಿದು ಕುಣಿಸುವರು ೧

ತಿತ್ತಿರಿ ಮೌಳಿ ತಾಳ ದಂಡಿಗೆ ಮದ್ದಲೆ
ಉತ್ತಮದ ಶಂಖ ಶಬ್ದ ನಾದಗಳಿಂದ
ಸುತ್ತ ಮುತ್ತಿ ನಾರಿಯರು ಥೈ ತಥೈ ಥಾಯೆಂದು
ಆರ್ತಿಯಿಂದ ಕುಣಿಸುವರು ಪರವಸ್ತುವ ಹಿಡಿದು ೨

ಕಾಮಿನಿಯರೆಲ್ಲ ನೆರೆದು ಕಂದನೊಡನಾಟವಾಡಿ
ಪ್ರೇಮದಿಂ ಬಿಗಿ ಬಿಗಿದಪ್ಪಿ ಮುದ್ದಾಡಿ
ಕಾಮಿತ ಫಲವೀವ ಭಕುತಜನರೊಡೆಯ
ಸ್ವಾಮಿ ಶ್ರೀ ಪುರಂದರವಿಠಲರಾಯನ್ನ ೩

## ೨. ಅಂಜಿಕಿನ್ಯಾತಕಯ್ಯಾ ಸಜ್ಜನರಿಗೆ

[ ವಾಯುದೇವರು-ಅವತಾರತ್ರಯ ]

ರಾಗ: ಕಲ್ಯಾಣಿ ತಾಳ: ಅಟ್ಟ

ಅಂಜಿಕಿನ್ಯಾತಕಯ್ಯಾ ಸಜ್ಜನರಿಗೆ
ಭಯವು ಇನ್ಯಾತಕಯ್ಯಾ ಪ.

ಸಂಜೀವರಾಯರ ಸ್ಮರಣೆ ಮಾಡಿದ ಮೇಲೆ ಅ.ಪ.

ಕನಸಿಲಿ ಮನಸಿಲಿ ಕಳವಳವಾದರೆ
ಹನುಮನ ನೆನೆದರೆ ಹಾರಿಹೋಗದೆ ಭೀತಿ ೧

ರೋಮ ರೋಮಕೆ ಕೋಟಿ ಲಿಂಗವುದುರಿಸಿದ
ಭೀಮನ ನೆನೆದರೆ ಬಿಟ್ಟು ಹೋಗದೆ ಭೀತಿ ೨

ಪುರಂದರವಿಠಲನ ಪೂಜೆಯ ಮಾಡುವ
ಗುರು ಮಧ್ವರಾಯರ ಸ್ಮರಣೆ ಮಾಡಿದ ಮೇಲೆ ೩

---

ರೋಮರೋಮಕೆ ಕೋಟಿ ಲಿಂಗ: ಪುರುಷಾಮೃಗವನ್ನು ಭೀಮಸೇನನು (ಹನುಮಂತ?) ಹಸ್ತಿನಾವತಿಗೆ ತರುವಾಗ ಹನುಮಂತನ ರೋಮಗಳಿಂದ ಉದ್ಭವವಾದ ಲಿಂಗಗಳನ್ನು, ಶಿವಭಕ್ತ ಪುರುಷಾಮೃಗವು ಅವನ್ನು ಪೂಜಿಸುತ್ತ ಬರತೊಡಗುವುದು. ಹಾಗೆ ಅದು ಬಂದು ಮುಟ್ಟಿದ್ದು ಹಸ್ತಿನಾವತಿಯನ್ನು.

## ೩. ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಮುಖಾರಿ ತಾಳ: ಝಂಪೆ

ಅಂತಕನ ದೂತರಿಗೆ ಕಿಂಚಿತ್ತು ದಯವಿಲ್ಲ
ಚಿಂತೆಯನು ಬಿಟ್ಟು ಶ್ರೀಹರಿಯ ನೆನೆ ಮನವೆ ಪ.

ದಿವ ರಾತ್ರಿಯೆನ್ನದೆ ವಿಷಯಲಂಪಟನಾಗಿ
ಸವಿಯೂಟಗಳನುಂಡು ಭ್ರಮಿಸಬೇಡ
ಅವನ ಕೊಂದಿವನ ಕೊಂದರ್ಥವನು ಗಳಿಸುವೊಡೆ
ಜವನದೂತರು ಬರುವ ಹೊತ್ತ ನೀನರಿಯೆ ೧

ಮೊನ್ನೆ ಮದುವೆಯನಾದೆ ಕರೆವುದೊಂದೆರಡೆಮ್ಮೆ
ನಿನ್ನೆ ಕೊಂಡೆನು ಕ್ಷೇತ್ರ ಫಲವು ಬಹುದು

ಹೊನ್ನು ಹಣವುಂಟೆನಗೆ ಸಾಯಲಾರೆನು ಎನಲು
ಬೆನ್ನು ಬಿಡುವಳೆ ಮೃತ್ಯು ವ್ಯರ್ಥ ಜೀವಾತ್ಮಾ ೨

ಹೊಸ ಮನೆಯ ಕಟ್ಟಿದೆನು ಗೃಹಶಾಂತಿ ಮನೆಯೊಳಗೆ
ಬಸುರಿ ಹೆಂಡತಿ ಮಗನ ಮದುವೆ ನಾಳೆ
ಹಸನಾಗಿ ಇದೆ ಬದುಕು ಸಾಯಲಾರೆನು ಎನಲು
ಕುಸುರಿದರಿಯದೆ ಬಿಡರು ಯಮನವರು ಆಗ ೩

ಪುತ್ರ ಪುಟ್ಟಿದ ದಿವಸ ಹಾಲು ಊಟದ ಹಬ್ಬ
ಮತ್ತೊಬ್ಬ ಮಗನ ಉಪನಯನ ನಾಳೆ
ಅರ್ತಿಯಾಗಿದೆ ಬದುಕು ಸಾಯಲಾರೆನು ಎನಲು
ಮೃತ್ಯು ಹೆಡತಲೆಯಲ್ಲಿ ನಗುತಿರ್ಪುದರಿಯೆ ೪

ಅಟ್ಟಡಿಗೆಯುಣಲಿಲ್ಲ ಇಷ್ಟ ದರುಶನವಿಲ್ಲ
ಕೊಟ್ಟ ಸಾಲವ ಕೇಳ್ವ ಹೊತ್ತನರಿಯೆ
ಕಟ್ಲೆ ತುಂಬಿದಮೇಲೆ ಕ್ಷಣಮಾತ್ರ ಇರಲಿಲ್ಲ
ಅಷ್ಟರೊಳು ಪುರಂದರವಿಠಲನೆನು ಮನವೆ ೫

## ೪. ಅಂದಿಂದ ನಾ ನಿನ್ನ ನೆರೆ ನಂಬಿದೆನೊ ಕೃಷ್ಣ

**[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]**

**ರಾಗ: ಕಲ್ಯಾಣಿ** **ತಾಳ: ತ್ರಿವಿಡೆ**

ಅಂದಿಂದ ನಾ ನಿನ್ನ ನೆರೆ ನಂಬಿದೆನೊ ಕೃಷ್ಣ ಪ.

ತಂದೆ ಗೋವಿಂದ ಮುಕುಂದ ನಂದನ ಕಂದ ಅ.ಪ.

ಬಲವಂತನುತ್ತಾನಪಾದರಾಯನ ಕಂದ
ಬಲತಾಯಿ ನೂಕಲು ಅಡವಿಯೊಳು
ಜಲಜಾಕ್ಷ ನಿನ್ನ ಕುರಿತು ತಪವಿರಲಾಗಿ
ಒಲಿದು ಧ್ರುವಗೆ ಪಟ್ಟಗಟ್ಟಿದ್ದು ಕೇಳಿ ೧

ನಕ್ರಂಗೆ ಗಜರಾಜ ಸಿಕ್ಕು ಸರಸಿಯೊಳು
ದುಃಖದಿ ಶ್ರೀಹರಿಯೆ ಸಲಹೆನ್ನಲು
ಚಕ್ರದಿ ನೆಗಳ ಕಂಠವ ತರಿದು ಭಕ್ತನ
ವಕ್ರವ ಪರಿದಾದಿಮೂಲನೆಂಬುದ ಕೇಳಿ ೨

ದ್ರುಪದನ ಸುತೆಯ ದುಶ್ಶಾಸನ ಸಭೆಯೊಳು
ಕಪಟದಿ ಸೀರೆಯ ಸೆಳೆಯುತಿರೆ
ಸುಪರ್ಣವಾಹನ ಕೃಷ್ಣ ಸಲಹೆಂದ ಅಬಲೆಯ
ಅಪಮಾನದಿಂ ಕಾಯ್ದ ಶ್ರೀಹರಿಯೆಂಬುದ ಕೇಳಿ ೩

ಹರಿನಾರಾಯಣನೆಂದು ಪ್ರಹ್ಲಾದ ಒರೆಯಲು
ದುರುಳ ದಾನವನವನೊಳು ಮುನಿದು
ಕರೆ ನಿನ್ನ ಒಡೆಯನ ಎಂದು ಗರ್ಜಿಸೆ ನರ-
ಹರಿ ಬಂದು ಒಡನೆಯೆ ಕಾಯ್ದನೆಂಬುದ ಕೇಳಿ ೪

ಅಂಬರೀಷಗೆ ದೂರ್ವಾಸ ಶಾಪವ ಕೊಡೆ
ಅಂಬುಜಲೋಚನ ಚಕ್ರದಿಂದ
ಬೆಂಬತ್ತಿ ಮುನಿಯ ಶಾಪವ ಪರಿಹರಿಸಿದ
ಕಂಬು ಚಕ್ರಧರ ಹರಿಯೆಂಬುದ ಕೇಳಿ ೫

ಛಲ ಬೇಡ ರಾಮನ ಲಲನೆಯ ಬಿಡುಯೆಂದು
ತಲೆ ಹತ್ತರವಗೆ ಪೇಳಲು ತಮ್ಮನ
ಬಳಲಿಸಿ ಹೊರಡಿಸಲವ ನಿನ್ನ ಮೊರೆ ಹೊಗೆ
ಸಲೆ ವಿಭೀಷಣಗೆ ಲಂಕೆಯನ್ನಿತ್ತುದ ಕೇಳಿ ೬

ಸುರ ನರ ನಾಗಲೋಕದ ಭಕ್ತ ಜನರನ್ನು
ಪೊರೆಯಲೋಸುಗ ವೈಕುಂಠದಿಂದ
ಸಿರಿಸಹಿತಲೆ ಬಂದು ಶೇಷಾಚಲದಿ ನಿಂತ
ಪುರಂದರವಿಠಲ ನಿನ್ನಯ ಚರಣವ ಕಂಡು ೭

---

ಭಕ್ತವತ್ಸಲನಾದ ಭಗವಂತನು ಭಕ್ತರನ್ನು ರಕ್ಷಿಸಿದ ಹಲವು ಪ್ರಸಂಗಗಳು ಇಲ್ಲಿವೆ. ಉತ್ತಾನಪಾದ ರಾಜನ ಮಗ ಧ್ರುವ, ಇಂದ್ರದ್ಯುಮ್ನ, ದ್ರೌಪದಿ, ಪ್ರಹ್ಲಾದ, ಅಂಬರೀಷ, ವಿಭೀಷಣಾದಿಗಳ ಪ್ರಸ್ತಾಪ ಬಂದಿದೆ.

## ೫. ಅಂಬಿಗ ನಾ ನಿನ್ನ ನಂಬಿದೆ

[ ಲೋಕನೀತಿ-ಆಧ್ಯಾತ್ಮಿಕ ]

ರಾಗ: ಶಂಕರಾಭರಣ ತಾಳ: ಅಟ್ಟ

ಅಂಬಿಗ ನಾ ನಿನ್ನ ನಂಬಿದೆ ಜಗ-
ದಂಬಾರಮಣ ನಿನ್ನ ನಂಬಿದೆ ಪ.

ತುಂಬಿದ ಹರಿಗೋಲಂಬಿಗ ಅದ-
ಕೊಂಬತ್ತು ಛಿದ್ರ ನೋಡಂಬಿಗ
ಸಂಭ್ರಮದಿಂದ ನೀನಂಬಿಗ ಅದ-
ರಿಂಬು ನೋಡಿ ನಡೆಸಂಬಿಗ ೧

ಹೊಳೆಯ ಅಬ್ಬರ ನೋಡಂಬಿಗ ಅದಕೆ
ಸೆಳವು ಘನವಯ್ಯ ಅಂಬಿಗ
ಸುಳಿಯೊಳು ಮುಳುಗಿದೆ ಅಂಬಿಗ ಎನ್ನ
ಸೆಳೆದುಕೊಂಡೊಯ್ಯೋ ನೀನಂಬಿಗ ೨

ಆರು ತರೆಯ ನೋಡಂಬಿಗ ಅದು
ಮೀರಿ ಬರುತಲಿದೆ ಅಂಬಿಗ
ಯಾರಿಂದಲಾಗದು ಅಂಬಿಗ ಅದ ನಿ-
ವಾರಿಸಿ ದಾಟಿಸೊ ಅಂಬಿಗ ೩

*ಹೊತ್ತು ಹೋಯಿತು ನೋಡಂಬಿಗ, ಅಲ್ಲಿ
ಮತ್ತೈವರೀರ್ವರು ಅಂಬಿಗ
ಒತ್ತಿ ನಡೆಸು ನೋಡಿ ಅಂಬಿಗ ಎನ್ನ
ಸತ್ಯಲೋಕಕೆ ಒಯ್ಯೊ ಅಂಬಿಗ ೪

ಸತ್ತ್ವಪಥದೊಳಗಂಬಿಗ ಪರಾ-
ಭಕ್ತಿ ಹುಟ್ಟನು ಹಾಕಿ ಅಂಬಿಗ
ಮುಕ್ತಿದಾಯಕ ನಮ್ಮ ಪುರಂದರವಿಠಲ
ಮುಕ್ತಿಮಂಟಪಕೊಯ್ಯೊ ಅಂಬಿಗ ೫

---

ಸಂಸಾರದ ನೌಕೆಯನ್ನು ನಡೆಸುವ ಅಂಬಿಗನೆಂದರೆ-ಪರಮಾತ್ಮ. ಈ ರೂಪಕವನ್ನು ಮುಂದುವರಿಸಿ ಆತನು ನಮ್ಮನ್ನು ಹೇಗೆ ಪಾರು ಮಾಡುವನೆಂಬುದನ್ನು ವರ್ಣಿಸಿದ್ದಾರೆ.

ಒಂಬತ್ತು ಛಿದ್ರಗಳು: ಪಂಚೇಂದ್ರಿಯಾದಿಗಳು, ಆರು ತರೆಗಳು: ಹಸಿವು, ಬಾಯಾರಿಕೆ, ಶೋಕ, ಮೋಹ, ಮುಪ್ಪು ಮತ್ತು ಸಾವು. ಇವು ನಮ್ಮನ್ನು ಪ್ರವಾಹದಲ್ಲಿ ಕೊಚ್ಚಿಕೊಂಡು ಹೋಗುವಷ್ಟು ಪ್ರಬಲವಾದವುಗಳು. ಐವರೀರ್ವರು, ಎಂದರೆ ಐದು ಪಂಚೇಂದ್ರಿಯಗಳು ಮತ್ತು ಐದು ಕರ್ಮೇಂದ್ರಿಯಗಳು (ಕೈ, ಕಾಲು ಇತ್ಯಾದಿ.)

* ಹೊತ್ತು ಹೋಯಿತು... ಎಂಬ ನುಡಿಗೆ ಈ ಪಾಠ ಭೇದವಿದೆ:
ಹತ್ತು ಬೆಂಬಡಿಗರು ಅಂಬಿಗ ಅಲ್ಲಿ । ಒತ್ತಿ ಬರುತಲಿಹರಂಬಿಗ ॥
ಹತ್ತುವರೆತ್ತಲು ಅಂಬಿಗ ಎನ್ನ । ಎತ್ತಿಕೊಂಡು ಒಯ್ಯೋ ಅಂಬಿಗ ॥

## ೬. ಅಂಬೆಗಾಲಿಕ್ಕುತಲಿ ಬಂದ ಗೋವಿಂದ

[ ಶ್ರೀಹರಿ ಸ್ತುತಿ-ದಶಾವತಾರ ]

ರಾಗ: ಧನ್ಯಾಸಿ — ತಾಳ: ಅಟ್ಟ

ಅಂಬೆಗಾಲಿಕ್ಕುತಲಿ ಬಂದ ಗೋವಿಂದ ಪ.

ಅಂಬುಜನಾಭ ದಯದಿಂದ ಎನ್ನ ಮನೆಗೆ ಅ.ಪ.

ಜಲಚರ ಜಲವಾಸ ಧರಣಿಧರ ಮೃಗರೂಪ
ನೆಲನಳೆದು ಮೂರಡಿ ಮಾಡಿ ಬಂದ
ಕುಲನಾಶ ವನವಾಸ ನವನೀತ ಚೋರನಿವ
ಲಲನೆಯರ ವ್ರತಭಂಗ ವಾಹನತುರಂಗ ೧

ಕಣ್ಣ ಬಿಡುವನು ತನ್ನ ಬೆನ್ನ ತಗ್ಗಿಸುವನು
ಮಣ್ಣು ಕೆದರಿ ಕೋರೆ ಬಾಯ ತೆರೆದು
ಚಿಣ್ಣ ಭಾರ್ಗವ ಲಕ್ಷ್ಮಣನಣ್ಣ ಬೆಣ್ಣೆಯ ಕಳ್ಳ
ಮಾನವ ಬಿಟ್ಟು ಕುದುರೆಯನೇರಿದ ೨

ನೀರ ಪೊಕ್ಕನು ಗಿರಿಯ ನೆಗಹಿ ಧರಣಿಯ ತಂದು
ನರಮೃಗ ಬಲಿಬಂಧ ಕೊರಳುಗೊಯಿಕ
ಶರಮುರಿದೊರಳೆಳೆದು ನಿರವಾಣಿ ಹಯ ಹತ್ತಿ
ಪುರಂದರವಿಠಲ ಮನೆಗೆ ತಾ ಬಂದ ೩

---

ದಶಾವತಾರದ ಕೀರ್ತನೆಯಿದು. ವಿಶೇಷವೆಂದರೆ ಪ್ರತಿ ನುಡಿಯಲ್ಲಿ ಹತ್ತೂ ಅವತಾರಗಳ ಪ್ರಸ್ತಾಪ ಬರುತ್ತದೆ. ನೆಲನಳೆದು ಮೂರಡಿ ಮಾಡಿ - ವಾಮನಾವತಾರ. ನಿರವಾಣಿ - (ನಿರ್ವಾಣ) ಬೆತ್ತಲೆ, ಬೌದ್ಧಾವತಾರದಲ್ಲಿ.

## ೭. ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ

[ ಲೋಕನೀತಿ-ಬೋಧೆ ]

ರಾಗ: ಮೋಹನ — ತಾಳ: ಝಂಪೆ

ಅಜ್ಞಾನಿಗಳ ಕೂಡೆ ಅಧಿಕ ಸ್ನೇಹಕ್ಕಿಂತ
ಸುಜ್ಞಾನಿಗಳ ಕೂಡೆ ಜಗಳವೇ ಲೇಸು ಪ.

ಉಂಬುಡುವುದಕ್ಕಿರುವ ಅರಸನೋಲಗಕಿಂತ
ತುಂಬಿದೂರೊಳಗೆ ತಿರಿದುಂಬುವುದೆ ಲೇಸು

ಹಂಬಲಿಸಿ ಹಾಳು ಹರಟೆ ಹೊಡೆವುದಕಿಂತ
ನಂಬಿ ಹರಿದಾಸರೊಳು ಪೊಂದಿ ಹಾಡುವುದೆ ಲೇಸು ೧

ಒಡನೆ ಹಂಗಿಸುವವನ ಪಾಲೋಗರಕ್ಕಿಂತ
ಕುಡಿ ನೀರು ಕುಡಿದುಕೊಂಡಿಹುದೆ ಲೇಸು
ಬಿಡದೆ ಬಡಿದಾಡುವರ ನೆರೆಯಲಿಹುದಕ್ಕಿಂತ
ಅಡವಿಯೊಳಗಜ್ಞಾತವಾಸವೇ ಲೇಸು ೨

ಮಸೆದು ಮತ್ಸರಿಪ ಸತಿಯೊಡನೆ ಸಂಸಾರಕ್ಕಿಂತ
ಹಸನಾದ ಹಾಳು ಗುಡಿಯೆ ಲೇಸು
ಬಿಸಜಾಕ್ಷ ಪುರಂದರವಿಟ್ಠಲನ ನೆನೆನೆನೆದು
ವಸುಧೆಯೊಳು ಚಿರಕಾಲವಿರುವುದೆ ಲೇಸು ೩

## ೮. ಅನುಗಾಲವು ಚಿಂತೆ ಜೀವಕೆ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಕಾನಡ ತಾಳ: ಅಟ್ಟ

ಅನುಗಾಲವು ಚಿಂತೆ ಜೀವಕ್ಕೆ ತನ್ನ
ಮನವು ಶ್ರೀರಂಗನೊಳ್ ಮೆಚ್ಚುವ ತನಕ ಪ.

ಸತಿಯು ಇದ್ದರು ಚಿಂತೆ ಸತಿಯು ಇಲ್ಲದ ಚಿಂತೆ
ಮತಿಹೀನೆ ಸತಿಯಾದರು ಚಿಂತೆಯು
ಪೃಥಿವಿಯೊಳಗೆ ಸತಿ ಅತಿ ಚೆಲ್ವೆಯಾದರೆ
ಮಿತಿ ಮೀರೆಯಿಲ್ಲದ ಮೋಹದ ಚಿಂತೆ ೧

ಪುತ್ರರಿದ್ದರು ಚಿಂತೆ ಪುತ್ರರಿಲ್ಲದ ಚಿಂತೆ
ಅತ್ತು ಅನ್ನಕೆ ಕಾಡುವ ಚಿಂತೆಯು
ತುತ್ತಿನ ಆಸೆಗೆ ತುರುಗಳ ಕಾಯ್ದರು
ಸುತ್ತೇಳು ಕಡೆಯಿಲ್ಲದ ಚಿಂತೆಯು ೨

ಬಡವನಾದರು ಚಿಂತೆ ಬಲಿದನಾದರು ಚಿಂತೆ
ಹಿಡಿ ಹೊನ್ನು ಕೈಯೊಳಿದ್ದರು ಚಿಂತೆಯು
ಪೊಡವಿಯೊಳಗೆ ಸಿರಿ ಪುರಂದರವಿಠಲನ
ಬಿಡದೆ ಧ್ಯಾನಿಸಿದರೆ ಚಿಂತೆ ನಿಶ್ಚಿಂತೆ ೩

## ೬. ಅನುದಿನದಲಿ ಬಂದು ತನುವ ಸ್ನೇಹವ ಮಾಡಿ

[ ಲೋಕನೀತಿ-ಬೋಧೆ ]

ರಾಗ: ನಾದನಾಮಕ್ರಿಯ ತಾಳ: ಆದಿ

ಅನುದಿನದಲಿ ಬಂದು ತನುವ ಸ್ನೇಹವ ಮಾಡಿ
ಎನ್ನ ಬಿಟ್ಟು ಹೋಗುತೀಯಾ ಜೀವವೆ ಪ.

ಘನಕೋಪದಿಂದ ಬಂದು ಯಮನವರೆಳೆದೊಯ್ವಾಗ
ನಿನ್ನ ಕೂಡಿನ್ಯಾತರ ಮಾತೊ ಕಾಯವೆ ಅ.ಪ.

ಬೆಲ್ಲದ ಹೇರಿನಂತೆ ಬೇಕಾದ ಬಂಧು ಬಳಗ
ನಿಲ್ಲೊ ಮಾತ ಹೇಳುತೇನೋ ಜೀವವೆ
ನಿಲ್ಲಲೀಸದೆ ನಿನ್ನ ಯಮನವರೆಳೆದೊಯ್ವಾಗ
ಬೆಲ್ಲ ಬೇವಾಯಿತಲ್ಲೋ ಕಾಯವೆ ೧

ಸಕ್ಕರೆ ಪಾಯಸ ಸವಿದುಂಬ ಕಾಲದಲ್ಲಿ
ದಿಕ್ಕುಗೆಟ್ಟು ಹೋಗುತಿಯಾ ಜೀವವೇ
ದಕ್ಕಗೊಡದೆ ಎನ್ನ ಯಮನವರೆಳೆದೊಯ್ವಾಗ
ಸಕ್ಕರೆ ವಿಷವಾಯಿತಲ್ಲೋ ಕಾಯವೆ ೨

ಸೋರುವ ಮನೆಯಲಿ ಧ್ಯಾನ ಮೌನಾದಿಗಳು
ಬೇರಿತ್ತು ನಿನ್ನ ಮನಸು ಜೀವವೇ
ನೀರಮೇಲಣ ಗುಳ್ಳೆ ತೋರಿ ಹಾರಿದಂತೆ
ಯಾರಿಗೆ ಯಾರಿಲ್ಲ ಕಾಯವೆ ೩

ಅಂದಣದೈಶ್ವರ್ಯ ದಂಡಿಗೆ ಪಲ್ಲಕ್ಕಿ
ಮಂದಗಮನೆಯರು ಜೀವವೆ
ಮಂದಗಮನೆ ಯಾರೊ ಮಡದಿ ಮಕ್ಕಳು ಯಾರೊ
ಬಂದಂತೆ ಹೋಗುತೇನೋ ಕಾಯವೆ ೪

ಹುಟ್ಟಿದ್ದು ಹೊಲೆಯೂರು ಬೆಳೆದದ್ದು ಮೊಲೆಯೂರು
ಇಟ್ಟದ್ದು ಈ ಊರು ಎತ್ತಿದ್ದು ಕಾಡೂರು
ಸೃಷ್ಟಿಗೊಡೆಯ ನಮ್ಮ ಪುರಂದರವಿಠಲನ್ನ
ಮುಟ್ಟಿ ಭಜಿಸು ಕಂಡ್ಯ ಕಾಯವೆ ೫

## ೧೦. ಅನುಭವದಡುಗೆಯ ಮಾಡಿ

**[ ಲೋಕನೀತಿ-ಆಧ್ಯಾತ್ಮಿಕ ]**

**ರಾಗ: ನಾದನಾಮಕ್ರಿಯೆ** **ತಾಳ: ಛಾಪು**

ಅನುಭವದಡುಗೆಯ ಮಾಡಿ ಅದ–
ಕ್ಕನುಭವಿಗಳು ಬಂದು ನೀವೆಲ್ಲ ಕೂಡಿ ಪ.

ತನುವೆಂಬ ಭಾಂಡವ ತೊಳೆದು ಕೆಟ್ಟ
ಮನದ ಚಂಚಲವೆಂಬ ಮುಸುರೆಯ ಕಳೆದು
ಘನವಾಗಿ ಮನೆಯನ್ನು ಬಳಿದು ಅಲ್ಲಿ
ಮಿನುಗುವ ತ್ರಿಗುಣದ ಒಲೆಗುಂಡನೆಡೆದು ೧

ವಿರಕ್ತಿಯೆಂಬುವ ಮಡಿಯುಟ್ಟು ಪೂರ್ಣ
ಹರಿಭಕ್ತಿಯೆಂಬ ನೀರನ್ನೆಸರಿಟ್ಟು
ಅರಿವೆಂಬ ಬೆಂಕಿಯ ಕೊಟ್ಟು ಮಾಯಾ
ಮರೆವೆಂಬ ಕಾಷ್ಠವ ಮುದದಿಂದ ಸುಟ್ಟು ೨

ಶರಣೆಂಬೊ ಸಾಮಗ್ರಿ ಹೂಡಿ ಮೋಕ್ಷ
ಪರಿಕರವಾದಂಥ ಪಾಕವ ಮಾಡಿ
ಗುರು ಶರಣರು ಸವಿದಾಡಿ ನಮ್ಮ ಪುರಂ-
ದರವಿಠಲನ ಬಿಡದೆ ಕೊಂಡಾಡಿ ೩

---

ಅಧ್ಯಾತ್ಮದ ಹಿನ್ನೆಲೆಯುಳ್ಳ ಕೀರ್ತನೆ. ಅಡುಗೆ ಎಂದರೆ ಭಕ್ತನ ಅಂತರಂಗ ಸಾಧನೆಯ ಅನುಭವ. ತ್ರಿಗುಣ-ಸತ್ವ, ರಜಸ್ಸು, ತಮಸ್ಸು. ಮಾಯಾ ಮರೆವು-ಸ್ವಾತಂತ್ರ್ಯ, ಕರ್ತೃತ್ವ ಮತ್ತು ಭೋಕ್ತೃತ್ವ ಎಂಬ ಭ್ರಮೆಗಳೂ, ಹರಿವಿಸ್ಮರಣೆಯೂ 'ಮಾಯೆ' ಎನಿಸುವವು. ಇವನ್ನು ಕಾಷ್ಠದಿಂದ ಸುಟ್ಟುಹಾಕಬೇಕು.

## ೧೧. ಅನ್ಯಸತಿಯರೊಲುಮೆಗೊಲಿದು ಅಧಮಗತಿಗೆ ಬೀಳಲೇಕೆ

**[ ಲೋಕನೀತಿ-ಪ್ರಾಪಂಚಿಕ ]**

**ರಾಗ: ಪಂತುವರಾಳಿ**

**ತಾಳ: ಅಟ್ಟ**

ಅನ್ಯಸತಿಯರೊಲುಮೆಗೊಲಿದು ಅಧಮಗತಿಗೆ ಬೀಳಲೇಕೆ ಪ.
ತನ್ನ ಸತಿಯರೊಲುಮೆಗೊಲಿದು ತಾನು ಸುಖಿಸಬಾರದೆ ಅ.ಪ.

ಮಿಂದು ಮಲವನ್ನ ಬಿಡಿಸಿ ಮೇಲುವಸ್ತ್ರವ ತೊಡಿಸಿ
ಅಂದವಾದ ಆಭರಣವಿಟ್ಟು ಅರ್ತಿಯಿಂದ ನೋಡುತ
ಗಂಧ ಕಸ್ತೂರಿ ಪುನಗು ಪೂಸಿ ಗಮಕದಿಂದ ಹೂವ ಮುಡಿಸಿ
ಸಂಕ್ಷಮದಿ ಸಂತೋಷಪಡುವ ಸುಖವು ತನಗೆ ಸಾಲದೆ ೧

ಪೊಂಬಣ್ಣ ಎಸೆವ ಮೈಯದರೊಳು ಒಲಿವ ಕುಚಕ್ಕೆ ಕೈಯನಿಟ್ಟು
ಕಂಬುಕಂದರವ ನೋಡಿ ಕಸ್ತೂರಿನಿಟ್ಟು ಮುಟ್ಟಿಸುತ
ಹಂಬಲಿಸಿ ಸತಿಯ ನೋಡಿ ಹಲವು ಬಂಧದಿಂದ ಕೂಡಿ
ಸಂಕ್ಷಮದಿ ಸಂತೋಷಪಡುವ ಸುಖವು ತನಗೆ ಸಾಲದೆ ೨

ಸತಿಪತಿಯು ಏಕವಾಗಿ ಸರ್ವಜನರ ಹಿತವ ಚಿಂತಿಸಿ
ಅತಿಥಿಯನ್ನು ಪೂಜೆಮಾಡಿ ಒಂದೆನ್ನಿಸಿಕೊಳ್ಳುತ
ಕ್ಷಿತಿಯೊಳಧಿಕ ಗುರು ಪುರಂದರವಿಠಲನ್ನ ಪಾದವನು ಸ್ಮರಿಸಿ
ಸತಿಸುತರು ಹಿತರು ನೀವು ಸುಖದಿಂದ ಆಳಿರೋ ೩

## ೧೨. ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಪೀಲು ತಾಳ: ಮಿಶ್ರಛಾಪು

ಅಪರಾಧಿ ನಾನಲ್ಲ ಅಪರಾಧವೆನಗಿಲ್ಲ
ಕಪಟನಾಟಕ ಸೂತ್ರಧಾರಿ ನೀನೆ ಪ.

ನೀನೆ ಆಡಿಸದಿರಲು ಜಡ ಒನಕೆಯ ಬೊಂಬೆ
ಏನು ಮಾಡಲು ಬಹುದು ತಾನೆ ಬೇರೆ
ನೀನಿಟ್ಟ ಸೂತ್ರದಿಂದಲುಗೆ ಕೈಕಾಲುಗಳು
ನೀನೆ ಮುಗ್ಗಿಸಲು ಮುಗ್ಗುವ ದೇಹ ತಾನಾಗೆ ೧

ಒಂದೆಂಟು ಬಾಗಿಲದ ಪಟ್ಟಣಕೆ ತನ-
ಗೆಂದು ಇಪ್ಪತ್ತಾರು ಮನೆಯಾಳ್ಗಳ
ತಂದು ಕಾವಲ ನಿಲಿಸಿ ಎನ್ನ ನೀ ಒಳಗಿಟ್ಟು
ಮುಂದೆ ಭವಭವದಿ ಭವಣೆಪುದಾವನ್ಯಾಯ ೨

ಯಂತ್ರವಾಹಕ ನೀನೆ ಒಳಗಿದ್ದು ಎನ್ನ ಸ್ವ-
ತಂತ್ರನೆಂದೆನಿಸಿ ಕೊಲಿಸುವರೆ ಹೇಳೋ
ಕಂತುಪಿತ ಲಕ್ಷ್ಮೀಶ ಎಂತಾದಡಂತಹುದ-
ನಂತಮೂರುತಿ ಪುರಂದರವಿಠಲ ೩

## ೧೩. ಅಪಾಯಕೋಟಿಗಳಿಗೆ ಉಪಾಯ ಒಂದೇ

[ ಶ್ರೀಹರಿ ಸ್ತುತಿ - ನಾಮಸ್ಮರಣೆ ]

ಅಪಾಯಕೋಟಿಗಳಿಗೆ ಉಪಾಯ ಒಂದೇ
ಹರಿಭಕ್ತರು ತೋರಿಕೊಟ್ಟ ಉಪಾಯ ಒಂದೇ
ಪುರಂದರವಿಠಲನೆಂದು ಭೋರಿಟ್ಟು
ಕರೆವ ಉಪಾಯವೊಂದೇ

## ೧೪. ಅಮ್ಮಾ ನಿಮ್ಮ ಮನೆಗಳಲ್ಲಿ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ಸೌರಾಷ್ಟ್ರ ತಾಳ: ಆದಿ

ಅಮ್ಮಾ ನಿಮ್ಮ ಮನೆಗಳಲ್ಲಿ
ನಮ್ಮ ರಂಗನ ಕಂಡಿರೇನೆ ಪ.

ಕಾಶಿ ಪೀತಾಂಬರ ಕೈಯಲ್ಲಿ ಕೊಳಲು
ಪೂಸಿದ ಶ್ರೀಗಂಧ ಮೈಯೊಳಗಮ್ಮ
ಲೇಸಾಗಿ ತುಲಸಿಯ ಮಾಲೆಯ ಹಾಕಿದ
ವಾಸುದೇವನು ಬಂದ ಕಂಡಿರೇನೆ ೧

ಕರದಲ್ಲಿ ಕಂಕಣ ಬೆರಳಲ್ಲಿ ಉಂಗುರ
ಕೊರಳಲ್ಲಿ ಹಾಕಿದ ಹುಲಿಯುಗುರಮ್ಮ
ಅರಳೆಲೆ ಕನಕದ ಕುಂಡಲ ಕಾಲಂದಿಗೆ
ಉರಗಶಯನ ಬಂದ ಕಂಡಿರೇನೆ ೨

ಕಾಲಲಿ ಕಿರುಗೆಜ್ಜೆ ನೀಲದ ಬಾವುಲಿ
ನೀಲವರ್ಣನು ನಾಟ್ಯವಾಡುತಲಿ
ಮೇಲಾಗಿ ಬಾಯಲ್ಲಿ ಜಗವನು ತೋರಿದ
ಮೂಲೋಕದೊಡೆಯನ ಕಂಡಿರೇನೆ ೩

ಕುಂಕುಮ ಕಸ್ತೂರಿ ಕುಡಿಕುಡಿ ನಾಮವು
ಶಂಖಚಕ್ರಂಗಳ ಧರಿಸಿಹನಮ್ಮ
ಬಿಂಕದಿಂದಲಿ ಕೊಳಲೂದುತ ಪಾಡುತ
ಪಂಕಜಾಕ್ಷನು ಬಂದ ಕಂಡಿರೇನೆ ೪

ಹದಿನಾರುಸಾವಿರ ಗೋಪಿಯರೊಡಗೂಡಿ
ಚದುರಂಗ ಪಗಡೆಯನಾಡುವನಮ್ಮ
ಮದನ ಮೋಹನರೂಪ ಎದೆಯಲಿ ಕೌಸ್ತುಭ
ಪದುಮನಾಭನು ಬಂದ ಕಂಡಿರೇನೆ ೫

*ನೊಸಲ ಸುತ್ತಿದ ಪಟ್ಟಿ ನಡುವಿನ ವಡ್ಯಾಣ
ಎಸೆವ ಕಸ್ತೂರಿ ಬಟ್ಟು ಮೈಯವನಮ್ಮ
ಪಸರಿಸಿ ಪಟ್ಟೆಯ ಹಾವಿಗೆ ಮೆಟ್ಟಿದ
ಅಸುರಾಂತಕ ಬಂದ ಕಂಡಿರೇನೆ ೬

ತೆತ್ತೀಸಕೋಟಿ ದೇವರ್ಕಳ ಒಡಗೂಡಿ
ಹತ್ತವತಾರವನೆತ್ತಿದನೆ
ಭಕ್ತವತ್ಸಲ ನಮ್ಮ ಪುರಂದರವಿಠಲ
ನಿತ್ಯೋತ್ಸವ ಬಂದ ಕಂಡಿರೇನೆ ೭

---

* ನೊಸಲ ಸುತ್ತಿದ... ಎಂಬ ನುಡಿಗೆ ಬೇರೊಂದು ನುಡಿ ಇದೆ.
ಮಾವನ ಮಡುಹಿದ ಶಕಟನ ಕೆಡಹಿದ ಗೋವರ್ಧನಗಿರಿ ಎತ್ತಿದನಮ್ಮಾ ।
ಆವ ತಾಯಿಗೆ ಈರೇಳು ಜಗ ತೋರಿದ ಕಾವನಯ್ಯ ಬಂದ ಕಾಣಿರೇನೇ॥

## ೧೫. ಅಲ್ಲಿದೆ ನಮ್ಮ ಮನೆ

[ ಲೋಕನೀತಿ-ಬೋಧೆ ]

ರಾಗ: ಪೂರ್ವಿ ತಾಳ: ಅಟ್ಟ

ಅಲ್ಲಿದೆ ನಮ್ಮ ಮನೆ ಇಲ್ಲಿ ಬಂದೆ ಸುಮ್ಮನೆ ಪ.

ಕದ ಬಾಗಿಲಿರಿಸಿಹ ಕಳ್ಳ ಮನೆ ಇದು
ಮುದದಿಂದಲೋಲ್ಯಾಡೊ ಸುಳ್ಳು ಮನೆ
ಇದಿರಾಗಿ ವೈಕುಂಠ ವಾಸ ಮಾಡುವಂಥ
ಪದುಮನಾಭನ ದಿವ್ಯ ಬದುಕು ಮನೆ ೧

ಮಾಳಿಗೆ ಮನೆಯೆಂದು ನೆಚ್ಚಿ ಕೆಡಲುಬೇಡ
ಕೇಳಯ್ಯ ಹರಿಕಥೆ ಶ್ರವಣಂಗಳ
ನಾಳೆ ಯಮದೂತರು ಬಂದೆಳೆದೊಯ್ವಾಗ
ಮಾಳಿಗೆ ಮನೆ ಸಂಗಡ ಬಾರದಯ್ಯ ೨

ಮಡದಿ ಮಕ್ಕಳೆಂಬ ಹಂಬಲ ನಿನಗೇಕೊ
ಕಡು ಗೊಬ್ಬುತನದಲಿ ನಡೆಯದಿರು
ಒಡೆಯ ಶ್ರೀ ಪುರಂದರವಿಠಲನ ಚರಣವ
ದೃಢ ಭಕ್ತಿಯಲಿ ನೀ ಭಜಿಸಿಕೊ ಮನುಜ ೩

---

ಮನೆಯೆಂಬುದು ನೆಮ್ಮದಿಯ ಸ್ಥಾನ. ನಿಜವಾದ ನೆಮ್ಮದಿ ಸಿಗುವ ಮನೆ ಇಲ್ಲಿಲ್ಲ. ಹರಿಸನ್ನಿಧಿಯಲ್ಲಿ. ಹೀಗೇ ಈ ಭೂಮಿಯ ಮೇಲೆ ಹುಟ್ಟಿ ಬಂದೆವು. ಇದ್ದಷ್ಟು ಕಾಲ ಶ್ರೀಹರಿಯನ್ನು ಭಜಿಸಬೇಕು. ಗೊಬ್ಬುತನ-ಸೊಕ್ಕು.

## ೧೬. ಅಳುವದ್ಯಾತಕೊ ರಂಗ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ಹಿಂದೂಸ್ಥಾನಿ ಕಾಪಿ ತಾಳ: ಆದಿ

ಅಳುವದ್ಯಾತಕೊ ರಂಗ ಅತ್ತರಂಜಿಪ ಗುಮ್ಮ ಪ.

ಪುಟ್ಟಿದೇಳು ದಿವಸದಲಿ ದುಷ್ಟ ಪೂತನಿಯ ಕೊಂದೆ
ಮುಟ್ಟಿ ವಿಷದ ಮೊಲೆಯುಂಡ ಕಾರಣ
ದೃಷ್ಟಿ ತಾಕಿತೆ ನಿನಗೆ ರಂಗಯ್ಯ ೧

ಬಾಲಕತನದಿ ಗೋಪಾಲಕರೊಡಗೂಡಿ
ಕಾಳಿಂದಿ ಮಡುವನು ಕಲಕಿದ ಕಾರಣ
ಕಾಲು ಉಳುಕಿತೆ ನಿನಗೆ ರಂಗಯ್ಯ ೨

ತುರುವ ಕಾಯಲು ಪೋಗೆ ಭರದಿ ಇಂದ್ರ ಮಳೆಗರೆಯೆ
ಬೆರಳಲಿ ಬೆಟ್ಟವನೆತ್ತಿದ ಕಾರಣ
ಬೆರಳು ಉಳುಕಿತೆ ನಿನಗೆ ರಂಗಯ್ಯ ೩

ವಸುದೇವ ಸುತನಾಗಿ ಅಸುರರೆಲ್ಲರ ಮಡುಹಿ
ಹೆಸರಿನ ಮಲ್ಲರ ಮಡುಹಿದ ಕಾರಣ
ಕಿಸರು ತಾಕಿತೆ ನಿನಗೆ ರಂಗಯ್ಯ ೪

ಶರಣು ವೇಲಾಪುರದ ಚೆಲುವ ಚೆನ್ನಿಗರಾಯ
ಪರಿಪರಿ ವಿಧದಿಂದ ಶರಣರ ಪೊರೆಯುವ
ವರದ ಪುರಂದರವಿಟ್ಠಲರಾಯ ೫

---

ಬಾಲಕೃಷ್ಣನ ವಿರೋಧಾಭಾಸದ ಲೀಲೆಗಳನ್ನು ವರ್ಣಿಸುವಲ್ಲಿ ಬೇಲೂರಿನ ಚೆನ್ನಕೇಶವನು ನಿಮಿತ್ತನಾಗಿದ್ದಾನೆ.
ಕಿಸುರು-ಕೆಟ್ಟ ದೃಷ್ಟಿ

## ೧೭. ಆಚಾರವಿಲ್ಲದ ನಾಲಿಗೆ

[ ಲೋಕನೀತಿ-ಬೋಧೆ ]

**ರಾಗ: ಮೋಹನ** **ತಾಳ: ಅಟ್ಟ**

ಆಚಾರವಿಲ್ಲದ ನಾಲಿಗೆ ನಿನ್ನ
ನೀಚ ಬುದ್ಧಿಯ ಬಿಡು ನಾಲಿಗೆ ಪ.

ವಿಚಾರವಿಲ್ಲದೆ ಪರರ ದೂಷಿಪುದಕ್ಕೆ
ಚಾಚಿಕೊಂಡಿರುವಂಥ ನಾಲಿಗೆ ಅ.ಪ.

ಪ್ರಾತಃಕಾಲದೊಳೆದ್ದು ನಾಲಿಗೆ ಸಿರಿ-
ಪತಿಯೆನ್ನಬಾರದೆ ನಾಲಿಗೆ
ಪತಿತ ಪಾವನ ನಮ್ಮ ರತಿಪತಿ ಜನಕನ
ಸತತವು ನುಡಿ ಕಂಡ್ಯ ನಾಲಿಗೆ ೧

ಚಾಡಿ ಹೇಳಲಿಬೇಡ ನಾಲಿಗೆ ನಿನ್ನ
ಬೇಡಿಕೊಂಬುವೆನು ನಾಲಿಗೆ
ರೂಢಿಗೊಡೆಯ ಶ್ರೀರಾಮನ ನಾಮವ
ಪಾಡುತಲಿರು ಕಂಡ್ಯ ನಾಲಿಗೆ ೨

ಹರಿಯ ಸ್ಮರಣೆ ಮಾಡು ನಾಲಿಗೆ ನರ-
ಹರಿಯ ಭಜಿಸು ಕಂಡ್ಯ ನಾಲಿಗೆ
ವರದ ಪುರಂದರವಿಟ್ಠಲರಾಯನ
ಚರಣಕಮಲವ ನೆನೆ ನಾಲಿಗೆ ೩

## ೧೮. ಆಡಹೋಗಲು ಬೇಡವೋ

[ ಶ್ರೀಕೃಷ್ಣಲೀಲೆ-ದಶಾವತಾರ ]

ರಾಗ: ಪಂತುವರಾಳಿ ತಾಳ: ಆದಿ

ಆಡಹೋಗಲು ಬೇಡವೋ ರಂಗಯ್ಯ
ಬೇಡಿಕೊಂಬೆನೊ ನಿನ್ನ ಪ.

ಗಾಡಿಗಾತಿಯರ ಕೂಡಾಡಿ ಕೆಡಲು ಬೇಡ
ಕಾಡುವರೊ ನಿನ್ನನು ಮುಕುಂದ ಅ.ಪ.

ನೀರೊಳು ಮುಳುಗೆಂಬರೋ ಬೆನ್ನಿನ ಮೇಲೆ
ಭಾರವ ಹೊರಿಸುವರೋ
ಕೋರೆದಾಡೆಯ ಮುದ್ದಾಡಿ ಸೋಲಿಸುವರೋ
ಕರುಳಹಾರ ಕೊರಳ ನೆಂಬರೋ ೧

ಪುಟ್ಟ ರೂಪನೆಂಬರೋ ಅಣ್ಣಯ್ಯ
ಕೊಡಲಿ ಪಿಡಿದನೆಂಬರೋ
ಹಣೆಗಣ್ಣ ರುದ್ರನ ವರವುಳ್ಳ ದಶ-
ಕಂಠನ ಕೊಂದವ ನೆಂಬರೋ ೨

ಬೆಣ್ಣೆ ಕಳ್ಳನೆಂಬರೋ ಹೆಂಗಳನೆಲ್ಲ
ಭಂಗ ಮಾಡಿದ ನೆಂಬರೋ
ಪುಟ್ಟ ಕುದುರೆಯನೇರಿ ಕಲ್ಕಿ ರೂಪನಾಗಿ
ಪುರಂದರವಿಠಲ ಬಾ ಎಂಬರೋ ೩

---

ದಶಾವತಾರಗಳ ಪ್ರಸ್ತಾಪವಿರುವ ಹಾಡು. ಅದಕ್ಕೆ ಕಾರಣರು-ಗಾಡಿಕಾತಿಯರು-ಅರ್ಥಾತ್ ಭಕ್ತರು. ಇತ್ತ ಯಶೋದೆಗೆ ಮಗು ಎನ್ನುವ ಮಮತೆಯಿಂದ ಇದೆಲ್ಲ ಅಸಾಧ್ಯ ಎನಿಸುತ್ತದೆ. ಆ ಹತ್ತು ಅವತಾರಗಳು ಇಂತಿವೆ: ಮತ್ಸ್ಯಾವತಾರ - ಸೋಮಕನೆಬ ರಾಕ್ಷಸನು ವೇದಗಳನ್ನು ಅಪಹರಿಸಿ ಪ್ರಳಯಜಲದಲ್ಲಿ ಅಡಗಿರಲು ಮತ್ಸ್ಯರೂಪಿಯಾಗಿ ವೇದಗಳನ್ನು ಮರಳಿ ತಂದನು. ಕೂರ್ಮಾವತಾರ - ಅಮೃತ ಮಂಥನ ಕಾಲದಲ್ಲಿ ಮಂದರ ಪರ್ವತವು ಕುಸಿಯುತ್ತಿದ್ದಾಗ ಕೂರ್ಮರೂಪಿಯಾಗಿ ಅದನ್ನು ಎತ್ತಿಹಿಡಿದದ್ದು. ವರಾಹವತಾರ - ಹಿರಣ್ಯಾಕ್ಷನು ಭೂಮಿಯನ್ನು ಅಪಹರಿಸಿ ಒಯ್ಯುತ್ತಿದ್ದಾಗ, ವರಾಹ ರೂಪಿಯಾಗಿ ತನ್ನ ಕೋರೆದಾಡಿಗಳಿಂದ ಭೂಮಿಯನ್ನು ಮರಳಿ ತಂದನು. ವಾಮನಾವತಾರ - ಬಲಿಚಕ್ರವರ್ತಿಯ ಬಳಿ ವಾಮನ ಮೂರ್ತಿಯಾಗಿ ಬಂದು ಮೂರು ಪಾದ ಭೂಮಿಯನ್ನು ಕೇಳಿದ ಪ್ರಸಂಗ. ಪರಶುರಾಮಾವತಾರ - ಕ್ಷತ್ರಿಯ ಕುಲವನ್ನು ಸಂಹರಿಸಿದ ಸಂದರ್ಭ. ರಾಮಾವತಾರ ಮತ್ತು ಕೃಷ್ಣಾವತಾರಗಳು ಪರಿಚಿತವಾದವುಗಳೇ. ಬೌದ್ಧಾವತಾರ - ತ್ರಿಪುರಾಸುರ ಪತ್ನಿಯರ ಪಾತಿವ್ರತ್ಯಕ್ಕೆ ಭಂಗತರಲೆಂದು ಬೆತ್ತಲೆಯಾಗಿ ನಿಂತದ್ದು. ಕಲ್ಕ್ಯಾವತಾರ - ಈ ಅವತಾರದಲ್ಲಿ ವಿಷ್ಣುವು ಈ ಕಲಿಯುಗದಲ್ಲಿ ಕುದುರೆಯೇರಿ ಬರುವನೆಂದು ಭಾಗವತದಲ್ಲಿ ಹೇಳಿದೆ.

## ೧೯. ಆಡ ಹೋಗೋಣ ಬಾರೊ ರಂಗ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ಬಹಾಗ್ ತಾಳ: ರೂಪಕ

ಆಡ ಹೋಗೋಣ ಬಾರೊ ರಂಗ
ಓಡಿ ಹೋಗಲು ಬೇಡೊ ಕೃಷ್ಣ ಪ.

ಅಣ್ಣೆಕಲ್ಲು ಗೋಲಿ ಗಜುಗ
ಚಿಣ್ಣಕೋಲು ಚೆಂಡು ಬುಗುರಿ
ಕಣ್ಣುಮುಚ್ಚಾಲೆ ಹಲವು ಕೂಟ
ಬಣ್ಣದಾಟಗಳನೆಲ್ಲ ೧

ಸೋಲು-ಗೆಲುವಿಗೆಲ್ಲ ನೀನು
ಬಾಲಕರೊಳು ಕೂಡಿಕೊಂಡು
ಮೇಲೆ ಮಮತೆಯಿಂದೆ ಸಾನು-
ಕೂಲವಾಗಿ ನಡಸುವಂತೆ ೨

ಪುಟ್ಟ ಪುಟ್ಟ ಕೊಳಲು ಕಂಬಳಿ
ಕಟ್ಟಿ ಬುತ್ತಿ ಕೈಯಲಿ ಕೋಲು
ದಿಟ್ಟ ಚೆಲುವನಾದ ಪುರಂದರ
ವಿಟ್ಠಲ ಗೋವಳರ ರಾಯ ೩

## ೨೦. ಆಡಿದನೋ ರಂಗ ಅದ್ಭುತದಿಂದಲಿ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ಆರಭಿ ತಾಳ: ಆದಿ

ಆಡಿದನೋ ರಂಗ ಅದ್ಭುತದಿಂದಲಿ ಕಾಳಿಂಗನ ಫಣೆಯಲಿ ಪ.

ಪಾಡಿದವರಿಗೆ ಬೇಡಿದ ವರಗಳ
ನೀಡುತಲಿ ದಯಮಾಡುತಲಿ ನಲಿ-
ದಾಡುತಲಿ ಬೆಣ್ಣೆ ಬೇಡುತಲಿ ಕೃಷ್ಣ ಅ.ಪ.

ಅಂಬುರುಹೋದ್ಭವ ಅಖಿಳ ಸುರರು ಕೂಡಿ
ಅಂಬರದಲಿ ನಿಂತವರು ಸ್ತುತಿಸೆ
ರಂಭೆ ಊರ್ವಶಿ ರಮಣಿಯರೆಲ್ಲರು
ಚಂದದಿಂ ಭರತನಾಟ್ಯವ ನಟಿಸೆ
ಝುಂತಟ ತಕಧಿಮಿ ತಧಿಗಣ ತೋಂ ಎಂದು
ಝುಂಪೆತಾಳದಿ ತುಂಬುರನೊಪ್ಪಿಸೆ

ಧಾಮಪಪದಸರೀ ಎಂದು ಧ್ವನಿಯಿಂದ
ನಾರದ ತುಂಬುರರ್ಗಾನವ ಮಾಡಲು
ನಂದಿಯು ಚಂದದಿ ಮದ್ದಲೆ ಹಾಕಲು ೧

ಫಣೆಯ ಮೆಟ್ಟಿ ಬಾಲವ ಕೈಯಲಿ ಪಿಡಿದು
ಫಣಫಣೆಸುತ ನಾಟ್ಯವನಾಡೆ
ಚಂದ್ರಮಂಡಲದಂತೆ ಪೊಳೆಯುವ ಮುಖದೊಳು
ಚಲಿಸುವ ನೀಲಕೇಶಗಳಾಡೆ
ಕಾಲಲಂದಿಗೆ ಗೆಜ್ಜೆ ಘಲು ಘಲು
ಘಲುರೆನುತ ಉಡುಗೆಜ್ಜೆ ಘಂಟೆಗಳಾಡೆ

ದುಷ್ಟ ಕಾಳಿಂಗನ ಮೆಟ್ಟಿ ಭರದಿಂದ
ಪುಟ್ಟ ಪಾದವ ಇಟ್ಟು ಶ್ರೀಕೃಷ್ಣನು
ಮೆಟ್ಟಿದ ತದ್ಧಿಮಿ ತಧಿಗಣತೋಂ ಎಂದು ೨

ಸುರರು ಪುಷ್ಪದ ವೃಷ್ಟಿಯ ಕರೆಯಲು
ಸುದತಿಯರೆಲ್ಲರು ಪಾಡಲು
ನಾಗಕನ್ನಿಕೆಯರು ನಾಥನ ಬೇಡಲು
ನಾನಾ ವಿಧದಿ ಸ್ತುತಿಮಾಡಲು
ರಕ್ಕಸರೆಲ್ಲರು ಕಕ್ಕಸವನೆ ಕಂಡು
ದಿಕ್ಕು ದಿಕ್ಕುಗಳಿಗೆ ಓಡಲು

ಚಿಕ್ಕವನಿವನಲ್ಲ ಪುರಂದರವಿಟ್ಠಲ
ವೆಂಕಟರಮಣನ ಬೇಗ ಯಶೋದೆ
ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ೩

---

ನೃತ್ಯರೂಪಕವಾಗಿ ಪ್ರದರ್ಶಿಸಬಹುದಾದ ಕೀರ್ತನೆ. ಕಕ್ಕಸ-ಕರ್ಕಶ

## ೨೧. ಆದದ್ದೆಲ್ಲ ಒಳಿತೇ ಆಯಿತು

**[ ಪತ್ನಿ ಸರಸ್ವತಿ ]**

ರಾಗ: ಪಂತುವರಾಳಿ ತಾಳ: ಆದಿ

ಆದದ್ದೆಲ್ಲ ಒಳಿತೇ ಆಯಿತು ನಮ್ಮ ಪ.

ಶ್ರೀಧರನ ಸೇವೆ ಮಾಡಲು ಸಾಧನ ಸಂಪತ್ತಾಯಿತು ಅ.ಪ.

ದಂಡಿಗೆ ಬೆತ್ತ ಹಿಡಿಯುವುದಕ್ಕೆ
ಮಂಡೆ ಬಾಗಿ ನಾಚುತಲಿದ್ದೆ
ಹೆಂಡತಿ ಸಂತತಿ ಸಾವಿರವಾಗಲಿ
ದಂಡಿಗೆ ಬೆತ್ತ ಹಿಡಿಸಿದಳಯ್ಯ ೧

ಗೋಪಾಳ ಬುಟ್ಟಿ ಹಿಡಿಯುವುದಕ್ಕೆ
ಭೂಪತಿಯೆಂದು ಗರ್ವಿಸುತ್ತಿದ್ದೆ
ಆ ಪತ್ನೀಕುಲ ಸಾವಿರವಾಗಲಿ
ಗೋಪಾಳ ಬುಟ್ಟಿ ಹಿಡಿಸಿದಳಯ್ಯ ೨

ತುಳಸೀ ಮಾಲೆ ಹಾಕುವುದಕ್ಕೆ
ಅರಸನೆಂದು ತಿರುಗುತಲಿದ್ದೆ
ಸರಸಿಜಾಕ್ಷ ಪುರಂದರವಿಠಲನು
ತುಳಸೀಮಾಲೆ ಹಾಕಿಸಿದನು ೩

---

ತಮ್ಮ ಪತ್ನಿ ಸರಸ್ವತಿದೇವಿಯಿಂದಾಗಿ ತಮ್ಮಲ್ಲಿ ವೈರಾಗ್ಯಭಾವ ಮೂಡಿತೆಂದು ದಾಸರು ಪ್ರಾಂಜಲವಾಗಿ ಒಪ್ಪಿಕೊಂಡಿದ್ದಾರೆ. ಮಹಿಳೆಗೆ ಅವರು ಸಲ್ಲಿಸಿರುವ ಗೌರವದ ದ್ಯೋತಕವೂ ಹೌದು.

## ೨೨. ಆರ ಹಾರೈಸಿದರೇನುಂಟು

[ ಲೋಕನೀತಿ-ಬೋಧೆ ]

ರಾಗ: ಮಧ್ಯಮಾವತಿ ತಾಳ: ಆದಿ

ಆರ ಹಾರೈಸಿದರೇನುಂಟು ಬರಿ
ನೀರ ಕಡೆದರಲ್ಲೇನುಂಟು? ಪ.

ಅಂತರವರಿಯದ ಅಧಮನ ಬಾಗಿಲ
ನಿಂತು ಕಾಯ್ದರಲ್ಲೇನುಂಟು
ಇಂತೆರದಲ್ಲಿಯು ಬಳಲಿಸಿ ತಾ ಯಮ-
ನಂತೆ ಕೊಲುವರಲ್ಲೇನುಂಟು? ೧

ಕೊಟ್ಟೆ-ಕೊಟ್ಟೆನೆಂದು ಕೊಡದುಪಚಾರವ
ಭ್ರಷ್ಟನ ಸೇರಿದರೇನುಂಟು
ಬಿಟ್ಟಿಯ ಮಾಡಿಸಿ ಬೆದರಿಸಿ ಬಿಡುವ ಕ-
ನಿಷ್ಠನ ಸೇರಿದರೇನುಂಟು? ೨

ಪಿಸುಣನ ಕುದುರೆಯ ಮುಂದೋಡಲು ಬಲು
ಬಿಸಿಲಿನ ಹಣ್ಣಲ್ಲದೇನುಂಟು
ವಸುಧೆಯೊಳಗೆ ಪುರಂದರವಿಠಲನನು ಭ-
ಜಿಸಲು ಮುಕ್ತಿಸಾಧನವುಂಟು ೩

## ೨೩. ಆರಿಗೆ ವಧುವಾದೆ ಅಂಬುಜಾಕ್ಷಿ

[ ಶ್ರೀಹರಿ ಸ್ತುತಿ-ಚತುರೋಕ್ತಿ ]

ರಾಗ: ಕಲ್ಯಾಣಿ — ತಾಳ: ಆದಿ

ಆರಿಗೆ ವಧುವಾದೆ ಅಂಬುಜಾಕ್ಷಿ
ಕ್ಷೀರಾಬ್ಧಿಕನ್ನಿಕೆ ಶ್ರೀ ಮಹಾಲಕುಮಿ ಪ.

ಶರಧಿಬಂಧನ ರಾಮಚಂದ್ರ ಮೂರುತಿಗೋ
ಪರಮಾತ್ಮ ಸಿರಿಯನಂತಪದ್ಮನಾಭನಿಗೋ
ಸರಸಿಜನಾಭ ಜನಾರ್ದನ ಮೂರುತಿಗೋ
ಎರಡು ಹೊಳೆಯ ರಂಗಪಟ್ಟಣವಾಸಗೋ ೧

ಚೆಲುವ ಬೇಲೂರ ಚೆನ್ನಿಗರಾಯನಿಗೋ
ಕೆಳದಿ ಹೇಳುಡುಪಿನ ಕೃಷ್ಣರಾಯನಿಗೋ
ಇಳೆಯೊಳು ಪಂಢರಪುರನಿಲಯ ವಿಠಲೇಶಗೋ
ನಳಿನಾಕ್ಷಿ ಹೇಳು ಬದರಿ ನಾರಾಯಣಗೋ ೨

ಮಲಯಜಗಂಧಿ ಬಿಂದುಮಾಧವ ರಾಯಗೋ
ಸುಲಭದ ವರ ಪುರುಷೋತ್ತಮನಿಗೋ
ಫಲದಾಯಕ ನಿತ್ಯಮಂಗಳನಾಯಕಗೋ
ಚೆಲುವೆ ನಾಚದೆ ಪೇಳು ಶ್ರೀವೆಂಕಟೇಶಗೋ ೩

ವಾಸವಾರ್ಚಿತ ಕಂಚಿ ವರದರಾಜ ಮೂರುತಿಗೋ
ಅಸುರಾರಿ ಶ್ರೀಮುಷ್ಣದಾದಿ ವರಹನಿಗೋ
ಶೇಷಶಾಯಿಯಾದ ಶ್ರೀರಂಗನಾಯಕಗೋ
ಸಾಸಿರನಾಮದೊಡೆಯ ಅಳಗಿರಿಯೀಶಗೋ ೪

ಶರಣಾಗತರ ಪೊರೆವ ಶಾರ್ಙ್ಗಪಾಣಿಗೋ
ವರಗಳನೀವ ಶ್ರೀನಿವಾಸಮೂರುತಿಗೋ
ಕುರುಕುಲಾಂತಕ ರಾಜಗೋಪಾಲ ಮೂರುತಿಗೋ
ಸ್ಥಿರವಾದ ಪುರಂದರವಿಠಲರಾಯನಿಗೋ ೫

---

ಎರಡು ಹೊಳೆಯ ರಂಗಪಟ್ಟಣ - ಕಾವೇರಿ ನದಿಯ ಶ್ರೀರಂಗಪಟ್ಟಣ. ಶ್ರೀಮುಷ್ಣ ಎಂಬಲ್ಲಿ ವರಾಹದೇವರ ಅಪರೂಪದ ಗುಡಿ ಇದೆ.

## ೨೪. ಆರಿದ್ದರೇನಯ್ಯ ನೀನಿಲ್ಲದೆ

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ಕಾಂಬೋದಿ — ತಾಳ: ಝಂಪೆ

ಆರಿದ್ದರೇನಯ್ಯ ನೀನಿಲ್ಲದೆ ಪ.

ಕಾರುಣ್ಯನಿಧಿ ಹರಿಯೆ ಕೈಯ ಬಿಡಬೇಡ ಅ.ಪ.

ಮರುಳ ಕೌರವನಂದು ದ್ರುಪದಜೆಯ ಸೀರೆಯನು
ಕರಗಳಿಂ ಸೆಳೆಯುತಿರೆ ಪತಿಗಳೆಲ್ಲ
ಗರ ಹೊಡೆದರಂತಿರ್ದರಲ್ಲದೆ ನರಹರಿಯೆ
ಕರುಣಿ ನೀನಲ್ಲದಿನ್ನಾರು ಕಾಯ್ದವರು ೧

ಅಂದು ನೆಗಳಿನ ಬಾಧೆಯಿಂದ ಗಜ ಕೂಗಲು
ತಂದೆ ನೀ ವೈಕುಂಠದಿಂದ ಬಂದು
ಇಂದಿರೇಶನೆ ಚಕ್ರದಿಂದ ನಕ್ರನ ಬಾಯ
ಸಂದಿಯನು ಸೀಳಿ ಕೃಪೆಯಿಂದ ಸಲಹಿದೆಯೊ ೨

ಅಜಮಿಳನು ಕುಲಗೆಡಲು ಕಾಲದೂತರು ಬಂದು
ನಿಜಸುತನ ಕರೆಯೆ ನೀನತಿವೇಗದಿ
ತ್ರಿಜಗದೊಡೆಯನೆ ಸಿರಿ ಪುರಂದರವಿಟ್ಠಲ
ನಿಜದೂತರನು ಕಳುಹಿ ಕಾಯ್ದೆ ಶ್ರೀಹರಿಯೆ ೩

## ೨೫. ಆರು ಬದುಕಿದರಯ್ಯ ಹರಿ ನಿನ್ನ ನಂಬಿ

[ ಶ್ರೀಹರಿ ಸ್ತುತಿ-ನಿಂದಾಸ್ತುತಿ ]

ರಾಗ: ಕಾಂಬೋದಿ — ತಾಳ: ಝಂಪೆ

ಆರು ಬದುಕಿದರಯ್ಯ ಹರಿ ನಿನ್ನ ನಂಬಿ ಪ.

ತೋರು ಈ ಜಗದೊಳಗೆ ಒಬ್ಬರನು ಕಾಣೆ ಅ.ಪ.

ಕರಪತ್ರದಿಂದ ತಾಮ್ರಧ್ವಜನ ತಂದೆಯ
ಕೊರಳ ಕೊಯಿಸಿದೆ ನೀನು ಕುಂದಿಲ್ಲದೆ
ಮರುಳನಂದದಿ ಪೋಗಿ ಭೃಗುಮುನಿಯ ಕಣ್ಣೊಡೆದೆ
ಅರಿತು ತ್ರಿಪುರಾಸುರನ ಹೆಂಡಿರನು ಬೆರೆದೆ ೧

ಕಲಹ ಬಾರದ ಮುನ್ನ ಕರ್ಣನನು ನೀ ಕೊಂದೆ
ಸುಲಭದಲಿ ಕೌರವರ ಮನೆಯ ಮುರಿದೆ
ನೆಲವ ಬೇಡುತ ಹೋಗಿ ಬಲಿಯ ತನುವನು ತುಳಿದೆ
ಮೊಲೆಯನುಣಿಸಲು ಬಂದ ಪೂತನಿಯ ಕೊಂದೆ ೨

ತಿರಿದುಂಬ ದಾಸರ ಕೈಲಿ ಕಪ್ಪವ ಕೊಂಬೆ
ಗರುಡವಾಹನ ನಿನ್ನ ಚರಿಯವರಿಯೆ
ದೊರೆ ಪುರಂದರವಿಠಲ ನಿನ್ನನ್ನು ನಂಬಿದರೆ
ತಿರುಪೆಯೂ ಹುಟ್ಟಲೊಲ್ಲದು ಕೇಳೊ ಹರಿಯೆ ೩

---

ಇಲ್ಲಿಯ ನಿಂದಾಸ್ತುತಿಯಲ್ಲಿ, ಮಣಿಪುರದ ತಾಮ್ರಧ್ವಜನ ತಂದೆ ಮಯೂರ ಧ್ವಜ ಪ್ರಸಂಗ - ಭೃಗುಮುನಿಯ ಅಂಗಾಲಿನ ಕಣ್ಣನ್ನು ಒಡೆದದ್ದು. ಅದರಂತೆ ಕರ್ಣ, ಕೌರವರ, ನಿರ್ನಾಮ. ಮುಂತಾದ ದುಷ್ಟಶಿಕ್ಷೆಯ ಅಂಶಗಳಿವೆ. (ವಿವರಗಳಿಗೆ ಪುರಾಣನಾಮ ಚೂಡಾಮಣಿ ನೋಡಬಹುದು.) ತಿರಿದುಂಬದಾಸರ ಕೈಲಿ ಕಪ್ಪವ ಕೊಂಬೆ. ತಿರುಪತಿಗೆ ಯಾರೇ ಹೋಗಲಿ ವೆಂಕಪ್ಪನಿಗೆ ಕಾಣಿಕೆ ಸಲ್ಲಿಸಬೇಕಲ್ಲವೆ!

## ೨೬. ಆರು ಹಿತವರು ನಿನಗೆ

**[ ಲೋಕನೀತಿ–ಪ್ರಾಪಂಚಿಕ ]**

**ರಾಗ: ಕಾಂಬೋದಿ** **ತಾಳ: ಝಂಪೆ**

ಆರು ಹಿತವರು ನಿನಗೆ ಮೂರು ಮಂದಿಯೊಳಗೆ ಪ.

ನಾರಿಯೋ ಧಾರುಣಿಯೋ ಬಲು ಧನದ ಸಿರಿಯೋ ಅ.ಪ.

ಅನ್ಯರಲಿ ಜನಿಸಿರ್ದ ಅಂಗನೆಯ ಕರೆತಂದು
ತನ್ನ ಮನೆಗವಳ ಯಜಮಾನಿ ಎನಿಸಿ
ಭಿನ್ನವಿಲ್ಲದೆ ಅರ್ಧದೇಹವೆನಿಸುವ ಸತಿಯು
ಕಣ್ಣಿನಲಿ ನೋಡಲಮ್ಮಳು ಕಾಲವಶದಿ ೧

ಮುನ್ನ ಶತಕೋಟಿ ರಾಯರುಗಳಾಳಿದ ನೆಲನ
ತನ್ನದೆಂದೆನುತ ಶಾಸನವ ಬರೆಸಿ
ಬಿನ್ನಣದ ಮನೆಕಟ್ಟಿ ಕೋಟೆ ಕೊತ್ತಳವಿಕ್ಕಿ
ಚೆನ್ನಿಗನು ಅಸುವಳಿಯೆ ಹೊರಗೆ ಹಾಕುವರು ೨

ಉದ್ಯೋಗ ವ್ಯವಹಾರ ನೃಪಸೇವೆ ಕುಶಲಗತಿ
ಕ್ಷುದ್ರತನ ಕಳವು ಪರದ್ರೋಹದಿಂದ
ಬುದ್ಧಿಯಿಂದಲಿ ಗಳಿಸಿ ಇಟ್ಟಿದ್ದ ಅರ್ಥವನು
ಸದ್ಯದಲಿ ಆರುಂಬುವರು ಪೇಳೊ ಮನುಜ ೩

ಶೋಕವನು ಗೈಯುವರು ಸತಿಸುತರು ಬಾಂಧವರು
ಜೋಕೆ ತಪ್ಪಿದ ಬಳಿಕ ಅರ್ಥ ವ್ಯರ್ಥ
ಲೋಕದೊಳು ಗಳಿಸಿರ್ದ ಪುಣ್ಯಪಾಪಗಳೆರಡು
ಸಾಕಾರವಾಗಿ ಸಂಗಡ ಬಾಹೊವಲ್ಲದೆ ೪

ಅಸ್ಥಿರದ ದೇಹವನು ನೆಚ್ಚಿ ನೀ ಕೆಡಬೇಡ
ಸ್ವಸ್ಥದಲಿ ನೆನೆ ಕಂಡ್ಯ ಪರಮಾತ್ಮನ
ಚಿತ್ತದೊಳು ಶುದ್ಧಿಯಿಂ ಪುರಂದರವಿಠಲನೆ
ಉತ್ತಮೋತ್ತಮನೆಂದು ಸುಖಿಯಾಗೊ ಮನುಜ ೫

## ೨೭. ಆರೇನು ಮಾಡುವರು ಅವನಿಯೊಳಗೆ

[ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ]

ರಾಗ: ಕಾಂಬೋದಿ

ತಾಳ: ಝಂಪೆ

ಆರೇನು ಮಾಡುವರು ಅವನಿಯೊಳಗೆ ಪ.

ಪೂರ್ವಜನ್ಮದ ಕರ್ಮ ಹಣೆಯಲ್ಲಿ ಬರೆದುದಕೆ ಅ.ಪ.

ಮಾಡಿದಡುಗೆಯು ಕೆಡಲು ಮನೆಯ ಗಂಡನು ಬಿಡಲು
ಕೂಡಿದ್ದ ಸತಿ ತಾನು ಕುಣಸ್ಯಾಡಲು
ಗೋಡೆಗೆ ಬರೆದ ಹುಲಿ ಘುಡಿಘುಡಿಸಿ ತಿನಬರಲು
ಆಡದಾ ಮಾತುಗಳ ಅಖಿಳರೂ ನಿಜವೆನಲು ೧

ಹೊಲ ಬೇಲಿ ಮೆದ್ದರೆ ಮೊಲವೆದ್ದು ಇರಿವರೆ
ತಲೆಗೆ ತನ್ ಕೈಪೆಟ್ಟು ತಾಕಿದರೆ
ಹೆಳಲು ಹಾವಾದರೆ ಗೆಳೆಯ ರಿಪುವಾದರೆ
ಕಲಸಿಟ್ಟ ಅವಲಕ್ಕಿ ಕಲಪರಟಿ ನುಂಗಿದರೆ ೨

ಹೆತ್ತಾಯಿ ಮಕ್ಕಳಿಗೆ ಹಿಡಿದು ವಿಷ ಹಾಕಿದರೆ
ಮತ್ತೆ ತಂದೆಯು ಹೊರಗೆ ಮಾರಿದರೆ
ತೊತ್ತು ಅರಸಿಗೆ ಪ್ರತಿ ಉತ್ತರವನಾಡಿದರೆ
ಕತ್ತಲೆಯು ಬೆನ್ನಟ್ಟಿ ಕರಡ್ಯಾಗಿ ಕಚ್ಚಿದರೆ ೩

ಕಣ್ಣಿನೊಳಗಿನ ಬೊಂಬೆ ಕಚ್ಚಾಡ ಬಂದರೆ
ಹೆಣ್ಣಿನ ಹೋರಾಟ ಹೆಚ್ಚಾದರೆ
ಅನ್ನ ಉಣ್ಣದೆ ಬಹಳ ಅಜೀರ್ಣವಾದರೆ
ಪುಣ್ಯ ತೀರ್ಥಗಳಲ್ಲಿ ಪಾಪ ಘಟಿಸಿದರೆ ೪

ಏರಿ ಕುಳಿತ ಕೊಂಬೆ ಎರಡಾಗಿ ಮುರಿದರೆ
ಮೇರೆ ತಪ್ಪಿ ಉದಧಿ ಮೆರೆದರೆ
ಆರಿದ್ದ ಇದ್ದಲಿಯು ಅಗ್ನಿಯಾಗುರಿದರೆ
ಧೀರ ಪುರಂದರವಿಠಲ ನಿನ್ನ ದಯ ತಪ್ಪಿದರೆ ೫

---

ಬಮಕಿನಲ್ಲಿ ವೈರುಧ್ಯಗಳು-ಒಂದು ಹೋಗಿ ಇನ್ನೊಂದಾಗುವುದು-ಅದರಂತೆ, ಅಘಟಿತ ಪ್ರಸಂಗಗಳು ತುಂಬಾ ಕಂಡುಬರುತ್ತವೆ. ಅದರಿಂದ ಕಷ್ಟನಷ್ಟಗಳನ್ನು ಎದುರಿಸಬೇಕಾಗುವುದು. ಇದರಲ್ಲಿಯ ಪ್ರತಿಯೊಂದು ಸಾಲಿನಲ್ಲಿ ಬರುವ ವಿರೋಧೀ ದೃಷ್ಟಾಂತಗಳು ಮನನೀಯವಾಗಿವೆ.

## ೨೮. ಆವನಾವನು ಕಾಯ್ವ ಅವನಿಯೊಳಗೆ

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ಕಾಂಬೋದಿ ತಾಳ: ರೂಪಕ

ಆವನಾವನು ಕಾಯ್ವ ಅವನಿಯೊಳಗೆ ಪ.
ಜೀವರಿಗೆ ಧಾತೃ ಶ್ರೀಹರಿ ಅಲ್ಲದೆ ಅ.ಪ.

ಆವ ತಂದೆಗಳು ಸಲಹಿದರು ಪ್ರಹ್ಲಾದನ್ನ
ಆವ ತಾಯಿಗಳು ಸಲಹಿದರು ಧ್ರುವನ್ನ
ಆವ ಸೋದರರು ಈಡೇರಿಸಿದರು ವಿಭೀಷಣನ್ನ
ಜೀವರಿಗೆ ಧಾತೃ ಶ್ರೀಹರಿಯಲ್ಲದೆ ೧

ಆವ ಬಂಧುಗಳು ಸಲಹಿದರು ಗಜರಾಜನ್ನ
ಆವ ಪತಿಯಾದ ದ್ರೌಪದಿ ಕಾಲಕ್ಕೆ
ಆವಾವ ಸಖನಾದ ಪಾಂಡವರ ಸಮಯಕ್ಕೆ
ಜೀವರಿಗೆ ಧಾತೃ ಶ್ರೀಹರಿಯಲ್ಲದೆ ೨

ಆವನಾಧಾರ ಅಡವಿಯೊಳಗಿದ್ದ ಮೃಗಗಳಿಗೆ
ಆವ ಪೋಷಕ ಗರ್ಭದಾ ಶಿಶುವಿಗೆ
ಆವ ಪಾಲಿಪ ಪಶು ಪಕ್ಷಿ ಮುಖ್ಯ ಜೀವರಿಗೆ
ದೇವ ಶ್ರೀಪುರಂದರವಿಟ್ಠಲನಲ್ಲದೆ ೩

## ೨೯. ಇಂಥಾ ಹೆಣ್ಣಿನ ನಾನೆಲ್ಲಿ ಕಾಣೆನು

[ಶ್ರೀಹರಿ ಸ್ತುತಿ-ಮೋಹಿನಿರೂಪ (ನಿಂದಾಸ್ತುತಿ)]

ರಾಗ: ಭೈರವಿ ತಾಳ: ಅಟ್ಟ

ಇಂಥಾ ಹೆಣ್ಣಿನ ನಾನೆಲ್ಲಿ ಕಾಣೆನು ಹೊಂತಕಾರಿ ಕಾಣಿರೊ ಪ.

ಸಂತತ ಸುರರಿಗೆ ಪೀಯೂಷ ಉಣಿಸಿದ
ಪಂಕ್ತಿಯೊಳಗೆ ಪರವಂಚನೆ ಮಾಡಿದ ಅ.ಪ.

ಮಂದರಗಿರಿ ತಂದು ಸಿಂಧುವಿನೊಳಗಿಟ್ಟು
ಚಂದದಿ ಕಡೆದು ಅಮೃತವ ತೆಗೆದು
ಇಂದುಮುಖಿ ನೀ ಬಡಿಸೆಂದು ಕೊಟ್ಟರೆ
ದಂಧನಗಳ ಮಾಡಿ ದೈತ್ಯರ ವಂಚಿಸಿದ ೧

ವಿಶ್ವಾಸದಿಂದಲಿ ಅಸುರಗೆ ವರವಿತ್ತು
ತ್ರಿಶೂಲಧರ ಓಡಿ ಬಳಲುತಿರೆ
ನಸುನಗುತಲಿ ಬಂದು ಭಸ್ಮಾಸುರಗೆ ಭೋಗ-
ದಾಸೆಯ ತೋರಿ ಭಸ್ಮವ ಮಾಡಿದ ೨

ವಸುಧೆಯೊಳಗೆ ಹೆಣ್ಣು ಒಸಗೆಯಾಗದ ಮುನ್ನ
ಬಸಿರಲಿ ಬ್ರಹ್ಮನ ಪಡೆದವಳಿವಳು
ಕುಸುಮನಾಭ ಶ್ರೀ ಪುರಂದರವಿಠಲನ
ಹೆಸರು ಪೊತ್ತಿಹಳು ಈ ಹೊಸ ಕನ್ನಿಕೆ ೩

---

ಶ್ರೀಹರಿಯ ಸ್ತ್ರೀ (ಮೋಹಿನಿ) ರೂಪದ ಮೂರು ಘಟನೆಗಳಿವೆ. ಒಂದು, ಸಮುದ್ರ ಮಥನದ ಕಾಲಕ್ಕೆ ಅಮೃತವನ್ನು ಹಂಚಿದುದು-ದೇವತೆಗಳಿಗೆ ಮಾತ್ರ; ಎರಡನೆಯದು ಭಸ್ಮಾಸುರನಿಂದ ಶಿವನನ್ನು ರಕ್ಷಿಸಲು ಶ್ರೀಹರಿಯು ಮೋಹಿನಿಯಾಗಿ ಕಾಣಿಸಿಕೊಂಡು ಅವನನ್ನು ಸಾವಿಗೆ ನೂಕಿದುದು. ಮೂರನೆಯದು, ಬ್ರಹ್ಮನು ವಿಷ್ಣುವಿನ ನಾಭಿಯಿಂದ ಜನಿಸಿದ್ದರ ಅರ್ಥ, ಅದು ಸುಂದರ ಸ್ತ್ರೀಯ-ಮೋಹಿನಿಯ, ಅವತಾರವೇ (ಈ ಕಥೆಗಳ ಪೂರ್ಣ ವಿವರಗಳಿಗಾಗಿ ಪುರಾಣನಾಮಚೂಡಾಮಣಿಯನ್ನು ನೋಡಬಹುದು)

## ೩೦. ಇಂದಿನ ವಾರ ಶುಭವಾರ

[ ಶ್ರೀಹರಿ ಸ್ತುತಿ-ನಾಮಮಹಿಮೆ ]

ಇಂದಿನ ವಾರ ಶುಭವಾರ ಇಂದಿನ ದಿನ ಶುಭದಿನವು
ಇಂದಿನ ತಾರೆ ಶುಭತಾರೆ ಇಂದಿನ ಯೋಗ ಶುಭ ಯೋಗ
ಇಂದಿನ ಕರಣ ಶುಭಕರಣ ಇಂದಿನ ಲಗ್ನ ಶುಭಲಗ್ನ
ಇಂದು ಪುರಂದರವಿಠಲರಾಯನ ಪಾಡಿದ ದಿನವೆ ಶುಭದಿನವು

## ೩೧. ಇಂದು ನಾನೇನು ಸುಕೃತವ ಮಾಡಿದೆನೋ

[ ತಿರುಪತಿಯ ಶ್ರೀನಿವಾಸ ]

ರಾಗ: ಮಾಧ್ಯಮಾವತಿ ತಾಳ: ಆದಿ

ಇಂದು ನಾನೇನು ಸುಕೃತವ ಮಾಡಿದೆನೋ ಪ.
ಮಂಗಳ ಮಹಿಮ ವೇಂಕಟ ಬಂದ ಮನೆಗೆ ಅ.ಪ.

ಹಾರಕೇಯೂರ ಹೊನ್ನುಂಗುರ ಬೆರಳು
ಹಾಗದ ನಡುವೆ ಹಾಕಿದವೇಳು ಪದಕ
ತೋರಮುತ್ತಿನ ಕಂಠಮಾಲೆ ಸರಿಗೆಯು ಕೋ-
ನೇರಿವಾಸ ವೇಂಕಟ ಬಂದ ಮನೆಗೆ ೧

ಕಾಲಪೆಂಡಿಗೆಯು ರಕ್ಕಸರ ಹಾವಿಗೆಯು
ಮೇಲಾದ ವಜ್ರನವರತ್ನದ ಮಕುಟ
ವೀಳ್ಯದ ಬಾಯಿ ಕರ್ಪೂರದ ಕರಡಿಗೆಯು
ಮೇಲುಗಿರಿವಾಸ ವೇಂಕಟ ಬಂದ ಮನೆಗೆ ೨

ಬಿಗಿದು ಸುತ್ತಿದ ವಲ್ಲಿ ಬಿಡಿಮುತ್ತಿನ ಕಂಠಿ
ಬಿಗಿ ಮುಗುಳುನಗೆ ದಂತ ಎಸೆವಂಥ ಪಚ್ಚೆ
ತೆಗೆದುಟ್ಟ ಪೀತಾಂಬರ ಉಡುಗೆ ಕಠಾರಿ
ಯದುಗಿರಿವಾಸ ವೇಂಕಟ ಬಂದ ಮನೆಗೆ ೩

ನೊಸಲ ಸುತ್ತಿದ ಪಟ್ಟೆ ಎಸೆವೊ ಕಸ್ತುರಿಯು
ವಶವಾದ ಅಮೃತದ ರಸ ಸವಿಮಾತು
ಎಸಳುಕಂಗಳ ನೋಟ ಹೊಸ ಪಂಚಬಾಣ
ಸುಕುಮಾರ ಸೊಬಗು ವೇಂಕಟ ಬಂದ ಮನೆಗೆ ೪

ಕಲಿಯುಗದಲಿ ಶಂಖಚಕ್ರವ ಧರಿಸಿ
ಹದಿನಾಲ್ಕುಲೋಕ ತನ್ನುದರದಲ್ಲಿಟ್ಟು
ಗರುಡನ ಏರಿ ಮೂಜಗವ ಮೋಹಿಸುವ
ಪುರಂದರವಿಠಲ ವೇಂಕಟ ಬಂದ ಮನೆಗೆ ೫

## ೩೨. ಇಂದು ನಿನ್ನ ಮರೆಯ ಹೊಕ್ಕೆ ವೆಂಕಟೇಶನೆ

[ ತಿರುಪತಿಯ ಶ್ರೀನಿವಾಸ ]

ರಾಗ: ಖರಹರಪ್ರಿಯ ತಾಳ: ಮಟ್ಟ

ಇಂದು ನಿನ್ನ ಮರೆಯ ಹೊಕ್ಕೆ ವೆಂಕಟೇಶನೆ
ಎಂದಿಗಾದರೆನ್ನ ಕಾಯೊ ಶ್ರೀನಿವಾಸನೆ ಪ.

ಶೇಷಗಿರಿಯವಾಸ ಶ್ರೀಶ ದೋಷರಹಿತನೆ
ಏಸು ದಿನಕು ನಿನ್ನ ಪಾದದಾಸನು ನಾನೆ
ಕ್ಲೇಶಗೈಸದಿರು ಎನ್ನ ಸ್ವಾಮಿಯು ನೀನೆ ೧

ಕಮಲನಯನ ಕಾಮಜನಕ ಕರುಣವಾರಿಧೇ
ರಮೆಯನಾಳ್ವ ಕಮಲನಾಭ ಹೇ ದಯಾನಿಧೇ
ಯಮನ ಪುರದಿ ಶಿಕ್ಷಿಸದಿರು ಪಾರ್ಥಸಾರಥೇ ೨

ಉರಗಶಯನ ಸುರರಿಗೊಡೆಯ ಸಿರಿಯರಮಣನೆ
ಶರಣಪಾಲ ಬಿರುದು ತೋರಿ ಪೊರೆವ ದೇವನೆ
ಕರುಣಿಸೆನಗೆ ಮುಕುತಿಯ ಪುರಂದರವಿಠಲನೆ ೩

## ೩೩. ಇಕ್ಕಲಾರೆ ಕೈ ಎಂಜಲು

ರಾಗ: ಪೂರ್ವಿ [ ಶ್ರೀಹರಿ ಸ್ತುತಿ ] ತಾಳ: ಅಟ್ಟ

ಇಕ್ಕಲಾರೆ ಕೈ ಎಂಜಲು ಚಿಕ್ಕ ಪ.
ಮಕ್ಕಳು ಅಳುತಾರೆ ಹೋಗೋ ದಾಸಯ್ಯ ಅ.ಪ.

ಮಡಕೆ ತೊಳೆಯುತೇನೆ ಮನೆಯ ಸಾರಿಸುತೇನೆ
ಹುಡುಗರೊಬ್ಬರ ಕಾಣೆ ಹೋಗೊ ದಾಸಯ್ಯ
ತೊಡೆಯ ಮೇಲಿನ ಕೂಸು ಮೊಲೆಯನುಣ್ಣುತಲಿದೆ
ಹುಡುಗಾಟ ಮಾಡದೆ ಹೋಗೊ ದಾಸಯ್ಯ ೧

ಅಟ್ಟದ ಮೇಲಿನ ಅಕ್ಕಿ ತೆಗೆಯಬೇಕು
ಹೊಟ್ಟೆ ನೋಯುತಲಿದೆ ಹೋಗೊ ದಾಸಯ್ಯ
ಮುಟ್ಟಾಗಿ ಇದ್ದೇನೆ ಮನೆಯೊಳಗಾರಿಲ್ಲ
ನಿಷ್ಠೂರ ಮಾಡದೆ ಹೋಗೊ ದಾಸಯ್ಯ ೨

ವೀಸದ ಕಾಸಿಗೆ ದವಸವ ನಾ ತಂದೆ
ಕೂಸಿಗೆ ಸಾಲದು ಹೋಗೊ ದಾಸಯ್ಯ
ಆಸೆಕಾರ ನೀನು ದೋಷಕಾರಿ ನಾನು
ಶೇಷಾಚಲವಾಸ ಪುರಂದರವಿಠಲ ೩

---

ಸಂಸಾರದಲ್ಲಿ ಸಂಪೂರ್ಣವಾಗಿ ಮುಳುಗಿದಾಗ ದಾಸರು ಬಂದರೆ ಒಂದಿನಿತು ನೀಡಲು ಮನಸ್ಸಾಗುವುದಿಲ್ಲ. ಅಂಥ ಒಬ್ಬ ಗೃಹಿಣಿಯ ಮನೋವೃತ್ತಿಯನ್ನು ವಿವರಿಸಿದ್ದಾರೆ. ವೀಸ ಎನ್ನುವುದು ಒಂದು ಚಿಕ್ಕ ಮೌಲ್ಯದ ನಾಣ್ಯ.

## ೩೪. ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ

[ ಲೋಕನೀತಿ-ಬೋಧೆ ]

ರಾಗ: ಕಾಂಬೋದಿ ತಾಳ: ಅಟ್ಟ

ಇದು ಭಾಗ್ಯ ಇದು ಭಾಗ್ಯ ಇದು ಭಾಗ್ಯವಯ್ಯ ಪ.
ಪದುಮನಾಭನ ಪಾದಭಜನೆ ಸುಖವಯ್ಯ ಅ.ಪ.

ಕಲ್ಲಾಗಿ ಇರಬೇಕು ಕಠಿಣ ಭವತೊರೆಯೊಳಗೆ
ಬಿಲ್ಲಾಗಿ ಇರಬೇಕು ಬಲ್ಲವರೊಳು

ಮೆಲ್ಲನೇ ಮಾಧವನ ಮನದಿ ಮೆಚ್ಚಿಸಬೇಕು
ಬೆಲ್ಲವಾಗಿರಬೇಕು ಬಂಧುಜನರೊಳಗೆ ೧

ಬುದ್ಧಿಯಲಿ ತನುಮನವ ತಿದ್ದಿಕೊಳುತಿರಬೇಕು
ಮುದ್ದಾಗಿ ಇರಬೇಕು ಮುನಿ ಯೋಗಿಗಳಿಗೆ
ಮಧ್ವ ಮತಾಬ್ಧಿಯಲಿ ಮೀನಾಗಿ ಇರಬೇಕು
ಶುದ್ಧನಾಗಿರಬೇಕು ಕರಣತ್ರಯಂಗಳಲಿ ೨

ವಿಷಯಭೋಗದ ತೃಣಕೆ ಉರಿಯಾಗಿ ಇರಬೇಕು
ನಿಶಿ ಹಗಲು ಶ್ರೀಹರಿಯ ಭಜಿಸಬೇಕು
ವಸುಧೆಯೊಳು ಪುರಂದರವಿಠಲನ ನಾಮವ
ಹಸನಾಗಿ ನೆನೆನೆನೆದು ಸುಖಿಯಾಗಬೇಕು ೩

## ೩೫. ಇದೇ ಸಮಯ ರಂಗ ಬಾರೆಲೊ

[ ಶ್ರೀಹರಿ ಸ್ತುತಿ ]

ರಾಗ: ಸೌರಾಷ್ಟ್ರ ತಾಳ: ಆದಿ

ಇದೇ ಸಮಯ ರಂಗ ಬಾರೆಲೊ
ಇದೇ ಸಮಯ ಕೃಷ್ಣ ಬಾರೆಲೊ ಪ

ಅತ್ತಿಗೆ ಲಕ್ಷಬತ್ತಿ ಶೀಲಳೋ
ಅಷ್ಟು ಆಗದೆ ಅವಳೇಳಳೋ
ಅತ್ತೆ ಪುರಾಣದಿ ಲೋಲಳೊ ಸರಿ
ಹೊತ್ತಿನ ವೇಳೆಗೆ ಬರುವಳೊ ೧

ಮಾವ ಎನ್ನಲಿ ಅವಿಶ್ವಾಸಿಯೊ ಮ-
ದುವೆಯಾದ ಗಂಡ ಉದಾಸಿಯೊ
ಭಾವನು ಎನ್ನ ಸೇರ ಹೇಸಿಯೊ ನೀ-
ನೀವೇಳೆಗೆ ಬಂದರೆ ವಾಸಿಯೊ ೨

ತಂದೆ ತಾಯ ಆಸೆ ಮಾಡೆನೊ ಎನ್ನ
ಕಂದನ ಮೇಲೆ ಮನಸಿಡೆನೊ
ಮಂದರಧರ ಪುರಂದರವಿಠಲ ನೀ
ಬಂದರೆ ಚರಣಸೇವೆ ಮಾಳ್ಪೆನೊ ೩

## ೩೬. ಇನ್ನಾದರೂ ಹರಿಯ ನೆನೆ

[ ಲೋಕನೀತಿ - ಪ್ರಾಪಂಚಿಕ ]

ರಾಗ: ಕಾಂಬೋದಿ — ತಾಳ: ಝಂಪೆ

ಇನ್ನಾದರೂ ಹರಿಯ ನೆನೆ ಕಂಡ್ಯ ಮನುಜ ಪ.

ಮುನ್ನಾದ ದುಃಖವು ನಿಜವಾಗಿ ತೊಲಗುವುದು ಅ.ಪ.

ಊರೂರ ನದಿಗಳಲಿ ಬಾರಿಬಾರಿಗೆ ಮುಳುಗಿ
ತೀರದಲಿ ಕುಳಿತು ನೀ ಹಣೆಗೆ ನಿತ್ಯ
ನೀರಿನಲಿ ಮಟ್ಟೆಯನು ಕಲೆಸಿ ಬರೆಯುತ ಮೂಗು-
ಬೇರನ್ನು ಹಿಡಿದು ಮುಸುಗಿಕ್ಕಲೇನುಂಟು ೧

ನೂರಾರು ಕರ್ಮಂಗಳನ್ನು ದಂಭಕೆ ಮಾಡಿ
ಆರಾರಿಗೋ ಹಲವು ದಾನಕೊಟ್ಟು
ದಾರಿದ್ರ್ಯವನು ಪಡೆದು ತಿರಿದುಂಬುವುದಕೀಗ
ದಾರಿಯಾಯಿತೆ ಹೊರತು ಬೇರೆ ಫಲವುಂಟೆ ೨

ನಾಡಾಡಿ ದೈವಗಳ ಚಿನ್ನ ಬೆಳ್ಳಿಗಳಿಂದ
ಮಾಡಿಕೊಂಡದರ ಪೂಜೆಯನು ಮಾಡೆ
ಕಾಡಕಳ್ಳರು ಬಂದು ಅವುಗಳನು ಕೊಂಡೊಯ್ಯೆ
ಮಾಡಿಕೊಂಡಿರ್ದುದಕೆ ಬಾಯ ಬಡುಕೊಳ್ಳುವೆಯೊ ೩

ಮಗನ ಮದುವೆಯು ಎಂದು ಸಾಲವನು ನೀ ಮಾಡಿ
ಸುಗುಣಿಯೆನ್ನಿಸಿಕೊಳ್ಳಲು ವೆಚ್ಚ ಮಾಡಿ
ಹಗರಣವ ಪಡಿಸಿದರೆ ಸಾಲಗಾರರು ಬಂದು
ಬಗೆಬಗೆಯೊಳವರ ಕಾಲ್ಗೆರಗಿ ಬಿದ್ದಿರುವೆ ೪

ಕೆಟ್ಟ ಈ ಬದುಕುಗಳ ಮಾಡಿದರೆ ಫಲವೇನು
ಥಟ್ಟನೆ ಶ್ರೀಹರಿಯ ಪಾದವನು ನಂಬು
ದಿಟ್ಟ ಶ್ರೀ ಪುರಂದರವಿಟ್ಠಲಯೆಂದೆನಲು
ಸುಟ್ಟುಹೋಗುವವಯ್ಯ ಕಷ್ಟರಾಶಿಗಳು ೫

---

ಮಟ್ಟೆ-ಮಣ್ಣು (ಮೃತ್ತಿಕೆ). ಮೂಗು ಬೇರು-ಮೂಗಿನ ತುದಿ

## ೩೭. ಇನ್ನೂ ದಯೆ ಬಾರದೆ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಕಲ್ಯಾಣಿ ತಾಳ: ಅಟ್ಟ

ಇನ್ನೂ ದಯೆ ಬಾರದೆ ದಾಸನ ಮೇಲೆ ಪ.

ಪನ್ನಂಗಶಯನ ಪಾಲ್ಗಡಲೊಡೆಯನೆ ರಂಗ ಅ.ಪ.

ನಾನಾ ದೇಶಗಳಲ್ಲಿ ನಾನಾ ಕಾಲಗಳಲ್ಲಿ
ನಾನಾ ಯೋನಿಗಳಲ್ಲಿ ಅಳಿದು ಪುಟ್ಟಿ
ನಾನು ನನ್ನದು ಎಂಬ ನರಕದೊಳಗೆ ಬಿದ್ದು
ನೀನೇ ಗತಿಯೆಂದು ನಂಬಿದ ದಾಸನ ಮೇಲೆ ೧

ಕಾಮಾದಿ ಷಡ್ವರ್ಗ ಗಾಢಾಂಧಕಾರದಿ
ಪಾಮರನಾಗಿದ್ದ ಪಾತಕನು
ಶ್ರೀಮನೋಹರನೆ ಚಿತ್ತಜ ಜನಕನೆ
ನಾಮಮುದ್ರಿಕೆಯಿಂದ ನಂಬಿದ ದಾಸನ ಮೇಲೆ ೨

ಮಾನಸ - ವಾಚ - ಕಾಯದಿ ಮಾಳ್ಪ ಕರ್ಮವು
ದಾನವಾಂತಕ ನಿನ್ನಾಧೀನವಲ್ಲವೆ
ಏನು ಮಾಡಿದರೇನು ಪ್ರಾಣ ನಿನ್ನದು ದೇವ
ಶ್ರೀನಾಥ ಪುರಂದರವಿಠಲ ದಾಸನ ಮೇಲೆ ೩

## ೩೮. ಇನ್ನೇಕೆ ಯಮನ ಬಾಧೆಗಳು

[ ಶ್ರೀಹರಿ ಸ್ತುತಿ-ನಾಮ ಮಹಿಮೆ ]

ರಾಗ: ಆನಂದಭೈರವಿ ತಾಳ: ಅಟ್ಟ

ಇನ್ನೇಕೆ ಯಮನ ಬಾಧೆಗಳು ಎನ್ನ
ಜಿಹ್ವೆಯೊಳಗೆ ಹರಿನಾಮವೊಂದಿರಲು ಪ

ಪತಿತಪಾವನವೆಂಬ ನಾಮ ಅತಿ
ಹಿತದಿಂದ ಯತಿಗಳು ಸ್ತುತಿಸುವ ನಾಮ
ಕ್ರತುಕೋಟಿ ಫಲವೀವ ನಾಮ ಸ-
ದ್ಗತಿಗೆ ಸಾಧನವಹ ಅತಿಶಯ ನಾಮ ೧

ಮುನ್ನೊಬ್ಬ ಪ್ರಹ್ಲಾದ ಸಾಕ್ಷಿ ಆ
ಕನ್ಯಾ ಶಿರೋಮಣಿ ದ್ರೌಪದಿ ಸಾಕ್ಷಿ
ಚಿಣ್ಣನೆಂದಜಾಮಿಳ ಸಾಕ್ಷಿ ದಿವ್ಯ
ಪುಣ್ಯ ಲೋಕವನಾಳ್ವ ಧ್ರುವರಾಯ ಸಾಕ್ಷಿ ೨

ಹದಿನಾಲ್ಕು ಲೋಕವನಾಳ್ವ ಇವ
ಮದನಜನಕನಾಗಿ ಮುದದಿಂದ ಬಾಳ್ವ
ಪದುಮನಾಭನಾಗಿ ಇರುವ ನಮ್ಮ
ಸದರ ಪುರಂದರವಿಠಲನು ಕಾಯ್ವ ೩

## ೩೯. ಇರಬೇಕು ಹರಿದಾಸ ಸಂಗ

[ ಹರಿದಾಸರು ]

ರಾಗ: ಕಾಂಬೋದಿ ತಾಳ: ಝಂಪೆ

ಇರಬೇಕು ಹರಿದಾಸ ಸಂಗ ಇರಬೇಕು
ಪರಮ ಜ್ಞಾನಿಗಳ ಸಂಗ ಸಂಪಾದಿಸಬೇಕು ಪ.

ಅತಿ ಜ್ಞಾನಿಯಾಗಬೇಕು ಹರಿಕಥೆಯ ಕೇಳಬೇಕು
ಯತಿಗಳ ಪಾದಕ್ಕೆ ಎರಗಬೇಕು
ಸತಿಸುತರಿರಬೇಕು ಮಮತೆ ಬಿಟ್ಟಿರಬೇಕು
ಮತಿಯ ಬಿಡದೆ ಹರಿಯ ಪೂಜಿಪರ ಸಂಗ ೧

ನಡೆ ಯಾತ್ರೆಯೆನಬೇಕು ನುಡಿ ನೇಮವಿರಬೇಕು
ಬಿಡದೆ ಹರಿಯ ಪೂಜೆ ಮಾಡಬೇಕು
ಅಡಿಗಡಿಗೆ ಶ್ರೀ ಹರಿಗಡ್ಡಬೀಳಲಿ ಬೇಕು
ಬಿಡದೆ ಹರಿಭಜನೆಯನು ಮಾಡುವರ ಸಂಗ ೨

ಹರಿಯೆ ಪರನೆನಬೇಕು ಸುರಹರ ವಿರಂಚಿಗಳ
ಪರಿಯ ತಿಳಿಯಬೇಕು ತಾರತಮ್ಯದಿಂದ
ಅರಿಯದಿದ್ದರೆ ಗುರುಹಿಯರನು ಕೇಳಬೇಕು
ಪರಮಾನಂದದಿ ಓಲಾಡುವರ ಸಂಗ ೩

ಷಟ್ಕರ್ಮ ಮಾಡಬೇಕು ವೈಷ್ಣವನೆನಬೇಕು
ವಿಷ್ಣುದಾಸರ ದಾಸನಾಗಬೇಕು
ದುಷ್ಟಸಂಗವ ಬಿಟ್ಟು ಶಿಷ್ಟಮಾರ್ಗವ ಪಿಡಿದು
ಎಷ್ಟು ಕಷ್ಟ ಬಂದರು ವಿಷ್ಣು ಭಜಕರ ಸಂಗ ೪

ಏಕಾಂತವಿರಬೇಕು ಲೋಕವಾರ್ತೆ ಬಿಡಬೇಕು
ಲೋಕೈಕನಾಥನ ಭಜಿಸಬೇಕು
ಸಾಕು ಸಂಸಾರೆಂದು ಕಕುಲಾತಿ ಬಿಡಬೇಕು
ಶ್ರೀಕಾಂತ ಪುರಂದರವಿಠಲದಾಸರ ಸಂಗ ೫

## ೪೦. ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ

[ ಶ್ರೀಹರಿ ಸ್ತುತಿ – ಸಮರ್ಪಣಭಾವ ]

ರಾಗ: ರೇಗುಪ್ತಿ ತಾಳ: ಅಟ್ಟ

ಇಲ್ಲಿರಲಾರೆ ಅಲ್ಲಿಗೆ ಹೋಗಲಾರೆ
ಫುಲ್ಲನಾಭ ನೀನಿದ್ದಲ್ಲಿ ಸೇರಿಸೆನ್ನ ಪ.

ಮರಣವನೊಲ್ಲೆ ಜನನವನೊಲ್ಲೆ
ದುರಿತ ಸಂಸಾರ ಕೋಟಲೆಯ ನಾನೊಲ್ಲೆ
ಕರುಣದಿ ಕರುಗಳ ಕಾಯ್ದ ಗೋವಳ ನಿನ್ನ
ಚರಣ ಕಮಲದ ಸ್ಮರಣೆಯೊಳಿರಿಸೆನ್ನ ೧

ಬೆಂದೆ ಸಂಸಾರವೆಂಬೊ ಬೇನೆ ಮಧ್ಯದಲ್ಲಿ
ನೊಂದೆನೊ ನಾ ಬಹಳ ಕರೆಕರೆಯಲ್ಲಿ
ನಂದಗೋಪನ ಕಂದ ವೃಂದಾವನಪ್ರಿಯ
ಎಂದೆಂದೂ ನಿನ್ನ ಸ್ಮರಣೆಯೊಳಿರಿಸೆನ್ನ ೨

ಪುತ್ರ ಮಿತ್ರ ಕಳತ್ರ ಬಂಧುಗಳೆಂಬ
ಕತ್ತಲೆಯೊಳು ಸಿಲುಕಿ ಕಡುನೊಂದೆನಲ್ಲ
ಮುಕ್ತಿದಾಯಕ ಉಡುಪಿಯ ಕೃಷ್ಣರಾಯ
ಭಕ್ತವತ್ಸಲ ಶ್ರೀ ಪುರಂದರವಿಠಲ ೩

## ೪೧. ಇಷ್ಟು ಪಾಪಗಳ ಮಾಡಿದ್ದೆ ಸಾಕು

[ಶ್ರೀಹರಿ ಸ್ತುತಿ – ಸಮರ್ಪಣಭಾವ]

ರಾಗ: ಕಾಂಬೋದಿ — ತಾಳ: ಝಂಪೆ

ಇಷ್ಟು ಪಾಪಗಳ ಮಾಡಿದ್ದೆ ಸಾಕು ಪ.
ಸೃಷ್ಟೀಶನೆ ಎನ್ನನುದ್ಧರಿಸಬೇಕು ಅ.ಪ.

ಒಡಲ ಕಿಚ್ಚಿಗೆ ಪರರ ಕಡು ನೋಯಿಸಿದೆ
ಕೊಡದೆ ಅನ್ಯರ ಋಣವನಪಹರಿಸಿದೆ
ಮಡದಿಯ ನುಡಿ ಕೇಳಿ ಒಡಹುಟ್ಟಿದವರೊಡನೆ
ಹಡೆದ ತಾಯಿಯ ಕೂಡೆ ಹಗೆ ಮಾಡಿದೆ ೧

ಸ್ನಾನ ಸಂಧ್ಯಾದಿಗಳ ಮಾಡದಲೆ ಮೈಗೆಟ್ಟೆ
ಜ್ಞಾನ ಮಾರ್ಗವನಂತು ಮೊದಲೆ ಬಿಟ್ಟೆ
ಏನು ಪೇಳಲಿ ಪರರ ಮಾನಿನಿಗೆ ಮನಸಿಟ್ಟೆ
ಶ್ವಾನ ಸೂಕರರಂತೆ ಹೊರೆದೆ ಹೊಟ್ಟೆ ೨

ವ್ರತ ನೇಮ ಉಪವಾಸ ಮಾಡಲಿಲ್ಲ
ಅತಿಥಿಗಳಿಗನ್ನವನು ನೀಡಲಿಲ್ಲ
ಶ್ರುತಿ ಶಾಸ್ತ್ರ ಪೌರಾಣ ಕಥೆಗಳನು ಕೇಳಲಿಲ್ಲ
ವೃಥವಾಗಿ ಬಹುಕಾಲ ಗತವಾಯಿತಲ್ಲ ೩

ಶುದ್ಧ ವೈಷ್ಣವ ಕುಲದಲುದ್ಭವಿಸಿದೆ ನಾನು
ಮಧ್ವಮತ ಸಿದ್ಧಾಂತ ಪದ್ಧತಿಗಳ
ಬುದ್ಧಿಪೂರ್ವಕ ತಿಳಿಯದುದ್ದಂಡ ಕಾಯವನು
ವೃದ್ಧಿ ಮಾಡಿದೆನಯ್ಯ ಉದ್ಧರಿಸು ಹರಿಯೆ ೪

ತಂದೆ ತಾಯ್ಗಳ ಸೇವೆಯೊಂದುದಿನ ಮಾಡಲಿಲ್ಲ
ಮಂದಭಾಗ್ಯಗೆ ಭವಣೆ ತಪ್ಪಲಿಲ್ಲ
ಹಿಂದೆ ಮಾಡಿದ ದೋಷ ಒಂದುಳಿಯದರುಹಿದೆನೊ
ತಂದೆ ಪುರಂದರವಿಠಲ ಬಂದೆನ್ನ ಸಲಹೊ ೫

## ೪೨. ಈಗ ಮಾಡಲೊ ರಾಮಧ್ಯಾನವ ನೀ

[ ಲೋಕನೀತಿ-ಬೋಧೆ ]

ರಾಗ: ಕಾಂಬೋದಿ ತಾಳ: ಝಂಪೆ

ಈಗ ಮಾಡಲೊ ರಾಮಧ್ಯಾನವ ನೀ
ಮೂಗನಾಗಿರಬೇಡ ಎಲೆ ಮಾನವ ಪ.

ಕಾಲನ ದೂತರು ಕರೆವಾಗ ನೀ
ಕುಲಗೆಟ್ಟು ಕಣ್ಣು ಬಿಡುವಾಗ
ನಾಲಿಗೆ ಸೆಳಕೊಂಡು ಜ್ಞಾನಗೆಟ್ಟಿರುವಾಗ
ನೀಲವರ್ಣನ ಧ್ಯಾನ ಬರುವುದೇನಯ್ಯ ೧

ಸತಿಸುತರೆಂಬ ಸಂದಣಿಯೊಳು ನೀ
ಮತಿಭ್ರಷ್ಟನಾಗಿ ಮನದೊಳು
ಸತತ ಶ್ರೀ ಲಕ್ಷ್ಮೀಪತಿಯ ನೆನೆದರೆ ಸ-
ದ್ಗತಿ ಸನ್ಮಾರ್ಗ ಪಾರಂಪದವೀವನಯ್ಯ ೨

ಯಮದೂತರು ಬಂದು ಎಳೆದಾಗ ನೀ
ನವೆಯುತ್ತ ಹೊತ್ತು ಕಳೆವಾಗ
ಸಮದರ್ಶಿ ಪುರಂದರವಿಠಲನ ನಾಮವಾ
ಸಮಯಕ್ಕೆ ಒದಗಿ ತಾ ಬರುವುದೇನಯ್ಯ ೩

## ೪೩. ಈ ಪರಿಯ ಸೊಬಗಾವ ದೇವರಲಿ ಕಾಣೆ

[ ಶ್ರೀಹರಿ ಸ್ತುತಿ ]

ರಾಗ: ಕಾಂಬೋದಿ ತಾಳ: ಝಂಪೆ

ಈ ಪರಿಯ ಸೊಬಗಾವ ದೇವರಲಿ ಕಾಣೆ ಪ.
ಗೋಪೀಜನಪ್ರಿಯ ಗೋಪಾಲಗಲ್ಲದೆ ಅ.ಪ.

ಧೊರೆಯತನದಲಿ ನೋಡೆ ಧರಣಿದೇವಿಗೆ ರಮಣ
ಸಿರಿಯತನದಲಿ ನೋಡೆ ಶ್ರೀಕಾಂತನು
ಹಿರಿಯತನದಲಿ ನೋಡೆ ಸರಸಿಜೋದ್ಭವನಯ್ಯ
ಗುರುವುತನದಲಿ ನೋಡೆ ಜಗದಾದಿ ಗುರುವು ೧

ಪಾವನತ್ವದಿ ನೋಡೆ ಅಮರಗಂಗಾಜನಕ
ದೇವತ್ವದಲಿ ನೋಡೆ ದಿವಿಜರೊಡೆಯ
ಲಾವಣ್ಯದಲಿ ನೋಡೆ ಲೋಕಮೋಹಕನಯ್ಯ
ಆವ ಧೈರ್ಯದಿ ನೋಡೆ ಅಸುರಾಂತಕ ೨

ಗಗನದಲಿ ಸಂಚರಿಪ ಗರುಡದೇವನೆ ತುರಗ
ಜಗತೀಧರ ಶೇಷ ಪರಿಯಂಕ ಶಯನ
ನಿಗಮಗೋಚರ ಪುರಂದರವಿಠಲಗಲ್ಲದೆ
ಮಿಗಿಲಾದ ದೈವಗಳಿಗೀ ಭಾಗ್ಯವುಂಟೆ ೩

## ೪೪. ಈಸಬೇಕು ಇದ್ದು ಜಯಿಸಬೇಕು

[ ಲೋಕನೀತಿ ]

ರಾಗ: ಧನ್ಯಾಸಿ ತಾಳ: ಆದಿ

ಈಸಬೇಕು ಇದ್ದು ಜಯಿಸಬೇಕು ಪ.
ಹೇಸಿಗೆ ಸಂಸಾರದಲ್ಲಿ ಆಸೆ ಲೇಶ ಇಡದ ಹಾಗೆ ಅ.ಪ.

ತಾಮರಸ ಜಲದಂತೆ
ಪ್ರೇಮವಿಟ್ಟು ಭವದೊಳು
ಸ್ವಾಮಿ ರಾಮ ಎನುತ ಪಾಡಿ
ಕಾಮಿತ ಕೈಗೊಂಬರೆಲ್ಲ ೧

ಗೇರು ಹಣ್ಣಿನಲ್ಲಿ ಬೀಜ
ಸೇರಿದಂತೆ ಸಂಸಾರದಿ
ಮೀರಿ ಆಸೆ ಮಾಡದಂತೆ
ಧೀರಕೃಷ್ಣನ ಭಕುತರೆಲ್ಲ ೨

ಮಾಂಸದಾಸೆಗೆ ಮತ್ಸ್ಯ ಸಿಲುಕಿ
ಹಿಂಸೆ ಪಟ್ಟ ಪರಿಯಂತೆ
ಮೋಸ ಹೋಗದ ಹಾಗೆ ಜಗ-
ದೀಶ ಪುರಂದರವಿಠಲನ ನೆನೆದು ೩

---

ನಮ್ಮ ಬದುಕಿನ ಸೂತ್ರವನ್ನೇ ಇಲ್ಲಿ ಹಿಡಿದಿಟ್ಟಂತಿದೆ. ಆತ್ಮವಿಶ್ವಾಸಕ್ಕೆ ಆಹ್ವಾನವಿದೆ-ಇಲ್ಲಿ.
ತಾಮರಸ ಜಲದಂತೆ-ತಾವರೆಯ ಮೇಲಿನ ನೀರಹನಿಯಂತೆ.

## ೪೫. ಉದರ ವೈರಾಗ್ಯವಿದು

[ ಲೋಕನೀತಿ-ಚತುರೋಕ್ತಿ ]

ರಾಗ: ನಾದನಾಮಕ್ರಿಯೆ ತಾಳ: ಆದಿ

ಉದರ ವೈರಾಗ್ಯವಿದು ನಮ್ಮ
ಪದುಮನಾಭನಲಿ ಲೇಶ ಭಕುತಿಯಿಲ್ಲ ಪ.

ಉದಯಕಾಲದಲೆದ್ದು ಗಡಗಡ ನಡುಗುತ
ನದಿಯಲಿ ಮಿಂದೆನೆಂದು ಹಿಗ್ಗುತ್ತಲಿ
ಮದ ಮತ್ಸರ ಕ್ರೋಧ ಒಳಗೆ ತುಂಬಿಟಗೊಂಡು
ಬದಿಯಲ್ಲಿದ್ದವರಿಗಾಶ್ಚರ್ಯ ತೋರುವುದು ೧

ಕಂಚುಗಾರನ ಬಿಡಾರದಂದದಿ
ಕಂಚು ಹಿತ್ತಾಳೆ ಪ್ರತಿಮೆಗಳ ನೆರಹಿ
ಮಿಂಚಬೇಕೆಂದು ಬಲು ಜ್ಯೋತಿಗಳನು ಹಚ್ಚಿ
ವಂಚನೆಯಿಂದಲಿ ಪೂಜೆ ಮಾಡುವುದು ೨

ಕರದಲಿ ಜಪಮಣಿ ಬಾಯಲಿ ಮಂತ್ರವು
ಅರಿವೆಯ ಮುಸುಕನು ಮೋರೆಗೆ ಹಾಕಿ
ಪರಸತಿಯರ ಗುಣ ಮನದಲಿ ಸ್ಮರಿಸುತ
ಪರಮ ವೈರಾಗ್ಯಶಾಲಿ ಎಂದೆನಿಸುವುದು ೩

ಬೂಟಕತನದಲಿ ಬಹಳ ಭಕುತಿ ಮಾಡಿ
ದಿಟನೀತ ಸರಿಯಾರಿಲ್ಲೆನಿಸಿ
ನಾಟಕ ಸ್ತ್ರೀಯಂತೆ ಬಯಲ ಡಂಭವ ತೋರಿ
ಊಟದ ಮಾರ್ಗದ ಜ್ಞಾನವಿದಲ್ಲದೆ ೪

ನಾನು ಎಂಬುದ ಬಿಟ್ಟು ಜ್ಞಾನಿಗಳೊಡನಾಡಿ
ಏನಾದರು ಹರಿ ಪ್ರೇರಣೆಯೆಂದು
ಧ್ಯಾನಿಸಿ ಮೌನದಿ ಪುರಂದರವಿಠಲನ
ಕಾಣದೆ ಮಾಡಿದ ಕಾರ್ಯಗಳೆಲ್ಲವು ೫

---

ಅತ್ಯಂತ ಜನಪ್ರಿಯವಾದ ಹಾಡು. ಕೃತಕವಾದ ಆಚರಣೆಗಳಲ್ಲಿ ತೊಡಗಿ ಪರಮಾತ್ಮನಲ್ಲಿ ಭಕ್ತಿ ಇಲ್ಲದೇ ಡಂಭಾಚಾರದಿಂದ ಬಾಳುವುದನ್ನು ಟೀಕಿಸಿದ್ದಾರೆ. ಬೂಟಕತನ-ಬೂಟಾಟಿಕೆ.

## ೪೬. ಉರಿಗಂಜೆ ಸೆರೆಗಂಜೆ ಶರೀರದ ಭಯಕಂಜೆ

[ ಶ್ರೀಹರಿಸ್ತುತಿ ]

ಉರಿಗಂಜೆ ಸೆರೆಗಂಜೆ ಶರೀರದ ಭಯಕಂಜೆ
ಹಾವಿಗಂಜೆ ಚೇಳಿಗಂಜೆ ಕತ್ತಿಯ ಧಾರೆಗಂಜೆ
ಇನ್ನೊಂದಕ್ಕಂಜುವೆ ಇನ್ನೊಂದಕ್ಕಳುಕುವೆ
ಪರಧನ ಪರಸತಿ ಎರಡಕ್ಕಂಜುವೆನಯ್ಯ
ಹಿಂದೆ ಕೌರವ ರಾವಣರೇನಾಗಿ ಪೋದರು
ಮುಂದೆನ್ನ ಸಲಹಯ್ಯ ಪುರಂದರವಿಠಲ

## ೪೭. ಊಟಕ್ಕೆ ಬಂದೆವು ನಾವು

[ ಲೋಕನೀತಿ–ಪ್ರಾಪಂಚಿಕ ]

ರಾಗ: ನಾದನಾಮಕ್ರಿಯೆ ತಾಳ: ಅಟ್ಟ

ಊಟಕ್ಕೆ ಬಂದೆವು ನಾವು ನಿಮ್ಮ
ಆಟ ಪಾಟವ ಬಿಟ್ಟು ಅಡುಗೆ ಮಾಡಮ್ಮ ಪ

ಕತ್ತಲಿಟ್ಟಾವಮ್ಮ ಕಣ್ಣು ಬಾಯಿ
ಬತ್ತಿ ಬರುತಲಿದೆ ಕೈಕಾಲು ಝುಮ್ಮು
ಹೊತ್ತು ಹೋಗಿಸಬೇಡವಮ್ಮ ಒಂದು
ತುತ್ತಾದರು ಇತ್ತು ಸಲಹು ನಮ್ಮಮ್ಮ ೧

ಒಡಲೊಳಗೆ ಉಸಿರಿಲ್ಲ ಒಂದು
ಕ್ಷಣವಾದರೆ ಜೀವ ನಿಲ್ಲುವುದಿಲ್ಲ
ಮಡಿದರೆ ದೋಷ ತಟ್ಟುವುದು ಒಂದು
ಹಿಡಿ ಅಕ್ಕಿಯಿಂದಲೆ ಕೀರ್ತಿ ಬಾಹೋದು ೨

ಹೊನ್ನರಾಶಿಯ ತಂದು ಸುರಿಯೆ ಕೋಟಿ
ಕನ್ನಿಕೆಯರ ತಂದು ಧಾರೆಯನೆರೆಯೆ
ಅನ್ನದಾನಕ್ಕಿನ್ನು ಸರಿಯೆ ಪ್ರ-
ಸನ್ನ ಪುರಂದರವಿಟ್ಠಲ ದೊರೆಯೆ. ೩

# ೪೮. ಊರಿಗೆ ಬಂದರೆ ದಾಸಯ್ಯ

[ ಶ್ರೀಹರಿ ಸ್ತುತಿ ]

ರಾಗ: ಹಿಂದುಸ್ಥಾನಿ ಕಾಪಿ ತಾಳ: ಆದಿ

ಊರಿಗೆ ಬಂದರೆ ದಾಸಯ್ಯ ನಮ್ಮ
ಕೇರಿಗೆ ಬಾ ಕಂಡ್ಯ ದಾಸಯ್ಯ ಪ.

ಕೇರಿಗೆ ಬಂದರೆ ದಾಸಯ್ಯ ಗೊಲ್ಲ
ಕೇರಿಗೆ ಬಾ ಕಂಡ್ಯ ದಾಸಯ್ಯ ಅ.ಪ.

ಕೊರಳೊಳು ವನಮಾಲೆ ಧರಿಸಿದವನೆ ಕಿರು
ಬೆರಳಲಿ ಬೆಟ್ಟವನೆತ್ತಿದನೆ
ಇರುಳು ಹಗಲು ನಿನ್ನ ಕಾಣದೆ ಇರಲಾರೆ
ಮರುಳು ಮಾಡಿದಂಥ ದಾಸಯ್ಯ ೧

ಕಪ್ಪು ವರ್ಣದ ದಾಸಯ್ಯ ಕಂ-
ದರ್ಪನ ಪಿತನೆಂಬೊ ದಾಸಯ್ಯ
ಅಪ್ಪಿಕೊಂಡು ನಮ್ಮ ಮನಸಿಗೆ ಬಂದರೆ
ಅಪ್ಪವ ಕೊಡುವೆನು ದಾಸಯ್ಯ ೨

ಮುಂಗೈ ಮುರಾರಿ ದಾಸಯ್ಯ ಚೆಲ್ವ
ಪೊಂಗೊಳಲೂದುವ ದಾಸಯ್ಯ
ಹಾಂಗೇ ಪೋಗದಿರು ದಾಸಯ್ಯ ಹೊ-
ನ್ನುಂಗುರ ಕೊಡುವೆನು ದಾಸಯ್ಯ ೩

ಸಣ್ಣ ನಾಮದ ದಾಸಯ್ಯ ನಮ್ಮ
ಸದನಕೆ ಬಾ ಕಂಡ್ಯ ದಾಸಯ್ಯ
ಸದನಕೆ ಬಂದರೆ ದಾಸಯ್ಯ ಮಣಿ-
ಸರವನು ಕೊಡುವೆನು ದಾಸಯ್ಯ ೪

ಸಿಟ್ಟು ಮಾಡದಿರು ದಾಸಯ್ಯ ಸಿರಿ
ಪುರಂದರವಿಟ್ಠಲ ದಾಸಯ್ಯ
ರಟ್ಟು ಮಾಡದಿರು ದಾಸಯ್ಯ ತಂ-
ಬಿಟ್ಟು ಕೊಡುವೆನು ದಾಸಯ್ಯ ೫

## ೪೯. ಎಂತು ನಿನ್ನ ಪೂಜೆ ಮಾಡಿ ಮೆಚ್ಚಿಸುವೆನೊ

[ ಶ್ರೀಹರಿ ಸ್ತುತಿ ]

ರಾಗ: ಕಾಂಬೋದಿ | ತಾಳ: ಆದಿ

ಎಂತು ನಿನ್ನ ಪೂಜೆ ಮಾಡಿ ಮೆಚ್ಚಿಸುವೆನೊ | ಪ.
ಚಿಂತಾಯಕನ ನಿನ್ನ ನಾಮ ಎನಗೊಂದು ಕೋಟಿ | ಅ.ಪ.

ಪವಿತ್ರೋದಕದಿ ಪಾದ ತೊಳೆವೆನೆಂತೆಂದರೆ
ಪಾವನವಾದ ಗಂಗೆ ಪಾದೋದ್ಭವೆ
ನವಕುಸುಮವ ಸಮರ್ಪಿಸುವೆನೆಂದರೆ ಉದು-
ಭವಿಸಿಹನು ಅಜ ನಿನ್ನ ಪೊಕ್ಕಳ ಪೂವಿನಲಿ ೧

ದೀಪವನು ಬೆಳಗುವೆನೆ ನಿನ್ನ ಕಂಗಳು ಸಪ್ತ
ದ್ವೀಪಂಗಳೆಲ್ಲವನು ಬೆಳಗುತಿಹವೋ
ಆಪೋಶನವನಾದರೀವೆನೆಂತೆಂಬೆನೆ
ಆಪೋಶನವಾಯಿತೇಳು ಅಂಬುಧಿಯು ೨

ಕಾಣಿಕೆಯಿತ್ತಾದರು ಕೈಮುಗಿವೆನೆಂಬೆನೆ
ರಾಣಿವಾಸವು ಸಿರಿದೇವಿ ನಿನಗೆ
ಮಾಣದೆ ಮನದೊಳು ನಿನ್ನ ನಾಮ ಸ್ಮರಣೆ
ಧ್ಯಾನವನು ದಯ ಮಾಡೊ ಪುರಂದರವಿಠಲ ೩

---

ಚಿಂತಾಯಕ-ಪರಬ್ರಹ್ಮ. ಸಪ್ತಸಮುದ್ರಗಳಿವು; ಲವಣ, ಇಕ್ಷು, ಸುರೆ ಸರ್ಪಿಸ್, ದಧಿ, ಕ್ಷೀರ ಮತ್ತು ಜಲ.

## ೫೦. ಎಂಥಾ ಚೆಲುವಗೆ ಮಗಳನು ಕೊಟ್ಟನು

[ ರುದ್ರದೇವರು-ನಿಂದಾಸ್ತುತಿ ]

ರಾಗ: ನಾದನಾಮಕ್ರಿಯೆ | ತಾಳ: ಆದಿ

ಎಂಥಾ ಚೆಲುವಗೆ ಮಗಳನು ಕೊಟ್ಟನು
ಗಿರಿರಾಜನು ನೋಡಮ್ಮಮ್ಮ | ಪ.

ಕಂತುಹರ ಶಿವ ಚೆಲುವನೆನ್ನುತ
ಮೆಚ್ಚಿದನು ನೋಡಮ್ಮಮ್ಮಾ | ಅ.ಪ.

ಮೋರೆ ಐದು ಮೂರು ಕಣ್ಣು
ವಿಪರೀತವ ನೋಡಮ್ಮಮ್ಮಾ
ಕೊರಳೊಳು ರುಂಡಮಾಲೆಯ
ಧರಿಸಿದ ಉರಗಭೂಷಣನ ನೋಡಮ್ಮಮ್ಮಾ ೧

ತಲೆಯೆಂಬೋದು ನೋಡಿದರೆ ಜಡೆ
ಹೊಳೆಯುತಿದೆ ನೋಡಮ್ಮಮ್ಮಾ
ಹಲವು ಕಾಲದ ತಪಸಿ ರುದ್ರನ
ಮೈ ಬೂದಿಯ ನೋಡಮ್ಮಮ್ಮಾ ೨

ಭೂತ ಪ್ರೇತ ಪಿಶಾಚಿಗಳೆಲ್ಲ
ಪರಿವಾರವು ನೋಡಮ್ಮಮ್ಮಾ
ಈತನ ನಾಮವು ಒಂದೇ ಮಂಗಳ
ಮುಪ್ಪುರಹರನ ನೋಡಮ್ಮಮ್ಮಾ ೩

ಮನೆಯೆಂಬುವುದು ಸ್ಮಶಾನವು ನೋಡೆ
ಗಜ ಚರ್ಮಾಂಬರವಮ್ಮಮ್ಮಾ
ಹಣವೊಂದಾದರು ಕೈಯೊಳಗಿಲ್ಲ
ಕಪ್ಪರವನು ನೋಡಮ್ಮಮ್ಮಾ ೪

ನಂದಿವಾಹನ ನೀಲಕಂಠನ
ನಿರ್ಗುಣನ ನೋಡಮ್ಮಮ್ಮಾ
ಇಂದಿರೆರಮಣ ಶ್ರೀ ಪುರಂದರವಿಠಲನ
ಪೊಂದಿದವನ ನೋಡಮ್ಮಮ್ಮಾ ೫

---

ಈತನ ನಾಮವು ಮಂಗಳ-ಎಂದರೆ ಶಿವ. 'ಸತ್ಯಂ ಶಿವಂ ಸುಂದರಂ'. ಕಪ್ಪರ-ಮಣ್ಣಿನ ಪಾತ್ರೆ.

## ೫೧. ಎಂಥಾ ಪುಣ್ಯವೆ ಗೋಪಿ

[ ಶ್ರೀಕೃಷ್ಣಲೀಲೆ ]

ರಾಗ: ಸಾವೇರಿ

ತಾಳ: ಚಾಪು

ಎಂಥಾ ಪುಣ್ಯವೆ ಗೋಪಿ ಎಂಥಾ ಭಾಗ್ಯವೆ ನಿನ್ನ
ಇಂಥಾ ಮಗನ ಕಾಣೆವೆ ಪ.

ಚಿಂತಿಸಿದರು ದೊರಕ ಚೆಲುವ ರಾಜಗೋಪಾಲ
ಚಿಂತೆಯೆಲ್ಲವು ಪೋಪುದೇ ಕೇಳೆ ಯಶೋದ ಅ.ಪ.

ಸರಸಿಜನಾಭನ ಸುಮ್ಮನೆ ಕಂಡರೆ
ದುರಿತವೆಲ್ಲವು ಪೋಪುದೇ
ಸರಸವಾಡುತ ಬಂದು ಸವಿ ಮಾತನಾಡಿದರೆ
ಹರುಷ ಕೈಗೂಡುವುದೇ ಕೇಳೆ ಯಶೋದೆ ೧

ಊರೊಳಗೆ ಇವ ನೆರೆಹೊರೆಯರಂಜಿಕೆ
ದೂರಿಕೊಂಬುವರಲ್ಲವೆ
ಅರಣ್ಯದಲಿ ನಾವು ಆಡುವ ಆಟಗಳು
ಆರಿಗಾದರು ಉಂಟೇನೆ ಕೇಳೆ ಯಶೋದೆ ೨

ನಿನ್ನ ಮಗನ ಕರೆಯೆ ಎಮ್ಮ ಪ್ರಾಣದ ದೊರೆಯ
ಘನ್ನನು ಪರಬ್ರಹ್ಮನೆ
ಚನ್ನ ಶ್ರೀ ಪುರಂದರವಿಟ್ಠಲರಾಯನ
ನಿನ್ನಾಣೆ ಬಿಡಲಾರೆವೇ ಕೇಳೆ ಯಶೋದೆ ೩

## ೫೨. ಎಂದೆಂದು ನಿನ್ನ ಪಾದವೆ ಗತಿ ಎನಗೆ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಕಾಂಬೋದಿ ತಾಳ: ತ್ರಿವಿಡೆ

ಎಂದೆಂದು ನಿನ್ನ ಪಾದವೆ ಗತಿ ಎನಗೆ ಗೋ-
ವಿಂದ ಬಾರಯ್ಯ ಎನ್ನ ಹೃದಯಮಂದಿರಕೆ ಪ

ಮೊದಲಿಂದ ಬರಲಾರದೆ ನಾ ಬಂದೆ
ಇದರಿಂದ ಗೆದ್ದು ಪೋಪುದು ಕಾಣೆ ಮುಂದೆ
ತುದಿ ಮೊದಲಿಲ್ಲದೆ ಪರರಿಂದ ನೊಂದೆ
ಪದುಮನಾಭನೆ ತಪ್ಪು ಕ್ಷಮೆ ಮಾಡೊ ತಂದೆ ೧

ಹೆಣ್ಣು ಹೊನ್ನು ಮಣ್ಣಿನಾಸೆಗೆ ಬಿದ್ದು
ಪುಣ್ಯ ಪಾಪವನು ನಾ ತಿಳಿಯದೆ ಇದ್ದು

ಅನ್ಯಾಯವಾಯಿತು ಇದಕೇನು ಮದ್ದು
ನಿನ್ನ ಧ್ಯಾನ ಎನ್ನ ಹೃದಯದೊಳಿದ್ದು ೨

ಹಿಂದೆ ನಾ ಮಾಡಿದ ಪಾಪವ ಕಳೆಯೆ
ಮುಂದೆನ್ನ ಜನ್ಮ ಸಫಲ ಮಾಡಿ ಪೊರೆಯೆ
ತಂದೆ ಶ್ರೀ ಪುರಂದರವಿಠಲನ್ನ ನೆನೆಯೆ
ಎಂದೆಂದಿಗಾನಂದ ಸುಖವನ್ನೆ ಕರೆಯೆ ೩

## ೫೩. ಎನಗೂ ಆಣೆ ರಂಗ ನಿನಗೂ ಆಣೆ

[ ಶ್ರೀಹರಿ ಸ್ತುತಿ-ಚತುರೋಕ್ತಿ ]

ರಾಗ: ಶಂಕರಾಭರಣ ತಾಳ: ತ್ರಿವಿಡೆ

ಎನಗೂ ಆಣೆ ರಂಗ ನಿನಗೂ ಆಣೆ ಪ.
ಎನಗೂ ನಿನಗೂ ಇಬ್ಬರಿಗು ಭಕ್ತರಾಣೆ ಅ.ಪ.

ನಿನ್ನ ಬಿಟ್ಟು ಅನ್ಯರ ಭಜಿಸಿದರೆನಗೆ ಆಣೆ ರಂಗ
ಎನ್ನ ನೀ ಕೈ ಬಿಟ್ಟು ಪೋದರೆ ನಿನಗೆ ಆಣೆ ೧

ತನುಮನಧನದಲಿ ವಂಚಕನಾದರೆ ಎನಗೆ ಆಣೆ ರಂಗ
ಮನಸು ನಿನ್ನಲಿ ನಿಲಿಸದಿದ್ದರೆ ನಿನಗೆ ಆಣೆ ೨

ಕಾಕು ಮನುಜರ ಸಂಗವ ಮಾಡಿದರೆನಗೆ ಆಣೆ ರಂಗ
ಲೌಕಿಕವ ಬಿಡಿಸದಿದ್ದರೆ ನಿನಗೆ ಆಣೆ ೩

ಶಿಷ್ಟರ ಸಂಗವ ಮಾಡದಿದ್ದರೆ ಎನಗೆ ಆಣೆ ರಂಗ
ದುಷ್ಟರ ಸಂಗವ ಬಿಡಿಸದಿದ್ದರೆ ನಿನಗೆ ಆಣೆ ೪

ಹರಿ ನಿನ್ನಾಶ್ರಯ ಮಾಡದಿದ್ದರೆ ಎನಗೆ ಆಣೆ ರಂಗ
ಪುರಂದರವಿಠಲ ನೀನೊಲಿಯದಿದ್ದರೆ ನಿನಗೆ ಆಣೆ ೫

## ೫೪. ಎರವಿನ ಸಿರಿಗೆ ಬಿಮ್ಮನೆ ಬೆರೆತರೆ

[ ಲೋಕನೀತಿ-ಬೋಧೆ ]

ರಾಗ: ಸೌರಾಷ್ಟ್ರ ತಾಳ: ಅಟ್ಟ

ಎರವಿನ ಸಿರಿಗೆ ಬಿಮ್ಮನೆ ಬೆರೆತರೆ ನೀರ
ಕಡೆದರುಂಟೆ ಬೆಣ್ಣೆ ಜೀವವೆ
ಉರಗನ ಹೆಡೆಯ ನೆಳಲ ಸೇರಿದ ಕಪ್ಪೆ
ಸ್ಥಿರಕಾಲ ಬಾಳ್ವುದೆ ಜೀವವೆ ಪ

ಸತಿ ಸುತರೆಂದು ನೆಚ್ಚಲು ಬೇಡ ಮನದೊಳು
ಹಿತವರೊಬ್ಬರ ಕಾಣೆ ಜೀವವೆ
ವೃಥಾ ನೀನು ಕೆಡಬೇಡ ಮರಣವು ತಪ್ಪದು
ನಾಥ ದಶಕಂಠಗಾದರು ಜೀವವೆ ೧

ಆಸೆ ಮಾಡಲು ಬೇಡ ಭಾಷೆ ತಪ್ಪಲು ಬೇಡನ್ಯ-
ಸ್ತ್ರೀಸಂಗವು ಬೇಡ ಜೀವವೆ
ಏಸೇಸು ಜನ್ಮಾಂತರ ಕಳೆದುಳಿದರು
ಈ ಸಾವು ತಪ್ಪದು ಜೀವವೆ ೨

ಆನೆ ಕುದುರೆ ಮಂದಿ ಶಾನೆ ಭಂಡಾರವು
ಏನು ಪಡೆದರಿಲ್ಲ ಜೀವವೆ
ಮಾನ ಸಹ ಸರ್ವ ಹರಿಗೆ ಅರ್ಪಣ ಮಾಡಿ
ಪುನೀತನಾಗಿರು ಜೀವವೆ ೩

ಕೆರೆಯ ಕಟ್ಟಿಸು ಮತ್ತೆ ಪೂದೋಟ ಹಾಕಿಸು
ಸೆರೆಯ ಬಿಡಿಸಲದು ಪುಣ್ಯ ಜೀವವೆ
ಕರೆಯದೆ ಮನೆಗೆ ಬಂದವರಿಗನ್ನವ ನೀಡು
ಪರಲೋಕ ಸಾಧನವದು ಜೀವವೆ ೪

ಸತ್ಯವಂತರ ಸಂಗದೊಳಗೆ ಚರಿಸೆ ಮೃತ್ಯು
ಅತ್ತತ್ತಲಿರುವಳು ಜೀವವೆ
ಸತ್ಯವಂತ ಸಿರಿಪುರಂದರವಿಠಲನೆನ್ನು
ಸತ್ತು ಹುಟ್ಟುವುದಿಲ್ಲ ಜೀವವೆ ೫

## ೫೫. ಎಲ್ಲಾನು ಬಲ್ಲೆನೆಂಬುವಿರಲ್ಲ

[ ಲೋಕನೀತಿ ]

ರಾಗ: ಮಧ್ಯಮಾವತಿ ತಾಳ: ಆದಿ

ಎಲ್ಲಾನು ಬಲ್ಲೆನೆಂಬುವಿರಲ್ಲ ಅವಗುಣ ಬಿಡಲಿಲ್ಲ ಪ.

ಸೊಲ್ಲಿಗೆ ಶರಣರ ಕಥೆಗಳ ಪೇಳುತ
ಅಲ್ಲದ ನುಡಿಯನು ನುಡಿಯುವಿರಲ್ಲ ಅ.ಪ.

ಕಾವಿಯನುಟ್ಟು ತಿರುಗುವಿರಲ್ಲ ಕಾಮವ ಬಿಡಲಿಲ್ಲ
ನೇಮನಿಷ್ಠಗಳ ಮಾಡುವಿರಲ್ಲ ತಾಮಸ ಬಿಡಲಿಲ್ಲ
ತಾವೊಂದರಿಯದೆ ಆಗಮ ತಿಳಿಯದೆ
ಶ್ವಾನನ ಕುಳಿಯಲಿ ಬೀಳುವಿರಲ್ಲ ೧

ಗುರುಗಳ ಸೇವೆ ಮಾಡಿದಿರಲ್ಲ ಗುರುತಾಗಲಿಲ್ಲ
ಪರಿಪರಿ ದೇಶವ ತಿರುಗಿದಿರಲ್ಲ ಪೊರೆಯುವರಿನ್ನಿಲ್ಲ
ಅರಿವೊಂದರಿಯದೆ ಆಗಮ ತಿಳಿಯದೆ
ನರಕ ಕೂಪದಲಿ ಬೀಳುವಿರಲ್ಲ ೨

ಬ್ರಹ್ಮಜ್ಞಾನಿಗಳು ಎನಿಸುವಿರಲ್ಲ ಹಮ್ಮು ಬಿಡಲಿಲ್ಲ
ಸುಮ್ಮನೆ ಯಾಗವ ಮಾಡುವಿರಲ್ಲ ಸುಳ್ಳನು ಬಿಡಲಿಲ್ಲ
ಗಮ್ಮನೆ ಪುರಂದರವಿಠಲನ ಪಾದಕೆ
ಹೆಮ್ಮೆ ಬಿಟ್ಟು ನೀವೆರಗಲೆ ಇಲ್ಲ ೩

## ೫೬. ಎಲ್ಲಿ ಶ್ರೀತುಳಸಿಯ ವನವು

[ ತುಳಸೀದೇವಿ ]

ರಾಗ: ಭೂಪಾಳಿ ತಾಳ: ಆಟ

ಎಲ್ಲಿ ಶ್ರೀತುಳಸಿಯ ವನವು
ಅಲ್ಲೊಪ್ಪುವರು ಸಿರಿ-ನಾರಾಯಣರು ಪ.

ಗಂಗೆ ಯಮುನೆ ಗೋದಾವರಿ ಕಾವೇರಿ
ಕಂಗೊಳಿಸುವ ಮಣಿಕರ್ಣಿಕೆಯು

ತುಂಗಭದ್ರೆ ಕೃಷ್ಣವೇಣಿ ತೀರ್ಥಗಳೆಲ್ಲ
ಸಂಗಡಿಸುತ ವೃಕ್ಷಮೂಲದಲ್ಲಿರುವವು ೧

ಸರಸಿಜಭವ ಭವ ಸುರಪ ಪಾವಕ ಚಂ-
ದಿರ ಸೂರ್ಯ ಮೊದಲಾದವರು
ಸಿರಿರಮಣನ ಆಜ್ಞೆಯಲಿ ಅಗಲದಂತೆ
ತರುಮಧ್ಯದೊಳು ನಿತ್ಯ ನೆಲಸಿಪ್ಪರು ೨

ಋಗ್ವೇದ ಯಜುರ್ವೇದ ಸಾಮ ಅಥರ್ವಣ
ಅಗ್ಗಳಿಸಿದ ವೇದಘೋಷಗಳು
ಅಗ್ರಭಾಗದಲಿವೆ ಬೆಟ್ಟದೊಡೆಯನಲ್ಲಿ
ಶೀಘ್ರದಿ ಒಲಿವ ಶ್ರೀಪುರಂದರವಿಠಲ ೩

## ೫೭. ಎಲ್ಲಿ ಹರಿಕಥಾ ಪ್ರಸಂಗವೋ

[ ಶ್ರೀಹರಿ ಸ್ತುತಿ ]

ರಾಗ: ನಾಟ

ಎಲ್ಲಿ ಹರಿಕಥಾ ಪ್ರಸಂಗವೋ
ಅಲ್ಲಿ ಗಂಗೆ-ಯಮುನೆ-ಗೋದಾ-ಸರಸ್ವತಿ ಸಿಂಧು
ಎಲ್ಲ ತೀರ್ಥಗಳು ಬಂದು ಎಣೆಯಾಗಿ ನಿಲ್ಲುವವು
ವಲ್ಲಭ ಶ್ರೀಪುರಂದರ ವಿಠಲ ಮೆಚ್ಚುವನು ೧

ಜಯ ಜಯ ಹರಿಯೆಂಬುದೆ ಸುದಿನವು
ಜಯ ಹರಿಯೆಂಬುದೆ ತಾರಾಬಲವು
ಜಯ ಹರಿಯೆಂಬುದೆ ಚಂದ್ರಬಲವು
ಜಯ ಹರಿಯೆಂಬುದೆ ವಿದ್ಯಾಬಲವು
ಜಯ ಹರಿಯೆಂಬುದೆ ದೈವಬಲವು
ಜಯಹರಿ ಪುರಂದರವಿಠಲನ ಬಲವಯ್ಯ ಸುಜನರಿಗೆ ೨

## ೫೮. ಏಕೆ ಚಿಂತಿಸುವೆ ಬರಿದೆ ಮರುಳೆ

[ ಲೋಕನೀತಿ-ಬೋಧೆ ]

ರಾಗ: ನೀಲಾಂಬರಿ	ತಾಳ: ಮಟ್ಟ

ಏಕೆ ಚಿಂತಿಸುವೆ ಬರಿದೆ ಮರುಳೆ	ಪ.

ವಿಧಿ ಬರೆದ ವಾಕು ತಪ್ಪದು
ಎಂದಿಗೂ ಮರುಳೆ	ಅ.ಪ.

ಹುಟ್ಟುವುದಕಿಂತ ಮೊದಲೆ ತಾಯ ಸ್ತನ
ದಿಟ್ಟ ಕ್ಷೀರವನು ಉಂಡು
ತೊಟ್ಟಿಲೊಳು ಮಲಗುವಾಗ ಗಳಿಸಿ ತಂ-
ದಿಟ್ಟು ನೀನುಣುತಿದ್ದೆಯೊ ಮರುಳೆ	೧

ಉರಗ ವೃಶ್ಚಿಕ ಪಾವಕ ಕರಿ ನಂಜು
ಅರಸು ಹುಲಿ ಚೋರಭಯವು
ಹರಿಯಾಜ್ಞೆಯಿಂದಲೇನೆ ನೀನು ಮಹಾ
ಶರಧಿ ಪೊಕ್ಕರು ಬಿಡದು ಮರುಳೆ	೨

ಇಂತು ಸುಖದುಃಖಂಗಳಿಗೆ ಸಿಲುಕಿ ನೀ
ಭ್ರಾಂತನಾಗಿ ಕೆಡಲು ಬೇಡ
ಸಂತೋಷದಿಂದರ್ಚಿಸಿ ಪೂಜಿಸು
ಕಂತುಪಿತ ಶ್ರೀಪುರಂದರವಿಠಲನ	೩

## ೫೯. ಏಕೆ ದೇಹವನು ದಂಡಿಸುವೆ ವೃಥಾ

[ ಲೋಕನೀತಿ-ಬೋಧೆ ]

ರಾಗ: ತೋಡಿ	ತಾಳ: ಅಟ್ಟ

ಏಕೆ ದೇಹವನು ದಂಡಿಸುವೆ ವೃಥಾ ಬಿಡ-
ದೇಕಚಿತ್ತದಿ ಲಕ್ಷ್ಮೀಕಾಂತ ಹರಿ ಎನ್ನದೆ	ಪ.

ಸ್ನಾನವನು ಮಾಡಿ ಧ್ಯಾನಿಸುವೆನೆನುತಲತಿ
ಮೌನವನು ಪಿಡಿದು ಬಕಪಕ್ಷಿಯಂತೆ
ಹೀನಬುದ್ಧಿಗಳ ಯೋಚಿಸಿ ಕುಳಿತು ಫಲವೇನು
ದಾನವಾಂತಕನ ನಾಮಕೆ ಮೌನವುಂಟೆ?	೧

ಜಪವ ಮಾಡುವೆನೆನುತ ಕಪಟಬುದ್ಧಿಯ ಬಿಡದೆ
ಗುಪಿತದಿಂದಲಿ ನೀನು ಕುಳಿತು ಫಲವೇನು
ಅಪರಿಮಿತಮಹಿಮ ಶ್ರೀನಾರಾಯಣೆಂದರೆ
ಸಫಲವಲ್ಲದೆ ಬೇರೆ ಗತಿಯುಂಟೆ ಮರುಳೆ ೨

ಅಂದಜಾಮಿಳಗೆ ಸ್ಮರಣೆಯ ಮಾತ್ರದಲಿ ಮುಕುತಿ
ಹಿಂದೆ ಶ್ರೀಹರಿಯು ತಾ ಕೊಡಲಿಲ್ಲವೇ?
ಸಂದೇಹವೇಕೆ ನೀನೊಂದು ಕ್ಷಣವಗಲದೆ
ತಂದೆ ಶ್ರೀಪುರಂದರವಿಠಲನ ನೆನೆ ಮನವೆ ೩

## ೬೦. ಏತರ ಚೆಲುವ ರಂಗಯ್ಯ

[ ಶ್ರೀಹರಿ-ನಿಂದಾಸ್ತುತಿ ]

ರಾಗ: ಕೇದಾರಗೌಳ ತಾಳ: ಛಾಪು

ಏತರ ಚೆಲುವ ರಂಗಯ್ಯ ಪ.
ಹರಿಯೆಂಬ ಮಾತಿಗೆ ಮರುಳಾದೆನಲ್ಲದೆ ಅ.ಪ.

ದೇಶಕೋಶಗಳುಳ್ಳೊಡೆ ತಾ ಕ್ಷೀರವಾ
ರಾಶಿಯೊಳಗೆ ಮನೆ ಕಟ್ಟುವನೆ
ಹಾಸುವುದಕೆ ಹಾಸಿಗೆಯುಳ್ಳೊಡೆ ತಾ
ಶೇಷನ ಬೆನ್ನಲಿ ಮಲಗುವನೆ ರಂಗ ೧

ಬುದ್ಧಿಯ ಪೇಳುವ ಪಿತನುಳ್ಳೊಡೆ ಬೆಣ್ಣೆ
ಕದ್ದು ಚೋರನೆಂದೆನಿಸುವನೆ
ಬದ್ಧವಾಹನ ತನಗಿದ್ದರೆ ಹಾರುವ
ಹದ್ದಿನ ಮೇಲೇರಿ ತಿರುಗುವನೆ ರಂಗ ೨

ಹಡೆದ ತಾಯಿ ತನಗುಳ್ಳೊಡೆ ಗೋಪರ
ಒಡಗೂಡಿ ತುರು ಹಿಂಡು ಕಾಯುವನೆ
ಮಡದಿಯು ಉಳ್ಳೊಡೆ ಅಡವಿಯೊಳಾಡುವ
ಹುಡುಗಿಯರ ಸಂಗ ಮಾಡುವನೇ ರಂಗ ೩

ಸಂಗಡ ಉದಿಸಿದ ಅಣ್ಣನಿದ್ದರೆ ನರ-
ಸಿಂಗನ ರೂಪವ ಧರಿಸುವನೆ
ಅಂಗದ ಮೇಲಿನ ಆಸೆಯಿದ್ದೊಡೆ ಕಾ-
ಳಿಂಗನ ಮಡುವಿಲಿ ಧುಮುಕುವನೆ ರಂಗ ೪

ಸಿರಿಯುಳ್ಳೊಡೆ ಪೋಗಿ ಬಲಿಯ ಬಾಗಿಲ ಕಾಯ್ದು
ಧರೆಯ ದಾನಕೆ ಕೈ ಒಡ್ಡುವನೆ
ದೊರೆಯು ತಾನಾದರೆ ಪಾಂಡುಕುಮಾರನ
ತುರಗ ಬಂಡಿಯ ಬೋವನಾಗುವನೆ ರಂಗ ೫

ಮದನಜನಕ ತಾನು ಸೊಬಗುಳ್ಳನಾದರೆ
ಮುದುಕಿ ಕುಬುಜೆಯನು ಕೂಡುವನೆ
ಮುದದಿ ತಾ ಪರದೈವವೆನಿಸಿಕೊಂಡ
ಚದುರ ಶ್ರೀ ಪುರಂದರವಿಠಲ ಅಮ್ಮಮ್ಮ ೬

## ೬೧. ಏನ ಪೇಳಲೆ ಗೋಪಿ ನಿನ್ನ ಮಗನ ಜಾಲ

[ ಶ್ರೀಕೃಷ್ಣಲೀಲೆ ]

ರಾಗ: ಆನಂದಭೈರವಿ ತಾಳ: ಛಾಪು

ಏನ ಪೇಳಲೆ ಗೋಪಿ ನಿನ್ನ ಮಗನ ಜಾಲ
ಮಾನ ತಪ್ಪಿ ಬಂದ ಮನೆಯೊಳಗೆ ಪ.

ಕೊಡ ಹಾಲು ಕುಡಿದನೆ ಗಡಿಗೆಯ ಒಡೆದನೆ
ಅಡಗಿದ್ದನೆ ದೊಡ್ಡ ಕೊಡದೊಳಗೆ
ಹುಡುಗ ಸಿಕ್ಕಿದನೆಂದು ಹೊಡೆಯ ಹೋದರೆ
ಬಡವರ ಮಗನೇನೆ ಹೊಡೆಯಲಿಕ್ಕೆ ೧

ಅಳಿಯನ ವೇಷದಿ ಮಗಳ ಕರೆಯ ಬಂದ
ಕಲಹ ಮಾಡಿ ತಾ ಕಳಿಸೆಂದ
ಒಲುಮೆಯಿಂವಲಿ ತಿಂಗಳೆರಡಿಟ್ಟುಕೊಂಡರೆ
ಗಿಳಿಯಂಥ ಹೆಣ್ಣನ ಕೆಡಿಸಿದನೆ ಗೋಪಿ ೨

ಇಷ್ಟೊಂದು ಸಿಟ್ಟೇಕೆ ಚೆಣ್ಣ ಕೃಷ್ಣನ ಮೇಲೆ
ಪುಟ್ಟಿಸಬೇಡಿರೆ ಅನ್ಯಾಯವ
ಸೃಷ್ಟಿಗೊಡೆಯ ನಮ್ಮ ಪುರಂದರವಿಠಲನ್ನ
ದೃಷ್ಟಿಸಿ ನೋಡಿರೆ ತೊಟ್ಟಿಲಿನೊಳಗೆ ೩

## ೬೨. ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೊ

[ ಮಹಾಲಕ್ಷ್ಮಿ ]

ರಾಗ: ತೋಡಿ ತಾಳ: ಅಟ್ಟ

ಏನು ಧನ್ಯಳೋ ಲಕುಮಿ ಎಂಥಾ ಮಾನ್ಯಳೊ ಪ.
ಸಾನುರಾಗದಿಂದ ಹರಿಯ ತಾನೆ ಸೇವೆ ಮಾಡುತಿಹಳು ಅ.ಪ.

ಕೋಟಿ ಕೋಟಿ ಭೃತ್ಯರಿರಲು ಹಾಟಕಾಂಬರನ ಸೇವೆ
ಸಾಟಿಯಿಲ್ಲದೆ ಪೂರ್ಣಗುಣಳು ಶ್ರೇಷ್ಠವಾಗಿ ಮಾಡುತಿಹಳು ೧

ಛತ್ರ ಚಾಮರ ವ್ಯಜನ ಪರ್ಯಂಕ ಪಾತ್ರರೂಪದಲ್ಲಿ ನಿಂತು
ಚಿತ್ರಚರಿತನಾದ ಹರಿಯ ನಿತ್ಯ ಸೇವೆ ಮಾಡುತಿಹಳು ೨

ಸರ್ವಸ್ಥಳದಿ ವ್ಯಾಪ್ತನಾದ ಸರ್ವದೋಷ ರಹಿತನಾದ
ಗರುಡಗಮನನಾದ ಪುರಂದರವಿಟ್ಠಲನ್ನ ಸೇವಿಸುವಳು ೩

---

ಹಾಟಕಾಂಬರ-ಹೊಳೆವ ಪೀತಾಂಬರವನ್ನುಟ್ಟಿರುವ ಪರಮಾತ್ಮ. ವ್ಯಜನ-ಬೀಸಣಿಗೆ, ಪರ್ಯಂಕ-ಮಂಚ.

## ೬೩. ಏನು ಬರೆದೆಯೊ ಬ್ರಹ್ಮ

[ ಶ್ರೀಹರಿ ಸ್ತುತಿ ]

ರಾಗ: ತೋಡಿ ತಾಳ: ಆದಿ

ಏನು ಬರೆದೆಯೊ ಬ್ರಹ್ಮ ನೀನೆಷ್ಟು ನಿರ್ದಯನೊ ಅಭಿ-
ಮಾನವನು ತೊರೆದು ಪರರನ್ನು ಬೇಡುವುದ ಪ.

ಗೇಣೊಡಲು ಪೊರೆವುದಕೆ ಪೋಗಿ ಪರರನು ಪಂಚ-
ಬಾಣಸಮ ರೂಪ ನೀನೆಂದು ಪೊಗಳೆ

ಆಣೆ ನಿನ್ನಾಣೆಲ್ಲ ನಾಳೆ ಬಾರೆಂದೆನಲು
ಗಾಣ ತಿರುಗುವ ಎತ್ತಿನಂತೆ ಬಳಲುವುದ ೧

ಬಲ್ಲಿದರ ಮನೆಯ ಬಾಗಿಲ ಕಾಯ್ದು ಬೇಸತ್ತು
ಸೊಲ್ಲು ಸೊಲ್ಲಿಗೆ ಅವರ ಕೊಂಡಾಡುತ
ಇಲ್ಲ ಈ ವೇಳೆಯಲಿ ತಿರುಗಿ ಬಾರೆಂದೆನಲು
ಅಲ್ಲವನು ತಿಂದ ಇಲಿಯಂತೆ ಕೊರಗುವುದ ೨

ಹಿಂದೆ ಬರೆದ ಬರಹ ಹೇಗಾದರಾಗಲಿ
ಮುಂದೆನ್ನ ವಂಶದಲಿ ಜನಿಸುವರ ಕಾಯೊ
ಸಂದೇಹಿಸಲಿಬೇಡ ಪುರಂದರವಿಟ್ಠಲ
ಕಂದರ್ಪ ಜನಕ ಉಡುಪಿಯ ಕೃಷ್ಣನಾಣೆ ೩

---

ಪರರಿಗೆ ಕೈಯೊಡ್ಡಿ ಬೇಡುವ ದೀನ ಪರಿಸ್ಥಿತಿಯ ಚಿತ್ರಣ. ಅಲ್ಲದೆ ಅವರನ್ನು 'ಮನ್ಮಥನ (ಪಂಚಬಾಣ) ರೂಪಕ್ಕೆ ಸಮ, ಎಂದು ಮುಂತಾಗಿ ಹೊಗಳುವಂತಹ ಸ್ಥಿತಿ. 'ಅಲ್ಲ'ವನು ಎಂದರೆ ಶುಂಠಿಯನ್ನು.

## ೬೪. ಏನು ಮರುಳಾದೆಮ್ಮ ಎಲೆ ರುಕ್ಮಿಣಿ

**[ ಶ್ರೀಕೃಷ್ಣಲೀಲೆ-ನಿಂದಾಸ್ತುತಿ ]**

**ರಾಗ: ಕಾಂಬೋದಿ** **ತಾಳ: ಝಂಪೆ**

ಏನು ಮರುಳಾದೆಮ್ಮ ಎಲೆ ರುಕ್ಮಿಣಿ ಪ.
ಹೀನಕುಲ ಗೊಲ್ಲ ಶ್ರೀ ಗೋಪಾಲಕೃಷ್ಣಗೆ ಅ.ಪ.

ಹಾಸಿಕಿಲ್ಲದೆ ಹಾವಿನ ಮೇಲೆ ಒರಗಿದವ
ಹೇಸಿಕಿಲ್ಲದೆ ಕರಡಿಯ ಕೂಡಿದ
ಗ್ರಾಸಕಿಲ್ಲದೆ ತೊತ್ತಿನ ಮಗನ ಮನೆಲುಂಡ
ದೋಷಕಂಜದೆ ಮಾವನ ಸಿರವ ತರಿದವಗೆ ೧

ಕುಂಡಗೋಳಕರ ಮನೆ ಕುಲದೈವವೆನಿಸಿದಗೆ
ಮಂಡೆ ಬೋಳರ ಮನಕೆ ಮನದೈವವ
ಹಿಂಡು ಗೊಲ್ಲರ ಮನೆ ಹಿರಿಯನೆಂದೆನಿಸುವ
ಭಂಡಾಟದ ಗೊಲ್ಲ ಈ ಬಳಗದೊಳಗೆಲ್ಲ ೨

ಒಬ್ಬರಲ್ಲಿ ಹುಟ್ಟಿ ಒಬ್ಬರಲ್ಲಿ ಬೆಳೆದ
ಒಬ್ಬರಿಗೆ ಮಗನಲ್ಲ ಜಗದೊಳಗೆಲ್ಲ
ಅಬ್ಬರದ ದೈವ ಶ್ರೀ ಪುರಂದರವಿಟ್ಠಲನ
ಉಬ್ಬುಬ್ಬಿ ಮದುವ್ಯಾದೆ ಉತ್ಸಾಹದಿಂದ ೩

---

ಇದೊಂದು ಅಪ್ರತಿಮವಾದ ವ್ಯಾಜ ನಿಂದಾಸ್ತುತಿ. ಇಲ್ಲಿಯ ಶ್ರೀಕೃಷ್ಣನ ಚರಿತ-ಚರ್ಯೆಗಳು ಪರಿಚಿತವಾದುವುಗಳೇ. ಅವನು ಶೇಷಶಾಯಿಯಾದದ್ದು, ಹಾಸಿಗೆ ಇಲ್ಲದ್ದಕ್ಕಂತೆ. ಕರಡಿ ಎಂದರೆ ಜಾಂಬವತಿ; ದಾಸೀಪುತ್ರ ವಿದುರನ ಆತಿಥ್ಯಕ್ಕೆ ಹೊಂಡದ್ದು ಗ್ರಾಸಕ್ಕೆ ಇಲ್ಲದ್ದಕ್ಕಂತೆ. ಕುಂಡಗೋಳಕರು-ಹೊರಗಿನವರು. ಮಂಡೆ ಬೋಳರೆಂದರೆ ಸನ್ಯಾಸಿಗಳೇ ತಾನೇ. ಕೃಷ್ಣ ಹುಟ್ಟಿದ್ದು ಕಂಸನ ಊರಲ್ಲಿ; ಬೆಳೆದದ್ದು ಗೋಕುಲದಲ್ಲಿ. ಹೀಗೇ ಮುಂದುವರೆದಿದೆ.

## ೬೫. ಏನು ಮಾಡಲೊ ಮಗನೆ ಯಾಕೆ ಬೆಳಗಾಯಿತೊ

[ ಶ್ರೀಕೃಷ್ಣಲೀಲೆ–ಬಾಲಕೃಷ್ಣ ]

ರಾಗ: ಸಹಾನ ತಾಳ: ಅಟ್ಟ

ಏನು ಮಾಡಲೊ ಮಗನೆ ಯಾಕೆ ಬೆಳಗಾಯಿತೊ
ಏನು ಮಾಡಲೊ ಕೃಷ್ಣಯ್ಯ ಪ.

ಏನು ಮಾಡಲಿ ಇನ್ನು ಮಾನಿನಿಯರು ಎನ್ನ
ಮಾನವ ಕಳೆಯುವರೊ ರಂಗಯ್ಯ ಅ.ಪ.

ಹಾಲು ಮೊಸರು ಬೆಣ್ಣೆ ಕದ್ದನೆಂಬುವರೊ
ಮೇಲಿನ ಕೆನೆಗಳ ಮೆದ್ದನೆಂಬುವರೊ
ಬಾಲಕರೆಲ್ಲರ ಬಡಿದನೆಂಬರೊ ಎಂಥ
ಕಾಳ ಹೆಂಗಸು ಇವನ ಹಡೆದಳೆಂಬುವರೊ ೧

ಕಟ್ಟಿದ್ದ ಕರುಗಳ ಬಿಟ್ಟನೆಂತೆಂಬರೊ
ಮೆಟ್ಟಿ ಸರ್ಪನ ಮೇಲೆ ಕುಣಿದನೆಂಬುವರೊ
ಪುಟ್ಟ ಬಾಲೆಯರ ಮೋಹಿಸಿದನೆಂಬರೊ ಎಂಥ
ದುಷ್ಟ ಹೆಂಗಸು ಇವನ ಹಡೆದಳೆಂಬುವರೊ ೨

ಗಂಗಾಜನಕ ನಿನ್ನ ಜಾರನೆಂತೆಂಬರೊ
ಶೃಂಗಾರಮುಖ ನಿನ್ನ ಬರಿದೆ ದೂರುವರೊ
ಮಂಗಳಮಹಿಮ ಶ್ರೀಪುರಂದರವಿಟ್ಠಲ
ಹಿಂಗದೆ ಎಮ್ಮನು ಸಲಹೆಂತೆಂಬರೊ ೩

## ೬೬. ಏನು ಮಾಡಿದರೇನು ಭವ ಹಿಂಗದು

[ ಲೋಕನೀತಿ ]

ರಾಗ: ಮುಖಾರಿ

ತಾಳ: ಝಂಪೆ

ಏನು ಮಾಡಿದರೇನು ಭವ ಹಿಂಗದು
ದಾನವಾಂತಕ ನಿನ್ನ ದಯವಾಗದನಕ ಪ.

ಅರುಣೋದಯದಲೆದ್ದು ಅತಿ ಸ್ನಾನಗಳ ಮಾಡಿ
ಬೆರಳೆಣಿಸಿದೆ ಅದರ ನಿಜವರಿಯದೆ
ಚರಣ ಸಾಷ್ಟಾಂಗವನು ಮಾಡಿ ನಾ ದಣಿದೆನೊ
ಹರಿ ನಿನ್ನ ಕರುಣಕಟಾಕ್ಷವಾಗದನಕ ೧

ಶ್ರುತಿಶಾಸ್ತ್ರ ಪುರಾಣಗಳನೋದಿ ಬೆಂಡಾದೆ
ಅತಿ ಶೀಲಗಳನೆಲ್ಲ ಮಾಡಿ ದಣಿದೆ
ಗತಿಯ ಪಡೆವೆನೆಂದು ಕಾಯ ದಂಡಿಸಿದೆನೊ
ರತಿಪತಿಪಿತ ನಿನ್ನ ದಯವಾಗದನಕ ೨

ಧ್ಯಾನವನು ಮಾಡಿದೆನು ಮೌನವನು ತಾಳಿದೆನು
ನಾನು ಪುರುಷಾರ್ಥಕೆ ಮನವನಿಕ್ಕಿ
ಅನಾಥ ಬಂಧು ಶ್ರೀ ಪುರಂದರವಿಠಲನ
ಧ್ಯಾನಿಸುವರೊಡಗೂಡಿ ನೆಲೆಗಾಣದನಕ ೩

## ೬೭. ಏಳೇಳು ಶರಧಿಯು ಏಕವಾಗಿದೆ

[ಹನುಮಂತ-ಚತುರೋಕ್ತಿ]

ರಾಗ: ಸೌರಾಷ್ಟ್ರ ತಾಳ: ಅಟ್ಟ

ಏಳೇಳು ಶರಧಿಯು ಏಕವಾಗಿದೆ ಕಂಡ್ಯ
ಹ್ಯಾಗೆ ಬಂದೆ ಹೇಳೊ ಕೋತಿ ಪ.

ಏಳು ಶರಧಿಯು ಎನಗೆ ಏಳು ಕಾಲುವೆಯು
ತೂಳಿ ಲಂಘಿಸಿ ಬಂದೆ ಭೂತ ಅ.ಪ.

ಏಳು ಸಮುದ್ರದೊಳಿರುವ ಮಕರಿ ಮತ್ಸ್ಯ
ಹ್ಯಾಗೆ ಬಿಟ್ಟರು ಹೇಳೊ ಕೋತಿ
ಏಳು ಸಮುದ್ರದ ಮಕರಿ ಮತ್ಸ್ಯದ ಕೂಡೆ
ಮಾತಾಡಿ ಬಂದೆನೊ ಭೂತ ೧

ಲಂಕಾದ್ವಾರದೊಳೊಬ್ಬ ಲಂಕಿಣಿ ಇರುವಳು
ಹ್ಯಾಂಗೆ ಬಿಟ್ಟಳು ಹೇಳೊ ಕೋತಿ
ಲಂಕಿಣಿಯನು ಕೊಂದು ಶಂಕೆಯಿಲ್ಲದೆ ನಾನು
ಬಿಂಕದಿಂದಲಿ ಬಂದೆ ಭೂತ ೨

ಕೊಂಬೆ ಕೊಂಬೆಗೆ ಕೋಟಿ ಮಂದಿ ರಾಕ್ಷಸರಿರೆ
ಹ್ಯಾಗೆ ಬಿಟ್ಟರು ಹೇಳೊ ಕೋತಿ
ಕೊಂಬೆ ಕೊಂಬೆಗೆ ಕೋಟಿ ಮಂದಿ ರಾಕ್ಷಸರನ್ನು
ಕೊಂದ್ಹಾಕಿ ಬಂದೆನೊ ಭೂತ ೩

ಯಾವೂರೊ ಎಲೊ ನೀನು ಯಾವ ಭೂಮಿಯೊ ನಿಂದು
ಯಾಕೆ ಬಂದೆ ಹೇಳೊ ಕೋತಿ
ಯಾವ ವನದೊಳಗೆ ಜಾನಕಿದೇವಿ ಇದ್ದಳೊ
ಅವಳ ನೋಡಬಂದೆ ಭೂತ ೪

ದಕ್ಷಿಣಪುರಿ ಲಂಕಾ ದಾನವರಿಗಲ್ಲದೆ
ತ್ರ್ಯಕ್ಷಾದ್ಯರಿಗಳವಲ್ಲ ಕೋತಿ
ಪಕ್ಷಿಧ್ವಜ ರಾಮನ ಅಪ್ಪಣೆ ಎನಗಿಲ್ಲ
ಈ ಕ್ಷಣದಿ ತಪ್ಪಿಸಿಕೊಂಡೆ ಭೂತ ೫

ದೂತನಾಗಿಹೆ ಎನ್ನ ಕೈಯೊಳು ಸಿಕ್ಕಿಹೆ
ಕೋಪವಿನ್ಯಾತಕೊ ಕೋತಿ
ನಾ ತಾಳಿಕೊಂಡಿಹೆನೊ ಈ ಕ್ಷಣದಿ ಲಂಕೆ
ನಿರ್ಧೂಮವನು ಮಾಳ್ಪೆ ಭೂತ ೬

ನಿಮ್ಮಂಥ ದಾಸರು ನಿಮ್ಮರಸನ ಬಳಿ
ಎಷ್ಟು ಮಂದಿದ್ದಾರೊ ಕೋತಿ
ನನ್ನಂಥ ದಾಸರು ನಿನ್ನಂಥ ಹೇಡಿಗಳು
ಕೋಟ್ಯನುಕೋಟಿಯೊ ಭೂತ ೭

ಎಲ್ಲಿಂದ ನೀ ಬಂದೆ ಏತಕೆಲ್ಲರ ಕೊಂದೆ
ಯಾವರಸಿನ ಭಂಟ ಕೋತಿ
ಚೆಲ್ವಯೋಧ್ಯಾಪುರದರಸು ಜಾನಕಿಪತಿ
ರಾಮಚಂದ್ರನ ಭಂಟ ಭೂತ ೮

ಸಿರಿ ರಾಮಚಂದ್ರನು ನಿನ್ನರಸನಾದರೆ
ಆತ ಮುನ್ನಾರು ಹೇಳೊ ಕೋತಿ
ಹಿರಣ್ಯಕನನು ಸೀಳಿ ಪ್ರಹ್ಲಾದಗೊಲಿದ
ಶ್ರೀ ಪುರಂದರವಿಠಲನೊ ಭೂತ ೯

---

ಇಲ್ಲಿಯ ಕೋತಿ-ಭೂತರ ಸಂಭಾಷಣೆ-ಹನುಮಂತ ರಾವಣರ ನಡುವಿನದು. ಹನುಮಂತನು ಲಂಕಾಪುರವನ್ನು ನಿರ್ನಾಮ ಮಾಡಿದ ವಿಷಯ ಮಾರ್ಮಿಕವಾಗಿ ಬಂದಿವೆ. ತ್ರ್ಯಕ್ಷ-ಮುಕ್ಕಣ್ಣ, ಶಿವ.

## ೬೮. ಒಂದು ಕಾಲದಲ್ಲಿ ಆನೆ ಕುದುರೆ ಮೇಲ್ಮೆರೆಸುವೆ

[ ಶ್ರೀಹರಿ ಸ್ತುತಿ ]

ಒಂದು ಕಾಲದಲ್ಲಿ ಆನೆ ಕುದುರೆ ಮೇಲ್ಮೆರೆಸುವೆ
ಒಂದು ಕಾಲದಲ್ಲಿ ಬರಿಗಾಲಲ್ಲಿ ನಡೆಸುವೆ
ಒಂದು ಕಾಲದಲ್ಲಿ ಮೃಷ್ಟಾನ್ನವುಣಿಸುವೆ
ಒಂದು ಕಾಲದಲ್ಲಿ ಉಪವಾಸವಿರಿಸುವೆ
ನಿನ್ನ ಮಹಿಮೆಯ ನೀನೆ ಬಲ್ಲೆಯೊ ದೇವ
ಪನ್ನಗಶಯನ ಶ್ರೀಪುರಂದರವಿಠಲ

## ೬೯. ಒಂದೇ ಕೂಗಳತೆ ಭೂ ವೈಕುಂಠ

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ಕಲ್ಯಾಣಿ ತಾಳ: ಅಟ್ಟ

ಒಂದೇ ಕೂಗಳತೆ ಭೂ ವೈಕುಂಠ
ಸಂದೇಹವಿಲ್ಲವು ಸಾಧು ಸಜ್ಜನರಿಗೆ ಪ

ಅಂಬರೀಷನು ದ್ವಾದಶಿವ್ರತ ಮಾಡಲು
ಡೊಂಬೆಯ ಮಾಡಿದ ದುರ್ವಾಸನು
ಕುಂಭಿನೀಪತಿ ಕೃಷ್ಣ ಕಾಯಬೇಕೆನುತಲೆ
ಇಂಬಿಟ್ಟು ಚಕ್ರದಿ ಮುನಿಶಾಪ ಕಳೆದುದು ೧

ಕರಿರಾಜ ವನದಲಿ ಉಳುಹೆಂದು ಕೂಗಲು
ತ್ವರಿತದಿಂದಲಿ ಬಂದು ಕಾಯ್ದ ತಾನು
ಕರುಣಸಾಗರ ಕೃಷ್ಣ ಕಾಯಬೇಕೆನುತಲೆ
ತರಳ ಪ್ರಹ್ಲಾದನ ಕಂಬದಿಂ ಬಂದುದು ೨

ದ್ರುಪದರಾಯನ ಪುತ್ರಿಗಾಪತ್ತು ಬರಲು
ಕೃಪೆಯಿಂದಲಕ್ಷಯವಿತ್ತನು
ಕಪಟನಾಟಕ ಕೃಷ್ಣ ಪುರಂದರವಿಠಲನ
ಗುಪಿತದಿ ನೆನೆವರ ಹೃದಯವೇ ವೈಕುಂಠ ೩

## ೭೦. ಒಂದೆ ನಾಮವು ಸಾಲದೆ ಶ್ರೀ ಹರಿಯೆಂಬ

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ಕಲ್ಯಾಣಿ ತಾಳ: ತ್ರಿವಿಡೆ

ಒಂದೆ ನಾಮವು ಸಾಲದೆ ಶ್ರೀ ಹರಿಯೆಂಬ
ಒಂದೇ ನಾಮವು ಸಾಲದೆ ಪ.

ಒಂದೇ ನಾಮವು ಭವ ಬಂಧನ ಬಿಡಿಸುವು-
ದೆಂದು ಶ್ರುತಿಗಳು ಆನಂದದಿ ಸ್ತುತಿಸುವ ಅ.ಪ.

ಉಭಯರಾಯರು ಸಮ್ಮತದಿ ಲೆತ್ತವನಾಡೆ
ಸಭೆಯೊಳು ಧರ್ಮಜ ಸತಿಯ ಸೋಲೆ
ನಭಕೆ ಕೈಯೆತ್ತಿ ದ್ರೌಪದಿ ಕೃಷ್ಣಾ ಎನ್ನಲು
ಅಂಬುಜಾಕ್ಷಿಗಕ್ಷಯವಸ್ತ್ರವನಿತ್ತ ೧

ಹಿಂದೊಬ್ಬ ಋಷಿಪುತ್ರನು ದಾಸಿಯ ಕೂಡೆ
ಸಂದೇಹವಿಲ್ಲದೆ ಹಲವು ಕಾಲ
ದಂದುಗದೊಳು ಸಿಲುಕಿನಿಂದಂತ್ಯಕಾಲದಿ
ಕಂದ ನಾರಗನೆಂದು ಕರೆಯಲಭಯವಿತ್ತ ೨

ಕಾಶಿಯ ಪುರದೊಳು ಈಶ ಭಕುತಿಯಿಂದ
ಸಾಸಿರ ನಾಮದ ರಾಮನೆಂಬ
ಶ್ರೀಶನ ನಾಮದ ಉಪದೇಶ ಸತಿಗಿತ್ತ
ವಾಸುದೇವ ಸಿರಿ ಪುರಂದರವಿಠಲನ ೩

## ೭೧. ಒಂದೆ ಮನದಲಿ ಭಜಿಸು ವಾಗ್ದೇವಿಯ

[ ಸರಸ್ವತಿದೇವಿ ]

**ರಾಗ: ತೋಡಿ** **ತಾಳ: ಅಟ್ಟ**

ಒಂದೆ ಮನದಲಿ ಭಜಿಸು ವಾಗ್ದೇವಿಯ
ಇಂದು ಮತಿ ಕೊಡುವಳು ಶ್ರೀಹರಿಯ ಧ್ಯಾನದೊಳು ಪ.

ಹಿಂದೆ ಪ್ರಹ್ಲಾದನು ಕಮಲಜನ ಸತಿಗೆರಗಿ
ಬಂದು ಆರಂಭಿಸಲು ಹರಿ ವಿಶ್ವಮಯನೆಂದು
ಬಂದ ವಿಘ್ನವ ಕಳೆದು ಭಾವಶುದ್ಧಿಯನಿತ್ತು
ಹೊಂದಿಸಿದಳಾ ಶ್ರೀಹರಿಯ ಚರಣವನು ೧

ಅಂದು ದಶಮುಖನನುಜ ವಂದಿಸದೆ ವಾಣಿಯನು
ಬಂದು ತಪವನು ಗೈಯೆ ಬಹುಕಾಲಕೆ
ಅಂದದಿಂದಜ ಮೆಚ್ಚಿ ವರವಧಿಕ ಬೇಡೆನಲು
ಬಂದು ಜಿಹ್ವೆಯಲಿ ನಿದ್ರೆಯನು ಬೇಡಿಸಿದಳು ೨

ಅರಿತು ಭಜಿಸಲು ಬಿಡದೆ ಅಜನರಸಿಯ ನಿತ್ಯ
ಉರುತರವಾದ ವಾಗ್ಬುದ್ಧಿಯನಿತ್ತು
ನಿರುತ ಶ್ರೀ ಪುರಂದರವಿಟ್ಠಲನ ಸೇವೆಯೊಳು
ಪರತತ್ತ್ವದ ಕಥಾಮೃತವನುಣಿಸುವಳು ೩

---

ಭಕ್ತ ಪ್ರಹ್ಲಾದನು 'ಹರಿ ವಿಶ್ವಮಯನೆಂದು' ದೃಢವಾಗಿ ತಿಳಿವುದಕ್ಕೆ ಅವನು ಸರಸ್ವತಿಯನ್ನು ಆರಾಧಿಸಿದನಂತೆ. ದಶಮುಖನನುಜನಾದ ಕುಂಭಕರ್ಣನು ತಪವನ್ನು ಮಾಡಿ ಬ್ರಹ್ಮನನ್ನು ಒಲಿಸಿಕೊಂಡ. ಆಗ ಕೇಳಿದ ವರ-ದೀರ್ಘನಿದ್ರೆ. ವಾಣಿಯು ಅವನ ನಾಲಿಗೆಯ ಮೇಲೆ ನಿಂತು ಹಾಗೆ ನುಡಿಸಿದಳು. ಪರತತ್ತ್ವ-ಶ್ರೀಹರಿಯ ಸರ್ವೋತ್ತಮತ್ವ.

## ೭೨. ಓಡಿ ಬಾರೈ ಶ್ರೀ ವೈಕುಂಠಪತಿ

### [ ಶ್ರೀಕೃಷ್ಣಲೀಲೆ ]

**ರಾಗ: ಭೈರವಿ** **ತಾಳ: ಆದಿ**

ಓಡಿ ಬಾರೈ ಶ್ರೀ ವೈಕುಂಠಪತಿ ನಿನ್ನ । ನೋಡುವೆ ಮನದಣಿಯೆ ಪ.

ನೋಡಿ ಮುದ್ದಾಡಿ ಮಾತಾಡಿ
ಪಾಡಿ ಪೊಗಳುವೆನು ಪರಮಪುರುಷ ಹರಿ ಅ.ಪ.

ಕೆಂದಾವರೆ ಪೋಲ್ವ ಪಾದಗಳಿಂದ ರಂಗ
ಧಿಂಧಿಮಿಧಿಮಿಕೆಂದು ಕುಣಿಯುತಲಿ
ಅಂದುಗೆ ಕಿರುಗೆಜ್ಜೆ ಘಲುಘಲುರೆನ್ನುತ
ಚಂದದಿ ಪೀತಾಂಬರ ನಲಿದಾಡುತ ೧

ಕೋಟಿ ಸೂರ್ಯ ಪ್ರಕಾಶದಂತೆ ಕಿ-
ರೀಟ ಕುಂಡಲ ಬಾವುಲಿ ಪೊಳೆಯೆ ಲ-
ಲಾಟದಿ ಕಸ್ತೂರಿ ತಿಲಕವಿಡುವೆ ರಂಗ
ಕೂಟ ಗೋಪಾಲರ ಆಟ ಸಾಕೊ ಈಗ ೨

ಎಣ್ಣೂರಿಗತಿರಸ ದಧಿ ಘೃತವೊ ರಂಗ
ಎನ್ನಯ್ಯ ನಿನಗೆ ಕೊಡುವೆ ಬಾರೊ
ಚೆಣ್ಣರ ಒಡನಾಟ ಸಾಕು ಬಿಡೋ ರಂಗ
ಬೆಣ್ಣೆಯ ಮೆಲುವುದು ಬೇಡ ಎನ್ನ ಕಂದ ೩

ತುರುಬಿನ ಮೇಲೆ ನಲಿಯುತಲಿರುತಿಹ
ಮರುಗ ಮಲ್ಲಿಗೆ ಜಾಜಿ ತುಲಸಿಯ ದಂಡೆ
ಕರದಲಿ ಪಿಡಿದು ಪೊಂಗೊಳಲನೆ ಊದುತ
ಸರಸದಿಂದಲಿ ನೀ ನಲಿನಲಿದಾಡುತ ೪

ಮಂಗಳಾತ್ಮಕ ಮೋಹನಕಾಯ ರಂಗ
ಸಂಗೀತಲೋಲ ಸದ್ಗುಣ ಶೀಲ
ಅಂಗನೆಯರಿಗೆಲ್ಲ ಅತಿ ಪ್ರಿಯನಾದ ಶು-
ಭಾಂಗ ಪುರಂದರವಿಠಲರಾಯ ೫

## ೭೩. ಕಂಡು ಕಂಡು ನೀ ಎನ್ನ ಕೈ ಬಿಡುವರೇ

[ ಶ್ರೀಹರಿಸ್ತುತಿ-ಸಮರ್ಪಣಭಾವ ]

ರಾಗ: ಕಾಂಬೋದಿ ಮೋಹನ ತಾಳ: ಝಂಪೆ

ಕಂಡು ಕಂಡು ನೀ ಎನ್ನ ಕೈ ಬಿಡುವರೇ
ಪುಂಡರೀಕಾಕ್ಷ ಪುರುಷೋತ್ತಮ ಹರೇ ಪ.

ಬಂಧುಗಳು ಎನಗಿಲ್ಲ ಬದುಕಿನಲಿ ಸುಖವಿಲ್ಲ
ನಿಂದೆಯಲಿ ನೊಂದೆನ್ನೆ ನೀರಜಾಕ್ಷ
ತಂದೆತಾಯಿಯು ನೀನೆ ಬಂಧುಬಳಗವು ನೀನೆ
ಎಂದೆಂದಿಗೂ ನಿನ್ನ ನಂಬಿದೆನೋ ಕೃಷ್ಣಾ ೧

ಕ್ಷಣವೊಂದು ಯುಗವಾಗಿ ತೃಣಕಿಂತ ಕಡೆಯಾಗಿ
ಎಣಿಸಲಾರದ ಭವದಿ ನೊಂದೆ ನಾನು
ಸನಕಾದಿಮುನಿವಂದ್ಯ ವನಜಸಂಭವ ಜನಕ
ಫಣಿಶಾಯಿ ಪ್ರಹ್ಲಾದವರದ ಶ್ರೀಕೃಷ್ಣಾ ೨

ಭಕ್ತವತ್ಸಲನೆಂಬೊ ಬಿರುದು ಪೊತ್ತಾ ಮೇಲೆ
ಭಕ್ತರಾಧೀನನಾಗಿರಬೇಡವೆ
ಮುಕ್ತಿದಾಯಕ ನೀನು ಹೊನ್ನೂರುಪುರವಾಸ
ಶಕ್ತಗುರು ಪುರಂದರವಿಠಲ ೩

## ೭೪. ಕಂಡೆ ಕರುಣಾನಿಧಿಯ

[ ರುದ್ರದೇವರು ]

ರಾಗ: ನಾದನಾಮಕ್ರಿಯ ತಾಳ: ಆದಿ

ಕಂಡೆ ಕರುಣಾನಿಧಿಯ ಗಂಗೆಯ
ಮಂಡೆಯೊಳಿಟ್ಟ ದೊರೆಯ ಶಿವನ ಪ.

ರುಂಡಮಾಲೆ ಸಿರಿಯನೊಸಲೊಳು
ಕೆಂಡಗಣ್ಣಿನ ಬಗೆಯ ಹರನ ಅ.ಪ.

ಕಪ್ಪುಗೊರಳ ಹರನ ಕಂದರ್ಪ ಪಿತನ ಸಖನ
ಮುಪ್ಪುರ ಗೆಲಿದವನ ಮುನಿನುತ ಸರ್ಪಭೂಷಣ ಶಿವನ ಹರನ ೧

ಭಸಿತ ಭೂಷಿತ ಶಿವನ ಭಕ್ತರ ವಶದೊಳಗಿರುತಿಹನ
ಪಶುಪತಿಯೆನಿಸುವನ ವಸುಧೆಯೊಳ್ ಶಶಿಶೇಖರ ಶಿವನ ಹರನ ೨

ಗಜ ಚರ್ಮಾಂಬರನ ಗೌರೀವರ ತ್ರಿಜಗದೀಶ್ವರನ
ತ್ರಿಜಗನ್ಮೋಹಕನ ತ್ರಿಲೋಚನ ತ್ರಿಪುರಾಂತಕ ಶಿವನ ಹರನ ೩

ಕಾಮಿತ ಫಲವೀವನ ಭಕ್ತರ ಪ್ರೇಮದಿ ಸಲಹುವನ
ರಾಮನಾಮಸ್ಮರನ ರತಿಪತಿ ಕಾಮನ ಸಂಹರನ ಶಿವನ ೪

ಧರೆಗೆ ದಕ್ಷಿಣಕಾಶಿ ಎನಿಸುವ ಪುರಪಂಪಾವಾಸಿ
ತಾರಕ ಉಪದೇಶಿ ಪುರಂದರವಿಠಲ ಭಕ್ತರ ಪೋಷಿ ೫

## ೭೫. ಕಂಡೆ ನಾ ಕನಸಿನಲಿ ಗೋವಿಂದನ

[ ಶ್ರೀಕೃಷ್ಣಲೀಲೆ ]

ರಾಗ: ಶಂಕರಾಭರಣ ತಾಳ: ಅಟ್ಟ

ಕಂಡೆ ನಾ ಕನಸಿನಲಿ ಗೋವಿಂದನ ಪ.

ಕಂಡೆ ನಾ ಕನಸಿನಲಿ ಕನಕರತ್ನದ ಖಣಿಯ
ನಂದನ ಕಂದ ಮುಕುಂದನ ಚರಣವ ಅ.ಪ.

ಅಂದುಗೆ ಕಿರುಗೆಜ್ಜೆ ಘಲಿರೆಂಬ ವಾದ್ಯದಿ
ಬಂದು ಕಾಳಿಂಗನ ಹೆಡೆಯನೇರಿ
ಧಿಂಧಿಮಿ ಧಿಮಿಕೆಂದು ತಾಳಗತಿಗಳಿಂದಾ-
ನಂದದಿ ಕುಣಿವ ಮುಕುಂದನ ಚರಣವ ೧

ಉಟ್ಟ ಪೀತಾಂಬರ ಉಡಿಯ ಕಾಂಚನಧಾಮ
ತೊಟ್ಟ ಮುತ್ತಿನ ಹಾರ ಕೌಸ್ತುಭವು
ಕಟ್ಟಿದ ವೈಜಯಂತಿ ತುಳಸಿ ವನಮಾಲೆ
ಇಟ್ಟ ದ್ವಾದಶನಾಮ ನಿಗಮಗೋಚರನ ೨

ಕಿರುಬೆರಳಿನ ಮುದ್ರೆಯುಂಗುರ ಮುಂಗೈಯ
ಕರದಲ್ಲಿ ಕಂಕಣ ನಳಿತೋಳುಗಳ
ವರ ಚತುರ್ಭುಜ ಶಂಖ ಚಕ್ರದಿ ಮೆರೆವನ
ನಿರುತದಿ ಒಪ್ಪುವ ಕರುಣಾಮೂರುತಿಯ ೩

ಬಣ್ಣದ ತುಟಿ ಭಾವರಚನೆಯ ಸುಲಿಪಲ್ಲು
ಸಣ್ಣ ನಗೆಯ ನುಡಿ ಸವಿಮಾತಿನ
ಪುಣ್ಯಚರಿತ್ರನ ಪೊಳೆವ ಕಿರೀಟನ
ಕಣ್ಣು ಮನ ದಣಿಯದು ಕಂಸಾರಿ ಕೃಷ್ಣನ ೪

ಮಂಗಳವರ ತುಂಗಭದ್ರದಿ ಮೆರೆವನ
ಅಂಗಜಪಿತ ಶ್ರೀ ಲಕ್ಷ್ಮೀಪತಿಯ
ಶೃಂಗಾರ ಮೂರುತಿ ಪುರಂದರವಿಠಲನ
ಕಂಗಳಿಂದಲಿ ಕಂಡೆ ಹಿಂಗಿತು ಭವಭಯ ೫

## ೭೬. ಕಂಡೆ ನಾ ಗೋವಿಂದನ

[ ಶ್ರೀಹರಿ ಸ್ತುತಿ ]

ರಾಗ: ಪೂರ್ವಕಲ್ಯಾಣಿ
ತಾಳ: ಅಟ್ಟ

ಕಂಡೆ ನಾ ಗೋವಿಂದನ
ಪುಂಡರೀಕಾಕ್ಷ ಪಾಂಡವಪಕ್ಷ ಕೃಷ್ಣನ ಪ.

ಕೇಶವ ನಾರಾಯಣ ಶ್ರೀಕೃಷ್ಣನ
ವಾಸುದೇವ ಅಚ್ಯುತಾನಂತನ
ಸಾಸಿರನಾಮನ ಶ್ರೀ ಹೃಷೀಕೇಶನ
ಶೇಷಶಯನ ನಮ್ಮ ವಸುದೇವಸುತನ ೧

ಮಾಧವ ಮಧುಸೂದನ ತ್ರಿವಿಕ್ರಮ
ಯಾದವಕುಲ ಜನ ಮುನಿವಂದ್ಯನ
ವೇದಾಂತವೇದ್ಯನ ಇಂದಿರಾರಮಣನ
ಆದಿಮೂರುತಿ ಪ್ರಹ್ಲಾದವರದನ ೨

ಪುರುಷೋತ್ತಮ ನರಹರಿ ಶ್ರೀಕೃಷ್ಣನ
ಶರಣಾಗತ ವಜ್ರಪಂಜರನ
ಕರುಣಾಕರ ನಮ್ಮ ಪುರಂದರವಿಠಲನ
ನೆರೆ ನಂಬಿದೆ ಬೇಲೂರ ಕೇಶವನ ೩

## ೭೭. ಕಣ್ಣಲ್ಲಿ ನೀರಿಲ್ಲ ಮನದಲ್ಲಿ ಕೊರಗಿಲ್ಲ

[ ಲೋಕನೀತಿ ]

ಕಣ್ಣಲ್ಲಿ ನೀರಿಲ್ಲ ಮನದಲ್ಲಿ ಕೊರಗಿಲ್ಲ
ಅತ್ತೆ ಸತ್ತರೆ ಸೊಸೆ ಅಳುವಂತೆ
ಅತ್ತೆ ಅತ್ತೆ ಎಂತೆಂದು ನಾನತ್ತೆ
ಅತ್ತೆ ಸತ್ತರೆ ಎದೆ ಎರಡಾಯಿತೆಂದು
ಅತ್ತೆ ಎಂದು ಪುರಂದರವಿಠಲನ
ದಾಸರೆಲ್ಲರ ಮುಂದೆ ಹಾಡಿ ಹಾಡಿ ನಾನತ್ತೆ

## ೭೮. ಕಣ್ಣಿನೊಳಗೆ ನೋಡೊ ಹರಿಯ

[ ಶ್ರೀಹರಿ ಸ್ತುತಿ – ಅಧ್ಯಾತ್ಮಿಕ ]

ರಾಗ: ನಾದನಾಮಕ್ರಿಯೆ ತಾಳ: ಅಟ್ಟ

ಕಣ್ಣಿನೊಳಗೆ ನೋಡೊ ಹರಿಯ ಒಳ-
ಗಣ್ಣಿನಿಂದಲಿ ನೋಡೊ ಮೂಜಗದ ದೊರೆಯ ಪ.

ಆಧಾರ ಮೊದಲಾದ ಆರು ಚಕ್ರ
ಶೋಧಿಸಿ ಬಿಡಬೇಕು ಈಷಣ ಮೂರು
ಸಾಧಿಸಿ ಸುಷುಮ್ನ ಏರು ಅಲ್ಲಿ
ಭೇದಿಸಿ ನೀ ಪರಬ್ರಹ್ಮನ ಸೇರು ೧

ಎವೆ ಹಾಕದೆ ಮೇಲೆ ನೋಡು ಮುಂದೆ
ತವಕದಿಂದಲಿ ವಾಯು ಬಂಧನ ಮಾಡು
ಸವಿದು ನಾದವ ಪಾನಮಾಡು ಅಲ್ಲಿ
ನವ ವಿಧ ಭಕ್ತಿಲಿ ನಲಿನಲಿದಾಡು ೨

ಅಂಡದೊಳಗೆ ಆಡುತಾನೆ ಭಾನು
ಮಂಡಲ ನಾರಾಯಣನೆಂಬವನೆ
ಕುಂಡಲಿ ತುದಿಯೊಳಿದ್ದಾನೆ ನಮ್ಮ
ಪುರಂದರವಿಠಲನು ಪಾಲಿಸುತಾನೆ ೩

---

ಯೋಗಮಾರ್ಗದ ಹಲವು ಅಂಶಗಳು ಇದರಲ್ಲಿ ಕಾಣಿಸಿಕೊಂಡಿವೆ. ಆರು ಚಕ್ರಗಳು ಯಾವವೆಂದರೆ ಆಧಾರ, ಸ್ವಾಧಿಷ್ಠಾನ, ಮಣಿಪೂರ, ಅನಾಹತ, ವಿಶುದ್ಧ ಮತ್ತು ಆಜ್ಞಾ. ಮೂರು ಈ(ಏ)ಷಣಗಳಿವು: ಹೆಣ್ಣು ಹೊನ್ನು ಮತ್ತು ಮಕ್ಕಳು. ಇವುಗಳಿಗಾಗಿ ಅತಿ ಬಯಕೆ. ಸುಷಮ್ನ, ವಾಯುಬಂಧನ, ನಾದಪಾನ, ಕುಂಡಲಿನಿ ಮುಂತಾದ ಯೋಗಪ್ರಣೀತಗಳು (ಅನುಭವಸ್ಥರನ್ನು ಕೇಳಬಹುದು).

ನವವಿಧ ಭಕ್ತಿಯ ಪ್ರಸ್ತಾಪ ಅನೇಕ ಕೀರ್ತನೆಗಳಲ್ಲಿ ಬರುತ್ತದೆ. ಅವೆಂದರೆ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ಸಖ್ಯ, ದಾಸ್ಯ ಹಾಗೂ ಆತ್ಮನಿವೇದನ.

## ೭೯. ಕನಕದಾಸನ ಮೇಲೆ ದಯಮಾಡಲು

[ ಕನಕದಾಸರು ]

ರಾಗ: ಕಾಂಬೋದಿ

ತಾಳ: ಝಂಪೆ

ಕನಕದಾಸನ ಮೇಲೆ ದಯಮಾಡಲು ವ್ಯಾಸ
ಮುನಿಮಠದ ಜನರೆಲ್ಲ ದೂರಿಕೊಂಬುವರೊ ಪ.

ತೀರ್ಥವನು ಕೊಡುವಾಗ ಕನಕನ್ನ ಕರೆಯೆನಲು
ಧೂರ್ತರಾಗಿದ್ದ ವಿದ್ವಾಂಸರೆಲ್ಲ
ಸಾರ್ಥಕಾಯಿತು ಇವರ ಸನ್ಯಾಸಿತನವೆಲ್ಲ
ಪೂರ್ತ್ಯಾಗಲೆಂತೆನಲು ಯತಿಯು ನಗುತಿಹನು ೧

ಮರುದಿನ ಅವರವರ ಪರಿಕಿಸಲಿಬೇಕೆಂದು
ಕರೆದು ವಿದ್ವಾಂಸರನು ಕನಕನ್ನ ಬಿಡದೆ
ಕರದಲ್ಲಿ ಕದಳಿಯ ಫಲಗಳನೆ ಕೊಟ್ಟು
ಯಾರಿರದ ಸ್ಥಳದಲ್ಲಿ ಮೆದ್ದು ಬನ್ನಿರೆನಲು ೨

ಊರ ಹೊರಗ್ಹೋಗಿ ಬೇರೆ ಬೇರೆ ಕುಳಿತು
ತೋರದಲೆ ಎಲ್ಲರೂ ಮೆದ್ದು ಬರಲು
ತೋರಲಿಲ್ಲವು ಎನಗೆ ಏಕಾಂತ ಸ್ಥಳವೆನುತ
ಸಾರಿ ಕದಳೀಫಲವ ತಂದು ಮುಂದಿಟ್ಟ ೩

ಡಿಂಭದೊಳು ಶಬ್ದವಾಗಾದಿ ಶ್ರೋತ್ರಗಳಲ್ಲಿ
ಇಂಬಾಗಿ ತತ್ತ್ವೇಶರೆಲ್ಲ ತುಂಬಿಹರೊ
ತಿಂಬುವುದು ಹೇಗೆನುತ ವ್ಯಾಸರಾಯರ ಕೇಳೆ
ಸಂಭ್ರಮದವರೆಲ್ಲ ಕುಳಿತು ಕೇಳಿದರು ೪

ಮಾಣಿಕವು ಕೋಡಗನ ಕೈಯಲ್ಲಿ ಇದ್ದಂತೆ
ಕೋಣನೆದುರಿಗೆ ಕಿನ್ನರಿಯ ಮೀಟಿದಂತೆ
ವೇಣುಧ್ವನಿ ಬಧಿರನ ಬಳಿ ಮಾಡಿದಂತೆ ಕಣ್ಣು
ಕಾಣದವನಿಗೆ ಕನ್ನಡಿಯ ತೋರಿದಂತೆ ೫

ನೋಡಿದರೆ ಈ ಕನಕನಾಡುವ ಮಾತುಗಳ
ಮೂಢಜನರರಿಯಬಲ್ಲರೆ ಮಹಿಮೆಯ
ನಾಡಾಡಿಯಂತೆಯೇ ಮಾಡಿಬಿಟ್ಟರು ಇವಗೆ
ನಾಡೆಲ್ಲ ಹುಡುಕಿದರು ಈಡಾರ ಕಾಣೆ ೬

ತಮ್ಮ ಕೈಮುಷ್ಟಿಯನು ಪಿಡಿದು ಕೇಳಲು ಯತಿಯು
ತಮತಮಗೆ ತೋರಿದ್ದು ಪೇಳೆ ಬ್ರಾಹ್ಮಣರು
ಗಮ್ಮನೆ ಕನಕ ಸಿರಿ ವಾಸುದೇವನೆ ಪರ
ಬೊಮ್ಮ ಪುರಂದರವಿಠಲನೆನುತ ಸಾರಿದನು ೭

---

ಕನಕ, ಪುರಂದರರಿಬ್ಬರೂ ಶ್ರೀ ವ್ಯಾಸರಾಯರ ದಾಸ-ಶಿಷ್ಯರು. ಬ್ರಾಹ್ಮಣನಲ್ಲದ ಕನಕದಾಸರನ್ನು ಸಂಪ್ರದಾಯಸ್ಥರು ತುಚ್ಛೀಕರಿಸಿದಾಗ ಗುರುಗಳು ಅವನ ಹಿರಿಮೆಯನ್ನು ತೋರಿಸಿಕೊಟ್ಟ ಪ್ರಸಂಗಗಳು ಇಲ್ಲಿವೆ. ಡಿಂಭ-ದೇಹ, ಶಬ್ದವಾಗಾದಿ-ಎಂದರೆ ಕಿವಿ, ಕಣ್ಣು, ನಾಲಗೆ, ಮೂಗು ಮತ್ತು ತ್ವಚಗಳೆಂಬ ನಮ್ಮ ಇಂದ್ರಿಯಗಳು. ಈ ಇಂದ್ರಿಯಗಳಲ್ಲಿ ತತ್ತ್ವಾಭಿಮಾನಿ ದೇವತೆಗಳು ಪ್ರಶಸ್ತವಾಗಿ ನೆಲೆಗೊಂಡಿರುತ್ತಾರೆ.

## ೮೦. ಕರುಣಾಕರ ನೀನೆಂಬುವುದ್ಯಾಕೋ

[ ಶ್ರೀಹರಿ ಸ್ತುತಿ-ಚತುರೋಕ್ತಿ ]

ರಾಗ: ಧನಾಸರಿ ತಾಳ: ಆದಿ

ಕರುಣಾಕರ ನೀನೆಂಬುವುದ್ಯಾಕೋ
ಭರವಸೆ ಇಲ್ಲೆನಗೆ ಪ.

ಪರಿ ಪರಿಯಲಿ ನರಜನ್ಮವನಿತ್ತು
ತಿರುತಿರುಗಿ ಮನ ಕರಗಿಸುವುದ ಕಂಡು ಅ.ಪ.

ಕರಿ ಧ್ರುವ ಬಲಿ ಪಾಂಚಾಲಿ ಅಹಲ್ಯೆಯ
ಪೊರೆದವ ನೀನಂತೆ
ಅರಿತು ವಿಚಾರಿಸಿ ನೋಡಲದೆಲ್ಲವು
ಪರಿಪರಿ ಕಂತೆಗಳಂತಿದೆ ಕೃಷ್ಣಾ ೧

ಕರುಣಾಕರ ನೀನಾದರೆ ಈಗಲೇ
ಕರ ಪಿಡಿದೆನ್ನನು ಹರಿ ಕಾಯೊ
ಸರಸಿಜಾಕ್ಷನೆ ಸರಸ ನೀನಾದರೆ
ದುರಿತಗಳೆನ್ನನು ಪೀಡಿಪುದುಂಟೆ ೨

ಮರಣ ಕಾಲದಲಿ ಅಜಾಮಿಳಗೊಲಿದೆ
ಗರುಡಧ್ವಜನೆಂಬ ಬಿರುದಿನಿಂದ
ವರ ಬಿರುದುಗಳು ಉಳಿಯಬೇಕಾದರೆ
ತ್ವರಿತದಿ ಕಾಯೋ ಪುರಂದರವಿಠಲ ೩

## ೮೧. ಕರುಣಿಸೋ ರಂಗ ಕರುಣಿಸೊ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಧನ್ಯಾಸಿ ತಾಳ: ಅಟ್ಟ

ಕರುಣಿಸೋ ರಂಗ ಕರುಣಿಸೊ
ಇರುಳು ಹಗಲು ನಿನ್ನ ಸ್ಮರಣೆ ಒದಗುವಂತೆ ಪ.

ರುಕುಮಾಂಗದನಂತೆ ವ್ರತವ ನಾನರಿಯೆ
ಶುಕ ಮುನಿಯಂತೆ ಸ್ತುತಿಸಲರಿಯೆ
ಬಕವೈರಿಯಂತೆ ಧ್ಯಾನವ ಮಾಡಲರಿಯೆ ದೇ-
ವಕಿಯಂತೆ ಮುದ್ದಿಸಲರಿಯೆನೊ ಕೃಷ್ಣಾ ೧

ಗರುಡನಂತೆ ಪೊತ್ತು ತಿರುಗಲರಿಯೆನೊ
ಕರೆಯಲರಿಯೆ ಕರಿರಾಜನಂತೆ
ವರಕಪಿಯಂತೆ ಸೇವೆಯ ಮಾಡಲರಿಯೆನೊ
ಸಿರಿಯಂತೆ ನೆರೆದು ಮೋಹಿಸಲರಿಯೆನೊ ಕೃಷ್ಣಾ ೨

ಬಲಿಯಂತೆ ದಾನವ ಕೊಡಲರಿಯೆನೊ ಭಕ್ತಿ
ಛಲವನರಿಯೆ ಪ್ರಹ್ಲಾದನಂತೆ
ಒಲಿಸಲರಿಯೆ ಅರ್ಜುನನಂತೆ ಸಖನಾಗಿ
ಸಲಹಿಕೊಳ್ಳಯ್ಯ ಶ್ರೀಪುರಂದರವಿಠಲ ೩

## ೬೨. ಕರೆದರೆ ಓ ಎನ್ನಬಾರದೆ

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ಖಮಾಚ್ ತಾಳ: ಆದಿ

ಕರೆದರೆ ಓ ಎನ್ನಬಾರದೆ ಲಕ್ಷ್ಮೀರಮಣ ಪ.
ಕರೆದರೆ ಓ ಎನ್ನಬಾರದೆ ಅ.ಪ.

ಹಿರಣ್ಯಕನ ಉದರದಲ್ಲಿ ಬಂದ ಪ್ರಹ್ಲಾದನ
ಪರಿಪರಿ ದುರಿತಗಳೆಲ್ಲಾ ಪರಿಹರಿಸಿ ಕಾಯಿದಂಥಾ ಸ್ವಾಮಿ ೧

ಭೀಮರಥಿಯೊಳಗೊಬ್ಬ ದಾಸ ಮುಣುಗಿ ಪೋಗಿರಲು
ಪೂಮಾಲೆ ಪೀತಾಂಬರವನು ತೋಯದೆ ಕಾಯಿದಂಥಾ ಸ್ವಾಮಿ ೨

ಅಂತ್ಯಕಾಲ ಸಮಯದಲ್ಲಿ ಅರಿಯದ ಅಜಮಿಳನು
ಅಂತ್ಯಾಸುತನ ಕೂಗಲು ವೈಕುಂಠಪದವಿತ್ತಂಥ ಸ್ವಾಮಿ ೩

ದುರುಳ ದುಶ್ಶಾಸ ಬಂದು ಸೆರಗ ಪಿಡಿದು ಸೆಳೆಯುವಾಗ
ತರುಣಿ ದ್ರೌಪದಿಯಭಿಮಾನವ ತ್ವರದಿ ಕಾಯಿದಂಥ ಸ್ವಾಮಿ ೪

ಇಂತಿಂಥ ಭಕುತರಿಗೆ ಚಿಂತೆಯ ಪರಿಹರಿಸಿ
ಕಂತುಪಿತ ಪುರಂದರವಿಟ್ಠಲ ನಿಂತು ಕಾಯಿದಂಥಾ ಸ್ವಾಮಿ ೫

---

ಅಂತ್ಯಜನಾದ ಅಜಮಿಳನು ತನ್ನ ಸುತ ನಾರಾಯಣನನ್ನು ಆರ್ತತೆಯಿಂದ ಕೂಗುತ್ತಾನೆ. ಅಂತ್ಯ+ಆ+ಸುತ-ಎಂಬುದು 'ಅಂತ್ಯಾಸುತ'ವಾಗಿದೆ. ಇದೇ ಪಲ್ಲವಿ ಇರುವ ಬೇರೊಂದು ಹಾಡು ಇದೆ. ಏಳು ನುಡಿಗಳದ್ದು. ಅದು ಪುರಂದರದಾಸರ ಕೃತಿಯಲ್ಲವೆಂದು ಕಾಣುತ್ತದೆ.

## ೮೩. ಕಲಿಯುಗದೊಳು ಹರಿನಾಮವ ನೆನೆದರೆ

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ಜಂಜೂಟಿ | ತಾಳ: ಆದಿ

ಕಲಿಯುಗದೊಳು ಹರಿನಾಮವ ನೆನೆದರೆ
ಕುಲಕೋಟಿಗಳುದ್ಧರಿಸುವವು ಪ.

ಸುಲಭದ ಮುಕ್ತಿಗೆ ಸುಲಭನೆಂದೆನಿಸುವ
ಜಲರುಹನಾಭನ ನೆನೆ ಮನವೆ ಅ.ಪ.

ಸ್ನಾನವನರಿಯೆನು ಮೌನವನರಿಯೆನು
ಧ್ಯಾನವನರಿಯೆನೆಂದೆನಬೇಡ
ಜಾನಕಿವಲ್ಲಭ ದಶರಥನಂದನ
ಗಾನವಿನೋದನ ನೆನೆ ಮನವೆ ೧

ಅರ್ಚಿಸಲರಿಯೆನು ಮೆಚ್ಚಿಸಲರಿಯೆನು
ತುಚ್ಛನು ನಾನೆಂದೆನಬೇಡ
ಅಚ್ಯುತಾನಂತ ಗೋವಿಂದ ಮುಕುಂದನ
ಇಚ್ಛೆಯಿಂದ ನೀ ನೆನೆ ಮನವೆ ೨

ಜಪವೊಂದರಿಯೆನು ತಪವೊಂದರಿಯೆನು
ಉಪದೇಶವಿಲ್ಲೆಂದೆನಬೇಡ
ಅಪಾರಮಹಿಮ ಶ್ರೀಪುರಂದರವಿಠಲನ
ಉಪಾಯದಿಂದಲಿ ನೆನೆ ಮನವೆ ೩

## ೮೪. ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು

[ ಲೋಕನೀತಿ ]

ರಾಗ: ಕಲ್ಯಾಣಿ | ತಾಳ: ಅಟ್ಟ

ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು
ಕಲ್ಲುಸಕ್ಕರೆ ಕೊಳ್ಳಿರೋ ಪ

ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು
ಫುಲ್ಲಲೋಚನ ಶ್ರೀಕೃಷ್ಣನಾಮವೆಂಬ ಅ.ಪ.

ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ
ಒತ್ತೊತ್ತಿ ಗೋಣಿಯೊಳು ತುಂಬುವದಲ್ಲ
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿ ಲಾಭ ಬರುವಂಥ ೧

ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ
ಎಷ್ಟು ಒಯ್ದರು ಬೆಲೆ ರೊಕ್ಕವಿದಕಿಲ್ಲ
ಕಟ್ಟಿರುವೆಯು ತಿಂದು ಕಡಮೆಯಾಗುವುದಲ್ಲ
ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ ೨

ಸಂತೆ ಸಂತೆಗೆ ಹೋಗಿ ಶ್ರಮಪಡುವುದಲ್ಲ
ಸಂತೆಯೊಳಗೆ ಇಟ್ಟು ಮಾರುವುದಲ್ಲ
ಸಂತತ ಭಕ್ತರ ನಾಲಗೆ ಸವಿಗೊಂಬ
ಕಾಂತ ಪುರಂದರವಿಠಲ ನಾಮವೆಂಬ ೩

## ೮೫. ಕಾಗದ ಬಂದಿದೆ

[ ಲೋಕನೀತಿ-ಬೋಧೆ ]

ರಾಗ: ಗಮನಶ್ರಮ ತಾಳ: ಏಕ

ಕಾಗದ ಬಂದಿದೆ ನಮ್ಮ
ಕಮಲನಾಭನದು ಈ ಪ.

ಕಾಗದವನ್ನು ಓದಿಕೊಂಡು
ಕಾಲವ ಕಳೆಯಿರೊ ಅ.ಪ.

ಕಾಮಕ್ರೋಧವ ಬಿಡಿರೆಂಬೊ
ಕಾಗದ ಬಂದಿದೆ
ನೇಮನಿಷ್ಠೆಯೊಳಿರಿರೆಂಬೊ
ಕಾಗದ ಬಂದಿದೆ
ತಾಮಸ ಜನರ ಕೂಡದಿರೆಂಬೊ
ಕಾಗದ ಬಂದಿದೆ
ನಮ್ಮ ಕಾಮನಯ್ಯನು ತಾನೆ ಬರೆದ
ಕಾಗದ ಬಂದಿದೆ ೧

ಹೆಣ್ಣಿನಾಸೆ ಬಿಡಿರೆಂಬೊ
ಕಾಗದ ಬಂದಿದೆ
ಹೊನ್ನಿನಾಸೆ ಬಿಡಿರೆಂಬೊ
ಕಾಗದ ಬಂದಿದೆ
ಮಣ್ಣಿನಾಸೆ ಬಿಡಿರೆಂಬೊ
ಕಾಗದ ಬಂದಿದೆ
ನಮ್ಮ ಕಮಲನಾಭನು ತಾನೆ ಬರೆದ
ಕಾಗದ ಬಂದಿದೆ ೨

ಗೆಜ್ಜೆ ಕಾಲ್ಕಟ್ಟಿರೆಂಬೊ
ಕಾಗದ ಬಂದಿದೆ ಹೆಜ್ಜೆ
ಹೆಜ್ಜೆಗೆ ಹರಿಯೆನ್ನಿರೆಂಬೊ
ಕಾಗದ ಬಂದಿದೆ
ಲಜ್ಜೆ ಬಿಟ್ಟು ಕುಣಿಯಿರೆಂಬೊ
ಕಾಗದ ಬಂದಿದೆ
ನಮ್ಮ ಪುರಂದರವಿಟ್ಠಲ ತಾನೆ ಬರೆದ
ಕಾಗದ ಬಂದಿದೆ ೩

---

ಪುರಂದರದಾಸರ ೧೬ನೆಯ ಶತಮಾನದಲ್ಲಿ ಕಾಗದದ ಬಳಕೆ ವ್ಯಾಪಕವಾಗಿ ಇರಲಿಲ್ಲ. ಇಷ್ಟಕ್ಕೂ ಇಲ್ಲಿ ಕಾಗದ ಬಂದಿದೆ—ಎಂದರೆ ಈಗಿನ 'ಪತ್ರ ಬಂದಿದೆ' ಎಂಬರ್ಥದಲ್ಲಿ ವ್ಯಕ್ತವಾಗಿದೆ. ಈ ಪರಿಕಲ್ಪನೆ ಬ್ರಿಟಿಷರ ಆಡಳಿತಾರಂಭದಿಂದ ಇದ್ದುದು. ಆದ್ದರಿಂದ ಈ ಹಾಡು ಪುರಂದರದಾಸರದೆಂಬುದು ಸಂಶಯಾಸ್ಪದ. ಆದಾಗ್ಯೂ ಸಾಧಾರಣ ಎಲ್ಲ ಸಂಕಲನಗಳಲ್ಲಿ ಬಂದಿರುವುದರಿಂದ ನಾವೂ ಉಳಿಸಿಕೊಂಡಿದ್ದೇವೆ.

## ೮೬. ಕಾಯಬೇಕೆನ್ನ ಗೋಪಾಲ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

**ರಾಗ: ಕಾಪಿ** **ತಾಳ: ಅಟ್ಟ**

ಕಾಯಬೇಕೆನ್ನ ಗೋಪಾಲ ಒಂದು-
ಪಾಯವನರಿಯೆನು ಭಕುತರ ಪಾಲ ಪ.

ಹಲವು ಜನ್ಮಗಳೆತ್ತಿ ಬಂದೆ ಮಾಯಾ
ಬಲವೆಂಬೊದರಿಯದೆ ಭವದೊಳು ನೊಂದೆ
ಬಲು ಭಯವಾಯಿತು ಮುಂದೆ ನೀನು
ಸುಲಭನೆಂದು ಕೇಳಿ ಶರಣೆಂದೆ ತಂದೆ ೧

ವಿತ್ತದೊಳಗೆ ಮನವಿಟ್ಟು ನಿನ್ನ
ಉತ್ತಮನಾಮದ ಸ್ಮರಣೆಯ ಬಿಟ್ಟು
ಮತ್ತನಾದೆ ಮತಿಗೆಟ್ಟು ಇದು
ಚಿತ್ತದಲಿ ತಿಳಿದು ಬಲು ದಯವಿಟ್ಟು ೨

ಈ ರೀತಿ ಪಾಪಗಳೆಲ್ಲ ಅನ್ಯ
ನರರೇನು ಅರಿವರು ಯಮಧರ್ಮ ಬಲ್ಲ
ನರಕಕ್ಕೆ ಒಳಗಾದೆನಲ್ಲ ಸಿರಿ
ವರ ನಾರಾಯಣ ಪುರಂದರವಿಟ್ಠಲ ೩

## ೮೭. ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು

ರಾಗ: ಭೈರವಿ [ ಶ್ರೀಹರಿ ಸ್ತುತಿ-ಸಮರ್ಪಣಭಾವ ] ತಾಳ: ಅಟ್ಟ

ಕಾಯಲಾರೆನು ಕೃಷ್ಣ ಕಂಡವರ ಬಾಗಿಲನು ಪ.
ನಾಯಿ ಕುನ್ನಿಯಂತೆ ಪರರ ಪೀಡಿಸುತ ಅ.ಪ.

ಉದಯಕಾಲದಲೆದ್ದು ಸಂಧ್ಯಾವಿಧಿಯ ಬಿಟ್ಟು
ಪದುಮನಾಭನ ಪಾದಸ್ಮರಣೆ ಮೊದಲಿಲ್ಲದೆ
ಮುದದಿ ನಿನ್ನರ್ಚಿಸದೆ ನರರ ಸದನವ ಪೊಕ್ಕು
ಒದಗಿ ಸೇವೆಯ ಮಾಡಿ ಅವರ ಬಾಗಿಲನು ೧

ಕಲ್ಲ ಕರಗಿಸಬಹುದು ಉರಿಗಡಲೆಯೊಳು ಅದರ
ತೈಲವನು ತೆಗೆದಾದರುಣ್ಣಲುಬಹುದು
ಬಲ್ಲಿದರ ಮನಸು ಮೆಚ್ಚಿಸಲರಿಯೆನ್ನೈ
ಹಲ್ಲು ಕಿರಿಯುತ ಹಂಬಲಿಸಿ ಬಾಯಬಿಡುತ ೨

ಇಂತು ನಾನಾ ಚಿಂತೆಯಲಿ ನಿನ್ನ ನೆನೆಯದೆ
ಭ್ರಾಂತಿಯಂತೆಂಬ ಹೆಬ್ಬಲೆಯೊಳು ಸಿಲುಕಿ
ಅಂತ್ಯವ ನಾ ಕಾಣೆ ಆದರಿಸುವವರಿಲ್ಲ
ಚಿಂತೆಯ ಬಿಡಿಸಯ್ಯ ಪುರಂದರವಿಠಲ ೩

## ೮೮. ಕುರುಡು ನಾಯಿ ತಾ ಸಂತೆಗೆ ಬಂತಂತೆ

ರಾಗ: ಪೂರ್ವಿ [ ಲೋಕನೀತಿ-ಬೋಧೆ ] ತಾಳ: ಆದಿ

ಕುರುಡು ನಾಯಿ ತಾ ಸಂತೆಗೆ ಬಂತಂತೆ
ಅದು ಏತಕೆ ಬಂತೊ ಪ.

ಖಂಡಸಕ್ಕರೆ ಹಿತವಿಲ್ಲವಂತೆ
ಖಂಡ ಎಲುಬು ಕಡಿದಿತಂತೆ
ಹೆಂಡಿರ ಮಕ್ಕಳ ನೆಚ್ಚಿತಂತೆ
ಕೊಂಡುಹೋಗುವಾಗ ಯಾರಿಲ್ಲವಂತೆ ೧

ಭರದಿ ಅಂಗಡಿ ಹೊಕ್ಕಿತಂತೆ
ತಿರುವಿ ದೊಣ್ಣೆಯಲಿ ಇಕ್ಕಿದರಂತೆ
ಮರೆತರಿನ್ನು ವ್ಯರ್ಥವಂತೆ
ನರಕದೊಳಗೆ ಬಿದ್ದಿತಂತೆ ೨

ವೇದವಾದಗಳನೋದಿತಂತೆ
ಗಾದೆಮಾಡಿಬಿಟ್ಟಿತಂತೆ
ಹಾದಿತಪ್ಪಿ ನಡೆದು ಯಮನ
ಬಾಧೆಗೆ ತಾ ಗುರಿಯಾಯಿತಂತೆ ೩

ನಾನಾ ಜನ್ಮವನೆತ್ತಿತಂತೆ
ಮಾನವನಾಗಿ ಹುಟ್ಟಿತಂತೆ
ಕಾನನ ಕಾನನ ತಿರುಗಿತಂತೆ
ತಾನು ತನ್ನನೆ ಮರೆಯಿತಂತೆ ೪

ಮಂಗನ ಕೈಯ ಮಾಣಿಕ್ಯದಂತೆ
ಹಾಂಗೂ ಹೀಂಗೂ ಕಳೆದೀತಂತೆ
ರಂಗ ಪುರಂದರವಿಠಲನ ಮರೆತು
ಭಂಗ ಬಹಳ ಪಟ್ಟಿತಂತೆ ೫

## ೮೯. ಕೂಸಿನ ಕಂಡೀರಾ ಮುಖ್ಯಪ್ರಾಣನ ಕಂಡೀರಾ

[ ವಾಯುದೇವರು-ಅವತಾರತ್ರಯ ]

ರಾಗ: ನಾದನಾಮಕ್ರಿಯ

ತಾಳ: ಆದಿ

ಕೂಸಿನ ಕಂಡೀರಾ ಮುಖ್ಯಪ್ರಾಣನ ಕಂಡೀರಾ ಪ.

ಬಾಲನ ಕಂಡೀರಾ ಬಲವಂತನ ಕಂಡೀರಾ ಅ.ಪ.

ಅಂಜನೆ ಉದರದಿ ಜನಿಸಿತು ಕೂಸು
ರಾಮನ ಪಾದಕ್ಕೆರಗಿತು ಕೂಸು
ಸೀತೆಗೆ ಉಂಗುರ ಕೊಟ್ಟಿತು ಕೂಸು
ಲಂಕಾಪುರವನು ಸುಟ್ಟಿತು ಕೂಸು ೧

ಭಂಡೀ ಅನ್ನವನುಂಡಿತು ಕೂಸು
ಬಕನ ಪ್ರಾಣವ ಕೊಂಡಿತು ಕೂಸು
ವಿಷದ ಲಡ್ಡುಗೆಯ ಮೆದ್ದಿತು ಕೂಸು
ಮಡದಿಗೆ ಪುಷ್ಪವ ಕೊಟ್ಟಿತು ಕೂಸು ೨

ಮಾಯವಾದಿಗಳ ಗೆದ್ದಿತು ಕೂಸು
ಮಧ್ವಮತವನುದ್ಧರಿಸಿತು ಕೂಸು
ಪುರಂದರವಿಠಲನ ದಯದಿಂದ ಕೂಸು
ಸುಮ್ಮನೆ ಉಡುಪಿಲಿ ನಿಂತಿತು ಕೂಸು ೩

---

ವಾಯುದೇವರ ಹನುಮ, ಭೀಮ, ಮಧ್ವ-ಈ ಅವತಾರತ್ರಯದ ವರ್ಣನೆ ಇಲ್ಲಿದೆ. ಭೀಮಸೇನನು ದ್ರೌಪದಿಗೆ ಸೌಗಂಧಿಕ ಪುಷ್ಪವನ್ನು ತಂದುಕೊಟ್ಟಿದ್ದರ ಹಾಗೂ ಬಕಾಸುರನ ಪಾಲಿನ ಅನ್ನ ಉಂಡದ್ದರ ಪ್ರಸ್ತಾಪವಿದೆ. ಮಾಯಾವಲ್ಲ-ಎಂದರೆ ಅದ್ವಿತೀಯ ಮಾಯಾವಾದ ಮಾತ್ರವಲ್ಲ ಒಟ್ಟು ೨೧ ವಾದಗಳನ್ನು ಮಧ್ವಾಚಾರ್ಯರು ಖಂಡಿಸಿದ್ದಾರೆ.

## ೯೦. ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದ್ದಂತಿದೆ

[ ಶ್ರೀಕೃಷ್ಣಲೀಲೆ ]

ರಾಗ: ಕಾಂಬೋದಿ ತಾಳ: ಆದಿ

ಕೃಷ್ಣಮೂರ್ತಿ ಕಣ್ಣಮುಂದೆ ನಿಂತಿದ್ದಂತಿದೆ ಪ

ಕಷ್ಟಗಳೆಲ್ಲವ ಪರಿಹರಿಸಿ ಮನ-
ದಿಷ್ಟಾರ್ಥಗಳನೆಲ್ಲ ಕೊಟ್ಟು ರಕ್ಷಿಸುವಂಥ ಅ.ಪ.

ಮಸ್ತಕದಲಿ ಮಾಣಿಕದ ಕಿರೀಟ
ಕಸ್ತೂರಿ ತಿಲಕದಿ ಹೊಳೆವ ಲಲಾಟ
ಶಿಸ್ತಿಲಿ ಕೊಳಲನೂದುವ ಓರೆನೋಟ
ಕೌಸ್ತುಭ ಎಡಬಲದಲ್ಲಿ ಓಲಾಟ ೧

ಮಘಮಘಿಸುವ ಸೊಬಗಿನ ಸುಳಿಗುರುಳು
ಚಿಗುರು ತುಲಸಿ ವನಮಾಲೆಯ ಕೊರಳು
ಬಗೆಬಗೆ ಹೊನ್ನುಂಗುರವಿಟ್ಟ ಬೆರಳು
ಸೊಬಗಿನ ನಾಭಿಯ ತಾವರೆಯರಳು ೨

ಉಡುದಾರ ವಡ್ಯಾಣ ಸಕಲಾಭರಣ
ಬೆಡಗು ಪೀತಾಂಬರ ಶತರವಿ ಕಿರಣ
ಕಡಗ ಗಗ್ಗರ ಪೆಂಡೆಯನಿಟ್ಟ ಚರಣ
ಒಡೆಯ ಪುರಂದರವಿಠಲನ ಕರುಣ ೩

## ೯೧. ಕೃಷ್ಣ ಬಾರೊ ಕೃಷ್ಣ ಬಾರೊ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ಮೋಹನ ತಾಳ: ಛಾಪು

ಕೃಷ್ಣ ಬಾರೊ ಕೃಷ್ಣ ಬಾರೊ
ಕೃಷ್ಣ ನೀ ಬಾರಯ್ಯ ಪ.

ಸಣ್ಣ ಹೆಜ್ಜೆಯನಿಟ್ಟು ಗೆಜ್ಜೆನಾದಗಳಿಂದ ಅ.ಪ.

ಮನ್ಮಥಜನಕನೆ ಬೇಗನೆ ಬಾರೊ
ಕಮಲಾಪತಿ ನೀ ಬಾರೊ
ಅಮಿತಪರಾಕ್ರಮ ಶಂಕರ ಬಾರೊ
ಕಮನೀಯಗಾತ್ರನೆ ಬಾರಯ್ಯ ದೊರೆಯೆ ೧

ಸುರುಳು ಕೇಶಗಳ ಒಲಿವ ಅಂದ
ಭರದ ಕಸ್ತೂರಿತಿಲಕದ ಚಂದ
ಶಿರದಿ ಒಪ್ಪುವ ನವಿಲು ಕಣ್ಗಳಿಂದ
ತರತರದಾಭರಣಗಳ ಧರಿಸಿ ನೀ ಬಾರೊ ೨

ಹಾಲು ಬೆಣ್ಣೆಗಳ ಕೈಯಲಿ ಕೊಡುವೆ
ಮೇಲಾಗಿ ಭಕ್ಷ್ಯಗಳ ಬಚ್ಚಿಟ್ಟು ತರುವೆ
ಜಾಲಮಾಡದೆ ನೀ ಬಾರಯ್ಯ ಮರಿಯೆ
ಬಾಲ ಎನ ತಂದೆ ಪುರಂದರವಿಠಲ ೩

## ೯೨. ಕೆಟ್ಟು ನೆಂಟರ ಸೇರುವುದು ಬಲು ಕಠಿಣ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಕಾಂಬೋದಿ ತಾಳ: ಛಾಪು

ಕೆಟ್ಟು ನೆಂಟರ ಸೇರುವುದು ಬಲು ಕಠಿಣ ಇನ್ನು ಪ.

ಹುಟ್ಟೇಳು ಜನ್ಮಕ್ಕೆ ಇದು ಬೇಡ ಹರಿಯೆ ಅ.ಪ.

ವಿಷವ ಕುಡಿಯಲಿಬಹುದು ಎಸೆದ ಶೂಲದ ಮುಂದೆ
ಒಸಗಿ ಬಹು ಬೇಗದಿ ಹಾಯಬಹುದು
ವಿಷದ ಕುಂಡದ ಒಳಗೆ ಮುಳುಗಿಕೊಂಡಿರಬಹುದು
ಎಸೆವ ಅಂಬಿಗೆ ಎದೆಯ ಗುರಿಮಾಡಬಹುದು ೧

ಶರಧಿ ಧುಮುಕಲಿಬಹುದು ಉರಗನಪ್ಪಲುಬಹುದು
ಊರ ಮಾರಿಗೆ ಗ್ರಾಸವಾಗಲಿಬಹುದು
ಪುರುಷಮೃಗ ಮೇಲ್ವಾಯ್ದು ಬರೆ ಶಿರವ ಕೊಡಬಹುದು
ಗರಗಸದಲಿ ಕೊರಳ ಕೊಯಿಸಿಕೊಳಬಹುದು ೨

ಕುಡಗೋಲು ಪಿಡಿದು ಕೂಲಿಯ ಮಾಡಿ ಉಣಬಹುದು
ಒಡಲಿಗಾಗಿ ಹುಡಿಯ ಮುಕ್ಕಬಹುದು
ಪೊಡವಿಯೊಳು ಪುರಂದರವಿಟ್ಠಲರಾಯನ
ಕಡು ಹರುಷದಿ ಭಜಿಸಿ ಸುಖಿಯಾಗಬಹುದು ೩

## ೯೩. ಕೆಟ್ಟೆನಲ್ಲೋ ಹರಿಯೆ

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ಭೈರವಿ ತಾಳ: ತ್ರಿವಿಡೆ

ಕೆಟ್ಟೆನಲ್ಲೋ ಹರಿಯೆ ಪ.

ಸಿಟ್ಟು ಮಾಡಿ ಎನ್ನ ಬಿಟ್ಟು ಕಳೆಯಬೇಡ ಅ.ಪ.

ಬಂದೆನು ನಾ ತಂದೆ ತಾಯಿಗಳುದರದಿ
ಒಂದು ಅರಿಯದೆ ಬಾಲಕತನದೊಳು
ಮುಂದುವರಿದ ಯೌವನದೊಳು ಸತಿಸುತ-
ರಂದವ ನೋಡುತ ನಿನ್ನ ನಾ ಮರೆತೆನೊ ೧

ಸ್ನಾನ ಸಂಧ್ಯಾವನವು ಹೀನವಾಯಿತು ಬಹು-
ಮಾನವಿಲ್ಲದೆ ಕುಲಹೀನರಾಶ್ರಯದಿಂದ
ಜ್ಞಾನಿಗಳೊಡನಾಟವಿಲ್ಲದೆ ಮನದೊಳು
ದಾನಧರ್ಮದ ಬಟ್ಟೆಗಾಣದೆ ಮರೆತೆನೊ ೨

ಮೊದಲೆ ಬುದ್ಧಿಯು ಹೀನವದರೊಳು ವೃದ್ಧಾಪ್ಯ
ಕದನವು ದಶದಿಕ್ಕಿನುದಯದ ರಾಯರ
ಎದೆನೀರು ಬತ್ತಿತು ಆದರಿಂದ ನಿನ್ನಯ
ಪದಪದ್ಮಯುಗಳದ ತುದಿಯ ನಾ ಮರೆತೆನೊ ೩

ಮೂಢನಾದನೊ ನಿನ್ನ ಬೇಡಿಕೊಳ್ಳದೆ ನಾನು
ಕಾಡೊಳಗಾಡುವ ಕಪಿಯಂತೆ ಜೀವಿಸಿ
ಗೂಡೊಳಗಿರುತಿಹ ಗೂಬೆಯ ತೆರನಂತೆ
ಮಾಡದೆ ನಿನ್ನಯ ಸ್ಮರಣೆಯ ಮರೆತೆನೊ ೪

ಬುದ್ಧಿಹೀನನು ನಾನು ಉದ್ಧರಿಸೆಲೋ ದೇವ
ಮುದ್ದು ಶ್ರೀ ಪುರಂದರವಿಠಲನೆ ಎನ್ನ
ಬುದ್ಧಿಯೊಳಡಗಿದ್ದು ತಿದ್ದಿಟ್ಟು ನಡೆಸಯ್ಯ
ಪೊದ್ದುವೆ ನಿನ್ನಯ ಚರಣಾರವಿಂದವ ೫

## ೯೪. ಕೆರೆಯ ನೀರನು ಕೆರೆಗೆ ಚೆಲ್ಲಿ

[ ಶ್ರೀಹರಿ ಸ್ತುತಿ ]

ಕೆರೆಯ ನೀರನು ಕೆರೆಗೆ ಚೆಲ್ಲಿ
ವರವ ಪಡೆದವರಂತೆ ಕಾಣಿರೊ
ಹರಿಯ ಕರುಣದಲಾದ ಭಾಗ್ಯವ
ಹರಿಸಮರ್ಪಣೆ ಮಾಡಿ ಬದುಕಿರೊ
ಸಿರಿಪುರಂದರವಿಠಲರಾಯನ
ಚರಣಕಮಲವ ನಂಬಿ ಬದುಕಿರೊ

## ೯೫. ಕೇಳನೋ ಹರಿ ತಾಳನೊ

[ ಹರಿದಾಸರು ]

ರಾಗ: ಕಲ್ಯಾಣಿ — ತಾಳ: ಅಟ್ಟ

ಕೇಳನೋ ಹರಿ ತಾಳನೊ ಪ.

ತಾಳ ಮೇಳಗಳಿದ್ದು ಪ್ರೇಮವಿಲ್ಲದ ಗಾನ ಅ.ಪ.

ತಂಬೂರಿ ಮೊದಲಾದ ಅಖಿಳ ವಾದ್ಯಗಳಿದ್ದು
ಕೊಂಬು ಕೊಳಲು ಧ್ವನಿ ಸ್ವರಗಳಿದ್ದು
ತುಂಬುರು ನಾರದರ ಗಾನ ಕೇಳುವ ಹರಿ
ನಂಬಲಾರ ಈ ಡಂಭಕದ ಕೂಗಾಟ ೧

ನಾನಾ ಬಗೆಯ ರಾಗ ಭಾವ ತಿಳಿದು ಸ್ವರ
ಜ್ಞಾನ ಮನೋಧರ್ಮ ಜಾತಿಯಿದ್ದು
ದಾನವಾರಿಯ ದಿವ್ಯನಾಮರಹಿತವಾದ
ಹೀನ ಸಂಗೀತ ಸಾಹಿತ್ಯಕ್ಕೆ ಮನವಿತ್ತು ೨

ಅಡಿಗಡಿಗಾನಂದ ಬಾಷ್ಪಪುಳಕದಿಂದ
ನಡೆ ನುಡಿಗೆ ಶ್ರೀಹರಿಯೆನ್ನುತ
ದೃಢಭಕ್ತರನು ಕೂಡಿ ಹರಿಕೀರ್ತನೆ ಪಾಡಿ
ಕಡೆಗೆ ಪುರಂದರವಿಠಲನೆಂದರೆ ಕೇಳ್ವ ೩

## ೯೬. ಕೊಡು ಬೇಗ ದಿವ್ಯಮತಿ ಸರಸ್ವತಿ

[ ಸರಸ್ವತಿದೇವಿ ]

ರಾಗ: ವಸಂತ — ತಾಳ: ಆದಿ

ಕೊಡು ಬೇಗ ದಿವ್ಯಮತಿ ಸರಸ್ವತಿ
ಕೊಡು ಬೇಗ ದಿವ್ಯಮತಿ ಪ.

ಮೃಡಹರಿಹಯಮುಖರೊಡೆಯಳೆ ನಿನ್ನಯ
ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ ಅ.ಪ.

ಇಂದಿರಾರಮಣನ ಹಿರಿಯ ಸೊಸೆಯು ನೀನು
ಬಂದೆನ್ನ ವದನದಿ ನಿಂದು ನಾಮವ ನುಡಿಸೆ ೧

ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದ ರಾಣಿ
ಸುಖವಿತ್ತು ಪಾಲಿಸೆ ಸುಜನಶಿರೋಮಣಿ ೨

ಪತಿತಪಾವನೆ ನೀ ಗತಿಯೆಂದು ನಂಬಿದೆ
ಸತತ ಪುರಂದರವಿಠಲನ ತೋರೆ ೩

---
ಮೃಡ, ಹರಿಹಯ (ಇಂದ್ರ) ಮುಂತಾದ ದೇವತೆಗಳು

## ೯೭. ಕೊಳಲನೂದುತ ಬಂದ

[ ಶ್ರೀಕೃಷ್ಣಲೀಲೆ ]

ರಾಗ: ಕಾಂಬೋದಿ ತಾಳ: ಆದಿ

ಕೊಳಲನೂದುತ ಬಂದ
ನಮ್ಮ ಗೋಪಿಯ ಕಂದ
ಕೊಳಲನೂದುವದು ಬಲು ಚಂದ ಪ.

ಆ ವಸುದೇವನ ಕಂದ ಇವ ನೋಡೆ
ದೇವಕಿ ಬಸಿರೊಳು ಬಂದ
ಮಾವ ಕಂಸನ ಕೊಂದ
ಭಾವಜನಯ್ಯ ಮುಕುಂದ ೧

ಮುತ್ತಿನಾಭರಣ ತೊಟ್ಟು
ಹಸ್ತದಿ ಕೊಳಲ ಇಟ್ಟು
ಕಸ್ತೂರಿ ತಿಲಕವನಿಟ್ಟು
ತುತ್ತುರ ತುರರೆಂಬ ನಾದವ ಪಿಡಿಯೆ ೨

ಹಿಂದೆ ಗೋವುಗಳ ಹಿಂಡು
ಮುಂದೆ ಗೋಪಾಲರ ದಂಡು
ಹಿಂದಕ್ಕೆ ದೈತ್ಯರ ಕೊಂದ ಪು-
ರಂದರವಿಠಲನ ಚಂದ ೩

## ೯೮. ಗಜವದನ ಬೇಡುವೆ ಗೌರೀತನಯ

[ ಗಣೇಶಸ್ತುತಿ ]

ರಾಗ: ಪೀಲು ತಾಳ: ಆದಿ

ಗಜವದನ ಬೇಡುವೆ ಗೌರೀತನಯ ಪ.

ತ್ರಿಜಗ ವಂದಿತನೆ ಸುಜನರ ಪೊರೆವನೆ ಅ.ಪ.

ಪಾಶಾಂಕುಶಧರ ಪರಮಪವಿತ್ರ
ಮೂಷಕವಾಹನ ಮುನಿಜನ ಪ್ರೇಮ ೧

ಮೋದದಿ ನಿನ್ನಯ ಪಾದವ ತೋರೋ
ಸಾಧುವಂದಿತನೆ ಆದರದಿಂದಲಿ ೨

ಸರಸಿಜನಾಭ ಶ್ರೀ ಪುರಂದರವಿಠಲನ
ನಿರುತ ನೆನೆಯುವಂತೆ ದಯಮಾಡೋ ೩

## ೯೯. ಗಿಳಿಯು ಪಂಜರದೊಳಿಲ್ಲ ಶ್ರೀರಾಮ ರಾಮ

[ ಲೋಕನೀತಿ–ಆಧ್ಯಾತ್ಮಿಕ ]

ರಾಗ: ಆನಂದಭೈರವಿ ತಾಳ: ಅಟ್ಟ

ಗಿಳಿಯು ಪಂಜರದೊಳಿಲ್ಲ ಶ್ರೀರಾಮ ರಾಮ
ಬರಿದೆ ಪಂಜರವಾಯಿತಲ್ಲ ಪ.

ಅಕ್ಕ ಕೇಳೆ ಎನ್ನ ಮಾತು
ಚಿಕ್ಕದೊಂದು ಗಿಳಿಯ ಸಾಕಿದೆ
ಅಕ್ಕ ನಾನಿಲ್ಲದ ವೇಳೆ
ಬೆಕ್ಕು ಕೊಂಡು ಹೋಯಿತಯ್ಯೊ ೧

ಅರ್ಥಿಲೊಂದು ಗಿಳಿಯ ಸಾಕಿ
ಮುತ್ತಿನ್ಹಾರವನ್ನು ಹಾಕಿದೆ
ಮುತ್ತಿನ್ಹಾರ ಕೊಂಡು ಗಿಳಿಯು
ಎತ್ತಲ್ಹಾರಿ ಹೋಯಿತಯ್ಯೊ ೨

ಹಸುರು ಬಣ್ಣದ ಗಿಳಿಯು
ಕುಶಲ ಬುದ್ಧಿಯ ಗಿಳಿಯು
ಅಸುವು ಗುಂದಿ ಮರಿಯು ತಾನು
ಹಸನಗೆಡಿಸಿ ಹೋಯಿತಯ್ಯೊ ೩

ರಾಮ ರಾಮ ಎಂಬ ಗಿಳಿ
ಕೋಮಲ ಕಾಯದ ಗಿಳಿ
ಸಾಮಜ ಪೋಷಕ ತನ್ನ
ಪ್ರೇಮದಿ ಸಾಕಿದ ಗಿಳಿ ೪

ಒಂಬತ್ತು ಬಾಗಿಲ ಮನೆಯೊಳ್
ತುಂಬಿದ ಸಂದಣಿ ಇರಲು
ಕಂಭ ಮುರಿದು ಡಿಂಬ ಬಿದ್ದು
ಅಂಬರಕ್ಕೆ ಹಾರಿ ಹೋಯಿತು ೫

ಮುಪ್ಪಾಗದ ಬೆಣ್ಣೆ ತಿಂದು
ತಪ್ಪದೆ ಹಾಕಿದ ಹಾಲ
ಒಪ್ಪದಿಂದ ಕುಡಿದು ಕೈ-
ತಪ್ಪಿ ಹಾರಿಹೋಯಿತಯ್ಯೊ ೬

ಅಂಗೈಲಾಡುವ ಗಿಳಿ
ಮುಂಗೈ ಮೇಲಣ ಗಿಳಿ
ರಂಗ ಪುರಂದರವಿಠಲನ್ನ
ಅಂಗಣದೊಳಾಡುವ ಗಿಳಿ ೭

---

ಪುರಂದರದಾಸರ ಮಗನೊಬ್ಬ ಅಕಾಲ ಮೃತ್ಯುವಿಗೆ ಈಡಾದಾಗ ರಚಿತವಾದ ಹಾಡು ಇದು-ಎಂದು ಹೇಳಲಾಗುತ್ತದೆ. ಅವನ ಪ್ರಾಣಪಕ್ಷಿ- (ಗಿಳಿ) ಹಾರಿ ಹೋಯಿತೆಂಬ ರೂಪಕ ಇಲ್ಲಿದೆ. ಸಾಮಜ ಪೋಷಕ-ಆನೆ-ಗಜೇಂದ್ರನನ್ನು ಪೋಷಿಸಿದವ, ರಕ್ಷಿಸಿದವ-ಶ್ರೀಹರಿ. (ಸಾಮವೇದದ-ಗಂಧರ್ವ ವಿದ್ಯೆಯನ್ನು ಪೋಷಿಸಿದವರೆಂದು, ತಮ್ಮನ್ನೇ ಹೊಗಳಿಕೊಂಡಿರುವರೆಂಬ, ಅರ್ಥ ಹಚ್ಚುವುದು ಸರಿಯಲ್ಲ).

## ೧೦೦. ಗುಣವಾಯಿತೆನ್ನ ಭವರೋಗ

[ಶ್ರೀಹರಿ ಸ್ತುತಿ-ಚತುರೋಕ್ತಿ]

ರಾಗ: ಹಿಂದೂಸ್ಥಾನಿ ಕಾಪಿ ತಾಳ: ಆದಿ

ಗುಣವಾಯಿತೆನ್ನ ಭವರೋಗ
ಕೃಷ್ಣನೆಂಬ ವೈದ್ಯನು ದೊರಕಿದನು
ಗುಣವಾಗುವವರಿಗೆ ಎಣೆಯಿಲ್ಲ
ಗುಣವಂತರಾಗುವರು ಭವವೆಲ್ಲ ಪ

ಸಂತತ ಹರಿಭಕ್ತಿಯನುಪಾನ
ಸಂತತ ಗುರುಭಕ್ತಿ ಮರುಪಾನ
ಸಂತತ ಶ್ರವಣ ಕಠಿಣ ಪಥ್ಯ
ಸಂತತ ಕೀರ್ತನ ಉಷ್ಣೋದಕ ೧

ಚಂದ್ರೋದಯ ಉಂಟು ಈತನಲಿ
ಚಿಂತಾಮಣಿಯುಂಟು ಈತನಲಿ
ಸಂಚಿಯೊಳಗೆ ತುಂಬ ಮಾತ್ರೆಗಳುಂಟು
ಚೆನ್ನಾಗಿ ಗುಣಮಾಡುವನೀತ ೨

ಗುರುಸ್ಮರಣೆಯು ಶುಂಠಿ ಮೆಣಸು
ಹರಿದಿವ್ಯನಾಮವು ಸಾರನ್ನ
ಗುರುಪಾದಸೇವೆಯು ಸಿಹಿ ಸಾರು
ಹರಿಪಾದೋದಕವೇ ಘೃತವು ೩

ಸಹಸ್ರನಾಮದಿ ತಾ ವಂದ್ಯ
ಸಕಲ ಸ್ವತಂತ್ರಕೆ ತಾ ಬಾಧ್ಯ
ಹರಿಸರ್ವೋತ್ತಮನೆಂಬ ವೈದ್ಯ
ಪುರಂದರವಿಠಲನೆ ನಿಜವೈದ್ಯ ೪

## ೧೦೧. ಗುಮ್ಮನ ಕರೆಯದಿರೆ ಅಮ್ಮ ನೀನು

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ತೋಡಿ ತಾಳ: ಛಾಪು

ಗುಮ್ಮನ ಕರೆಯದಿರೆ ಅಮ್ಮ ನೀನು ಪ.

ಸುಮ್ಮನೆ ಇದ್ದೇನು ಅಮ್ಮಿಯ ಬೇಡೆನು
ಮಮ್ಮು ಉಣ್ಣುತೇನೆ ಅಮ್ಮ ಅಳುವುದಿಲ್ಲ ಅ.ಪ.

ಹೆಣ್ಣುಗಳಿರುವಲ್ಲಿ ಪೋಗಿ ಅವರ
ಕಣ್ಣು ಮುಚ್ಚುವದಿಲ್ಲವೆ
ಚಿಣ್ಣರ ಬಡಿಯೆನು, ಅಣ್ಣನ ಬೈಯೆನು
ಬೆಣ್ಣೆಯ ಬೇಡೆನು ಮಣ್ಣು ತಿನ್ನುವುದಿಲ್ಲ ೧

ಬಾವಿಗೆ ಪೋಗೆ ಕಾಣೆ ಅಮ್ಮ ನಾನು
ಹಾವಿನೊಳಾಡೆ ಕಾಣೆ
ಆವಿನ ಮೊಲೆಯೂಡೆ ಕರುಗಳ ಬಿಡೆ ನೋಡೆ
ದೇವರಂತೆ ಒಂದು ಠಾವಿಲಿ ಕೂಡುವೆ ೨

ಮಗನ ಮಾತ ಕೇಳಿ ಗೋಪಿದೇವಿ
ಮುಗುಳು ನಗೆ ನಗುತ
ಜಗದೊಡೆಯನ ಶ್ರೀ ಪುರಂದರವಿಠಲನ
ಬಿಗಿದಪ್ಪಿಕೊಂಡಳು ಮೋಹದಿಂದಲಾಗ ೩

## ೧೦೨. ಗುರುರಾಯರ ನಂಬಿರೊ ಮಾರುತಿಯೆಂಬ

[ ವಾಯುದೇವರು-ಅವತಾರತ್ರಯ ]

ರಾಗ: ಕಲ್ಯಾಣಿ ತಾಳ: ಅಟ್ಟ

ಗುರುರಾಯರ ನಂಬಿರೊ ಮಾರುತಿಯೆಂಬ
ಗುರುರಾಯರ ನಂಬಿರೊ ಪ.

ಗುರುರಾಯರ ನಂಬಿ ಬಿಡದೆ ಯಾವಾಗಲು
ದುರಿತವ ಕಳೆದು ಸದ್ಗತಿಯ ಪಡೆವರೆಲ್ಲ ಅ.ಪ.

ವನಧಿಯ ಮನೋವೇಗದಿ ಲಂಘಿಸಿ ಮಹಿ-
ತನುಜೆ ಶೋಕವ ತರಿದು
ವನವ ಬೇರೊಡನೆ ಕಿತ್ತೀಡಾಡಿ ಎದುರಾದ
ದನುಜರ ಸದೆದು ಲಂಕೆಯ ತನ್ನ ಸಖಿಗಿತ್ತ ೧

ಕೌರವ ಬಕ ಹಿಡಿಂಬ ಕೀಚಕರೆಂಬ
ದುರುಳ ಸಂತತಿ ನೆಗ್ಗೊತ್ತಿ
ಘೋರಪಾತಕಿ ದುಶ್ಯಾಸನನ ರಕುತವ
ಹೀರಿ ಮುದದಿ ಮುರವೈರಿಯ ಭಜಿಸಿದ ೨

ಜೀವೇಶರೊಂದೆಂಬುವ ದುರ್ವಾದಿಯ ಅ-
ಭಾವ ಶಾಸ್ತ್ರಗಳೋಡಿಸಿ
ಕೋವಿದರಿಗೆ ಸದ್ಭಾಷ್ಯವ ತೋರಿದ
ದೇವ ಪುರಂದರವಿಠಲ ಸೇವಕರಾದ ೩

---

ಹನುಮ ಭೀಮ ಮಧ್ವತ್ರಯರು. ಇಲ್ಲಿಯ ಒಂದೊಂದು ನುಡಿಯಲ್ಲಿ ಸ್ತುತಿಸಲ್ಪಟ್ಟಿದ್ದಾರೆ. ನೆಗ್ಗೊತ್ತಿ-ಹಾಳು ಮಾಡಿ. ಜೀವೇಶರೊಂದೆಂಬುವ-ಜೀವಾತ್ಮ ಪರಮಾತ್ಮರಲ್ಲಿ ಭೇದವೆಣಿಸದ ಅಭಾವಶಾಸ್ತ್ರ-ಅದ್ವೈತಿಗಳ ಶೂನ್ಯತತ್ತ್ವ

## ೧೦೩. ಗುರುವಿನ ಗುಲಾಮನಾಗುವ ತನಕ

[ ಲೋಕನೀತಿ ]

ರಾಗ: ನಾದನಾಮಕ್ರಿಯ ತಾಳ: ಆದಿ

ಗುರುವಿನ ಗುಲಾಮನಾಗುವ ತನಕ
ದೊರೆಯದಣ್ಣ ಮುಕುತಿ ಪ.

ಪರಿಪರಿಶಾಸ್ತ್ರವನೇಕವನೋದಿ
ವ್ಯರ್ಥವಾಯಿತು ಭಕುತಿ ಅ.ಪ.

ಆರು ಶಾಸ್ತ್ರವನೋದಿದರಿಲ್ಲ ಮೂ-
ರಾರು ಪುರಾಣವ ಮುಗಿಸಿದರಿಲ್ಲ
ಸಾರಿ ಸಜ್ಜನರ ಸಂಗವ ಮಾಡದೆ
ಧೀರನಾಗಿ ತಾ ಮೆರೆದರೆ ಇಲ್ಲ ೧

ಕೊರಳೊಳು ಮಾಲೆಯ ಧರಿಸಿದರಿಲ್ಲ
ಬೆರಳೊಳು ಜಪಮಣಿ ಎಣಿಸಿದರಿಲ್ಲ
ಮರುಳನಂತೆ ಶರೀರಕೆ ಬೂದಿಯ
ಒರಸಿಕೊಂಡು ತಾ ತಿರುಗಿದರಿಲ್ಲ ೨

ನಾರಿಯ ಭೋಗ ಅಳಿಸಿದರಿಲ್ಲ
ಶರೀರಕೆ ಸುಖವ ಬಿಡಿಸಿದರಿಲ್ಲ
ನಾರದ ವರದ ಶ್ರೀ ಪುರಂದರವಿಠಲನ
ಮರೆಯದೆ ಮನದೊಳು ಬೆರೆಯುವ ತನಕ ೩

---

ಗಾದೆಮಾತಿನಂತೆ ಬಳಕೆಯಲ್ಲಿದೆ 'ಗುರುವಿನ ಗುಲಾಮನಾಗುವ ತನಕ'... ಆರು ಶಾಸ್ತ್ರಗಳಿವು: ಸಾಂಖ್ಯ, ಯೋಗ, ನ್ಯಾಯ ವೈಶೇಷಿಕ, ಮೀಮಾಂಸಾ ಮತ್ತು ವೇದಾಂತ. ಮೂರಾರು-ಎಂದರೆ ಹದಿನೆಂಟು ಪುರಾಣಗಳು ಪ್ರಸಿದ್ಧವಾಗಿವೆ. ಉಪ ಪುರಾಣಗಳೂ ಇವೆ. ಶರೀರ ಸುಖ ಬಿಡಿಸಿದರೆ-ಎಂದರೆ ವ್ರತ, ಉಪವಾಸಾದಿಗಳನ್ನು ಕೈಕೊಂಡು ಶರೀರಕ್ಕೆ ಕಷ್ಟಕೊಟ್ಟರೆ.

## ೧೦೪. ಗೋಪಿಯ ಭಾಗ್ಯವಿದು ಶ್ರೀಪತಿ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

**ರಾಗ: ಬೇಹಾಗು** **ತಾಳ: ಆದಿ**

ಗೋಪಿಯ ಭಾಗ್ಯವಿದು
ಶ್ರೀಪತಿ ತಾ ಶಿಶುರೂಪಿನಲಿರುವುದು ಪ.

ಕಡು ಮುದ್ದು ರಂಗನ ತೊಡೆಯಮೇಲೆತ್ತುತ
ಜಡೆಯ ಹೆಣೆದು ಹೂ ಮುಡಿಸಿ ಬೇಗ
ಬಿಡದೆ ಮುತ್ತಿನ ಚೆಂದರಳೆಲೆಯನು
ಸಡಗರದಿಂದ ಅಲಂಕರಿಸಿದಳು ೧

ನಿತ್ಯನಿರ್ಮಲನಿಗೆ ನೀರನೆರೆದು ತಂ-
ದೆತ್ತಿ ತೊಡೆಯೊಳಿಟ್ಟು ಮೊಲೆಯೂಡಿ
ಮುತ್ತುಕೊಟ್ಟು ಬಲು ವಿಧದಿಂದಾಡಿಸಿ
ಅರ್ಥಿಯಿಂದಲಿ ತಾ ತೂಗಿದಳು ೨

ದೃಷ್ಟಿ ತಾಕೀತೆಂದಿಟ್ಟು ವಿಭೂತಿಯ
ತಟ್ಟೆಯೊಳಾರತಿಗಳ ಬೆಳಗಿ
ಥಟ್ಟನೆ ಉಪ್ಪು ಬೇವು ನಿವಾಳಿಸಿ
ತೊಟ್ಟಿಲೊಳಿಟ್ಟು ತಾ ತೂಗಿದಳು ೩

ಎನ್ನಯ ರನ್ನನೆ ಸುಮ್ಮನಿರೋ ದೊಡ್ಡ
ಗುಮ್ಮನು ಬರುವನು ಅಳಬೇಡ
ಸುಮ್ಮನೆ ಇರು ನಿನಗಮ್ಮಿ ಕೊಡುವೆನೆಂದು
ಬೊಮ್ಮನ ಪಿತನ ತಾ ತೂಗಿದಳು ೪

ಮಾಧವ ಜೋ ಮಧುಸೂದನ ಜೋ ಜೋ
ಯಾದವ ರಾಯ ಶ್ರೀರಂಗನೆ ಜೋ
ಆದಿಮೂರುತಿ ನಮ್ಮ ಪುರಂದರವಿಠಲನ
ಆದರದಿಂದ ತಾ ತೂಗಿದಳು ೫

## ೧೦೫. ಗೋವಿಂದ ಎನ್ನಿರೊ ಹರಿ ಗೋವಿಂದ ಎನ್ನಿರೊ

[ ಲೋಕನೀತಿ ]

ರಾಗ: ಪಂತುವರಾಳಿ ತಾಳ: ಅಟ್ಟ

ಗೋವಿಂದ ಎನ್ನಿರೊ ಹರಿ ಗೋವಿಂದ ಎನ್ನಿರೊ
ಗೋವಿಂದನ ನಾಮವ ಮರೆಯದಿರಿರೊ ಪ.

ತುಂಬಿರುವ ಪಟ್ಟಣಕೆ ಒಂಬತ್ತು ಬಾಗಿಲು
ಸಂಭ್ರಮದರಸುಗಳೈದುಮಂದಿ
ಡಂಭಕತನದಿಂದ ಕಾಯುವ ಜೀವವ
ನಂಬಿ ನಚ್ಚಿ ಕೆಡಬೇಡಿ ಕಾಣಿರೊ ೧

ನೆಲೆಯು ಇಲ್ಲದ ಕಾಯ ಎಲುವಿನ ಹಂದರವು
ಬಲಿದು ಸುತ್ತಿದ ಚರ್ಮದ ಹೊದಿಕೆ
ಮಲಮೂತ್ರಂಗಳು ಕೀವುಗಳು ಕ್ರಿಮಿಗಳು
ಚೆಲುವ ತೊಗಲನು ಮೆಚ್ಚಿ ಕೆಡಬೇಡಿರಯ್ಯ ೨

ಹರ ಬ್ರಹ್ಮ ಸುರರಿಂದೆ ವಂದಿತನಾಗಿಪ್ಪ
ಹರಿಯೆ ಸರ್ವೋತ್ತಮನೆಂದೆನ್ನಿರೊ
ಪುರಂದರವಿಠಲನ ಸ್ಮರಣೆಯ ಮಾಡಲು
ದುರಿತಭಯಂಗಳ ಪರಿಹರಿಸುವುದು ೩

## ೧೦೬. ಗೋವಿಂದ ನಮೋ ಗೋವಿಂದ ನಮೋ

**[ ಲೋಕನೀತಿ-ಆಧ್ಯಾತ್ಮಿಕ ]**

**ರಾಗ: ಭೂಪಾಳಿ** **ತಾಳ: ತ್ರಿವಿಡೆ**

ಗೋವಿಂದ ನಮೋ ಗೋವಿಂದ ನಮೋ
ಗೋವಿಂದ ನಾರಾಯಣ ಪ.

ಗೋವರ್ಧನ ಗಿರಿಯನೆತ್ತಿದ ಗೋವಿಂದ ನಮ್ಮ ರಕ್ಷಿಸೈ ಅ.ಪ.

ಮಂಚ ಬಾರದು ಮಡದಿ ಬಾರಳು
ಕಂಚುಕನ್ನಡಿ ಬಾರವು
ಸಂಚಿತಾರ್ಥದ ದ್ರವ್ಯ ಬಾರದು
ಮುಂಚೆ ಮಾಡಿರೊ ಧರ್ಮವ ೧

ಅರ್ಥವ್ಯಾರಿಗೆ ಪುತ್ರರ್ಯಾರಿಗೆ
ಮಿತ್ರ ಬಾಂಧವರ್ಯಾರಿಗೆ
ಕರ್ತೃ ಯಮನವರೆಳೆದು ಒಯ್ವಾಗ
ಅರ್ಥಪುತ್ರರು ಕಾಯ್ವರೆ ೨

ತಂದು ಬಂದರೆ ತನ್ನ ಪುರುಷನ
ಬಂದಿರಾ ಬಳಲಿದಿರಾ ಎಂಬಳು
ಒಂದು ದಿವಸ ತಾರದಿದ್ದರೆ
ಹಂದಿನಾಯಂತೆ ಬೊಗಳ್ವಳು ೩

ಪ್ರಾಣವಲ್ಲಭೆ ತನ್ನ ಪುರುಷನ
ಕಾಣದೆ ನಿಲ್ಲಲಾರಳು
ಪ್ರಾಣಹೋಗುವ ಸಮಯದಲ್ಲಿ
ಜಾಣೆ ಕರೆದರೆ ಬಾರಳು ೪

ಉಂಟು ಕಾಲಕೆ ನಂಟರಿಷ್ಟರು
ಬಂಟರಾಗಿ ಕಾಯ್ದರು
ಕಂಟಕ ಯಮನವರು ಎಳೆವಾಗ
ನಂಟರಿಷ್ಟರು ಬಾರರು ೫

ಒಡವೆ ಅರಸಿಗೆ ಒಡಲು ಅಗ್ನಿಗೆ
ಮಡದಿ ಮತ್ತೊಬ್ಬ ಚೆಲುವಗೆ
ಬಡಿದು ಹೊಡೆದು ಯಮನವರೆಳೆವಾಗ
ಎಡವಿ ಬಿದ್ದಿತು ನಾಲಗೆ ೬

ದಿಟ್ಟತನದಲಿ ಪಟ್ಟವಾಳುವ
ಕೃಷ್ಣರಾಯನ ಚರಣವ
ಮುಟ್ಟಿ ಭಜಿಸಿರೊ ಸಿರಿ ಪುರಂದರ
ವಿಟ್ಠಲೇಶನ ಚರಣವ ೭

## ೧೦೭. ಗೋವಿಂದಾ ನಿನ್ನಾನಂದ ಸಕಲ ಸಾಧನವೋ

[ ಶ್ರೀಹರಿ ಸ್ತುತಿ ]

**ರಾಗ: ಮಧ್ಯಮಾವತಿ** **ತಾಳ: ಆದಿ**

ಗೋವಿಂದಾ ನಿನ್ನಾನಂದ ಸಕಲ ಸಾಧನವೋ ಪ.

ಅಣುರೇಣು ತೃಣಕಾಷ್ಠ ಪರಿಪೂರ್ಣ ಗೋವಿಂದ
ನಿರ್ಮಲಾತ್ಮಕನಾಗಿ ಇರುವುದೆ ಆನಂದ ೧

ಸೃಷ್ಟಿ ಸ್ಥಿತಿ ಲಯ ಕಾರಣ ಗೋವಿಂದ
ಈ ಪರಿ ಮಹಿಮೆಯ ತಿಳಿಯೋದೆ ಆನಂದ ೨

ಮಂಗಳಮಹಿಮ ಪುರಂದರವಿಟ್ಠಲ
ಹಿಂಗದೆ ದಾಸರ ಸಲಹೋದೆ ಆನಂದ ೩

## ೧೦೮. ಘಟಿಕಾಚಲದಿ ನಿಂತ ಶ್ರೀ ಹನುಮಂತ

**[ ವಾಯುದೇವರು-ಹನುಮಂತ ]**

ರಾಗ: ನಾದನಾಮಕ್ರಿಯ | ತಾಳ: ಆದಿ

ಘಟಿಕಾಚಲದಿ ನಿಂತ ಶ್ರೀ ಹನುಮಂತ ಪ.

ಘಟಿಕಾಚಲದಿ ನಿಂತ ಪಟು ಹನುಮಂತನ
ಪಠನೆಯ ಮಾಡಲುತ್ಕಟದಿ ಪೊರೆವೆನೆಂದು ಅ.ಪ.

ಚತುರ ಯುಗದಿ ತಾನು ಮುಖ್ಯಪ್ರಾಣನು
ಚತುರಮುಖನಯ್ಯನ
ಚತುರ ಮೂರುತಿಗಳನು ಚತುರತನದಿ ಭಜಿಸಿ
ಚತುರ್ಮುಖನಾಗಿ ಜಗಕೆ ಚತುರ್ವಿಧ ಫಲ ಕೊಡುತೆ ೧

ಸರಸಿಜ ಭವಗೋಸ್ಕರ ಕಲ್ಮಷದೂರ
ವರ ಚಕ್ರತೀರ್ಥ ಸರ
ಮೆರೆವಾಚಲದಿ ನಿತ್ಯ ನರಹರಿಗೆದುರಾಗಿ
ಸ್ಥಿರಯೋಗಾಸನದಿ ಕರೆದು ವರಗಳ ಕೊಡುತೆ ೨

ಶಂಖ ಚಕ್ರವ ಧರಿಸಿ ಭಕ್ತರ ಮನಃ-
ಪಂಕವ ಪರಿಹರಿಸಿ
ಪಂಕಜನಾಭ ಶ್ರೀ ಪುರಂದರವಿಠಲನ
ಬಿಂಕದ ಸೇವಕ ಸಂಕಟ ಕಳೆಯುತ ೩

---

ಆಂಧ್ರಪ್ರದೇಶದ ಘಟಿಕಾಚಲದ ಹನುಮಂತ ತುಂಬಾ ಖ್ಯಾತಿಯವ. ಚತುರ್-ನಾಲ್ಕು ಈ ಸಂಖ್ಯೆಯ ನಿಮಿತ್ತದಿಂದ ವರ್ಣಿಸಿದ್ದಾಗಿದೆ. ನಾಲ್ಕು ಯುಗಗಳು, ಚತುರ್ಮುಖ ಬ್ರಹ್ಮನ ಅಯ್ಯ (ತಂದೆ)ನಾದ ಭಗವಂತನ-ವಾಸುದೇವ, ಸಂಕರ್ಷಣ, ಪ್ರದ್ಯುಮ್ನ ಮತ್ತು ಅನಿರುದ್ಧ-ಎಂಬೀ ನಾಲ್ಕೂ ಮೂರ್ತಿಗಳು. ಇನ್ನು ಚತುರ್ವಿಧ ಫಲಗಳೆಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳು

## ೧೦೯. ಚಂದ್ರಚೂಡ ಶಿವಶಂಕರ

[ ರುದ್ರದೇವರು ]

ರಾಗ: ಧನ್ಯಾಸಿ

ತಾಳ: ಆದಿ

ಚಂದ್ರಚೂಡ ಶಿವಶಂಕರ ಪಾರ್ವತಿರಮಣನೆ ನಿನಗೆ ನಮೋನಮೋ ಪ

ಸುಂದರ ಮೃಗವರ ಪಿನಾಕಧನುಕರ ಗಂಗಾಶಿರ
ಗಜಚರ್ಮಾಂಬರಧರ ಅ.ಪ.

ನಂದಿವಾಹನಾನಂದದಿಂದ ಮೂರ್ಜಗದಿ ಮೆರೆವ ನೀನೆ
ಅಂದು ಅಮೃತ ಘಟದಿಂಮುದಿಸಿದ ವಿಷ ತಂದು ಭುಜಿಸಿದವ ನೀನೆ
ಕಂದರ್ಪನ ಕ್ರೋಧದಿಂದ ಕಣ್ತೆರೆದು ಕೊಂದ ಉಗ್ರ ನೀನೆ
ಇಂದಿರೇಶ ಶ್ರೀರಾಮನ ಪಾದವ ಚಂದದಿ ಪೊಗಳುವ ನೀನೆ ೧

ಬಾಲಮೃಕಂಡಜನ ಕಾಲನು ಎಳೆವಾಗ ಪಾಲಿಸಿದವ ನೀನೆ
ವಾಲಯದಿ ಕಪಾಲ ಪಿಡಿದು ಭಿಕ್ಷ ಬೇಡೋ ದಿಗಂಬರ ನೀನೆ
ಕಾಲಕೂಟವನು ಪಾನಮಾಡಿದ ನೀಲಕಂಠನು ನೀನೆ
ಜಾಲಮಾಡಿದ ಗೋಪಾಲನೆಂಬ ಪೆಣ್ಣಿಗೆ ಮರುಳಾದವ ನೀನೆ ೨

ಧರೆಗೆ ದಕ್ಷಿಣ ಕಾವೇರಿತೀರ ಕುಂಭಪುರವಾಸನು ನೀನೆ
ಕೊರಳೊಳು ರುದ್ರಾಕ್ಷಿ ಭಸ್ಮವ ಧರಿಸಿದ ಪರಮ ವೈಷ್ಣವ ನೀನೆ
ಕರದಲಿ ವೀಣೆಯ ನುಡಿಸುವ ನಮ್ಮ ಉರಗಭೂಷಣನು ನೀನೆ
ಗರುಡಗಮನ ಶ್ರೀ ಪುರಂದರವಿಠಲಗೆ ಪ್ರಾಣಪ್ರಿಯನು ನೀನೆ ೩

---

ರುದ್ರದೇವರ ಸುರಮ್ಯವರ್ಣನೆ. ಅವನ ಕೈಯಲ್ಲಿ ಪಿನಾಕ ಧನುಸ್ಸು ಮತ್ತು ಜಿಂಕೆ ಇವೆ. ಬಾಲಮೃಕಂಡಜನ-ಮೃಕಂಡ ಮುನಿಗಳ ಮಗನಾದ ಮಾರ್ಕಂಡೇಯನನ್ನು ಯಮನು ಎಳೆದೊಯ್ಯುವಾಗ ಶಿವನು ರಕ್ಷಿಸಿದ.
ವಾಲಯ - ಬ್ರಹ್ಮಾಂಡ (ವಲಯ). ಶಿವನು ಶ್ರೀಹರಿಯ ಸುಂದರ ರೂಪವನ್ನ ನೋಡಬಯಸಿದಾಗ ಮೋಹಿನಿಯಾಗಿ ಬಂದ. ಅವನಲ್ಲಿ ಮೋಹಗೊಳ್ಳುವ ಪ್ರಸಂಗವೂ ಇಲ್ಲಿದೆ. ಕಂದರ್ಪ-ಮನ್ಮಥ. ಶ್ರೀರಾಮನ... ಶಿವನು ಪಾರ್ವತಿಗೆ ರಾಮನಾಮ ಮಹಾತ್ಮೆಯನ್ನು ವಿವರಿಸಿದ ಸಂದರ್ಭವಿದು. 'ರುದ್ರಾಕ್ಷಿ ಭಸ್ಮವನ್ನು ಧರಿಸಿದ್ದರೂ ಆತ ಪರಮ ವೈಷ್ಣವ' ಎಂಬ ನಿಲುವನ್ನು ಗಮನಿಸಬೇಕು.

## ೧೧೦. ಚಿಂತೆ ಯಾತಕೊ

[ ಲೋಕನೀತಿ ]

ರಾಗ: ಪೂರ್ವಿ ತಾಳ: ರೂಪಕ

ಚಿಂತೆ ಯಾತಕೊ ಬಯಲ ಭ್ರಾಂತಿ ಯಾತಕೊ
ಕಂತುಪಿತನ ದಿವ್ಯನಾಮ ಮಂತ್ರವಿರಲು ಜಪಿಸದೆ ಪ.

ಏಳುತುದಯ ಕಾಲದಲ್ಲಿ
ವೇಳೆಯರಿತು ಕೂಗುವಂಥ
ಕೋಳಿ ತನ್ನ ಮರಿಗೆ ಮೊಲೆಯ
ಹಾಲ ಕೊಟ್ಟು ಸಲಹಿತೆ? ೧

ಸಡಗರದಲಿ ನಾರಿಜನರು
ಹಡೆಯುವಾಗ ಸೂಲಗಿತ್ತಿ
ಅಡವಿಯೊಳಗೆ ಹೆರುವ ಮೃಗವ
ಪಿಡಿದು ರಕ್ಷಣೆ ಮಾಳ್ಪರಾರು ೨

ಹೆತ್ತ ತಾಯಿ ಸತ್ತ ಶಿಶುವು
ಮತ್ತೆ ಕೆಟ್ಟಿತೆಂಬರು ಜನರು
ಹುತ್ತಿನ ಹಾವಿಗೆ ಗುಬ್ಬಿಗೆ ಮೊಲೆಯ-
ನಿತ್ತು ರಕ್ಷಣ ಮಾಡುವರಾರು ೩

ಗಟ್ಟಿ ಮಣ್ಣಿನ ಶಿಶುವ ಮಾಡಿ
ಹೊಟ್ಟೆಯೊಳಗೆ ಇರಿಸುವಂಥ
ಕೊಟ್ಟ ದೈವ ಕೊಂಡೊಯ್ದರೆ
ಕುಟ್ಟಿಕೊಂಡು ಅಳುವುದೇಕೆ ೪

ನಂಬಿಗೆಗಿವು ಸಾಲವೆಂದು
ಹಂಬಲಿಪುದು ಲೋಕವೆಲ್ಲ
ನಂಬಿ ಪುರಂದರವಿಠಲ-
ನೆಂಬ ನಾಮ ನುಡಿದ ಮೇಲೆ ೫

## ೧೧೧. ಚೋರಗೆ ಚಂದ್ರೋದಯ ಸೊಗಸುವುದೆ?

[ ಲೋಕನೀತಿ ]

ಚೋರಗೆ ಚಂದ್ರೋದಯ ಸೊಗಸುವುದೆ?
ಜಾರೆಗೆ ಸೂರ್ಯೋದಯ ಸೊಗಸುವುದೆ?
ಶ್ರೀರಮಣನ ಕಥೆಯು ಹೀನಗೆ ಮೆಚ್ಚುವುದೆ?
ನಾರಿಯ ನಯನವಿಲ್ಲದ ಚೆಲುವಿಕೆಯು
ಹರಿಸ್ಮರಣವಿಲ್ಲದ ಹಾಡಿಕೆಯು
ಅರಣ್ಯರೋದನವಯ್ಯ ಪುರಂದರವಿಠಲ

## ೧೧೨. ಜಗದುದ್ಧಾರನ ಆಡಿಸಿದಳೆಶೋದೆ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ಹಿಂದೂಸ್ಥಾನಿ ಕಾಪಿ | ತಾಳ: ಆದಿ

ಜಗದುದ್ಧಾರನ ಆಡಿಸಿದಳೆಶೋದೆ ಪ.

ಜಗದುದ್ಧಾರನ ಮಗನೆಂದು ತಿಳಿಯುತ
ಸುಗುಣಾಂತರಂಗನ ಆಡಿಸಿದಳೆಶೋದೆ ಅ.ಪ.

ನಿಗಮಕೆ ಸಿಲುಕದ ಅಗಣಿತ ಮಹಿಮನ
ಮಗುಗಳ ಮಾಣಿಕ್ಯನಾಡಿಸಿದಳೆಶೋದೆ ೧

ಅಣೋರಣೀಯನ ಮಹತೋಮಹೀಯನ
ಅಪ್ರಮೇಯನ ಆಡಿಸಿದಳೆಶೋದೆ ೨

ಪರಮಪುರುಷನ ಪರವಾಸುದೇವನ
ಪುರಂದರವಿಠಲನ ಆಡಿಸಿದಳೆಶೋದೆ ೩

---

ಹಾಡುವಾಗ ಆಡಿಸಿದಳೆಶೋದೆ-ಎಂದೂ ಆರಂಭಿಸುವುದುಂಟು. ಜಗದೋದ್ಧಾರನ ಎಂದು ಹೇಳುವುದು ವ್ಯಾಕರಣರೀತ್ಯಾ ತಪ್ಪು. ಸುಗುಣಾಂತರಂಗನ-ಸತ್ವಗುಣದಿಂದ ಕೂಡಿದವನ. ಸಣ್ಣದಾದ ಅಣುವಿಗಿಂತಲೂ ಸಣ್ಣವ, ದೊಡ್ಡದಕಿಂತಲೂ ದೊಡ್ಡವ-ಎಂಬುದು ಉಪನ್ನಿಷದ್ವಾಕ್ಯದ ಅನುವಾದ. ಒಟ್ಟಿನ ಅರ್ಥ ಭಗವಂತನು ಸರ್ವವ್ಯಾಪಿಯಾದವನು. ಅಪ್ರಮೇಯ-ಎಣಿಕೆಗೆ ನಿಲುಕದವ.

## ೧೧೩. ಜಂಗಮರು ನಾವು ಜಗದೊಳು

[ ಲೋಕನೀತಿ ]

ರಾಗ: ನಾದನಾಮಕ್ರಿಯೆ ತಾಳ: ಏಕ

ಜಂಗಮರು ನಾವು ಜಗದೊಳು ಪ.

ಜಂಗಮರು ನಾವು ಲಿಂಗಾಂಗಿಗಳು
ಮಂಗಳವಂತರು ಭವಿಗಳೆಂತೆಂಬಿರಿ ಅ.ಪ.

ಹರ ಗುರುದೈವ ಕೇಶವ ನಮ್ಮ ಮನೆದೈವ
ವರದ ಮೋಹನ ಗುರು ಶಾಂತೇಶ
ಹರ ಗುರು ದ್ರೋಹ ಮಾಡಿದ ಪರವಾದಿಯು
ರೌರವ ನರಕದಿ ಮುಳುಗುವುದೆ ಸಿದ್ಧ ೧

ವಿಭೂತಿ ನಮಗುಂಟು ವಿಶ್ವೇಶ ನಮಗುಂಟು
ಶೋಭನ ನಾಮ ಮುದ್ರೆಗಳುಂಟು
ಶ್ರೀ ಭಾಗೀರಥಿಯಗಣಿತ ಮಜ್ಜನವುಂಟು
ಸೌಭಾಗ್ಯವೀವ ಮಹಂತನ ಮಠದವರು ೨

ವಿರಕ್ತರು ನಾವು ಶೀಲವಂತರು ನಾವು
ವೀರಭದ್ರ ಪ್ರಿಯಭಕ್ತರು ನಾವು
ಕಾರಣಕರ್ತ ಶ್ರೀಪುರಂದರವಿಠಲನ
ಕಾರುಣ್ಯಕೆ ಮುಖ್ಯ ಪಾತ್ರರು ನಾವು ೩

## ೧೧೪. ಜಯವದೆ ಜಯವದೆ ಈ ಮನೆತನಕೆ

[ಲೋಕನೀತಿ-ಆಧ್ಯಾತ್ಮಿಕ]

ಜಯವದೆ ಜಯವದೆ ಈ ಮನೆತನಕೆ
ಬಿಡು ಬಿಡು ಬಿಡು ಬಿಡು ಮನ ಸಂಶಯವ
ಶುಕನೆಂಬ್ಹಕ್ಕಿ ಹೇಳುತದಪ್ಪ
ಜಗವೆಂಬೋ ಗಿಡ ಹುಟ್ಟೈತಣ್ಣ
ಹಣ್ಣುಗಳೆರಡೂ ಐದಾವಪ್ಪ
ಮೂರು ಬುಡದ ಗಿಡ ಕೇಳಣ್ಣ

ಹಣ್ಣಿನ ಒಳಗೆ ನಾಲ್ಕು ರಸವು
ಐದು ದೊಡ್ಡ ಹರೆ ಕಾಣಪ್ಪ
ಆರು ಬಗೆಯ ಸ್ವರೂಪ ಕೇಳು
ಏಳು ಬಗೆಯ ತೊಗಟುಂಟಣ್ಣ
ಸಣ್ಣ ಗರಿಗಳು ಎಂಟೈದಾವೆ
ಅಕ್ಷವು ಇದಕೆ ಒಂಭತ್ತೈತೆ
ಎಲೆಗಳು ಹತ್ತು ಐದಾವಪ್ಪ
ಒಂದೇ ಹಕ್ಕಿ ಹಣ್ತಿಂತೈತೆ
ಮತ್ತೊಂದ್ಹಕ್ಕಿ ನೋಡುತದಪ್ಪ
ಹಣ್ತಿಂದ್ಹಕ್ಕಿ ಬಡವಾಗೈತೆ
ತಿನ್ನದ ಹಕ್ಕಿ ಬಲಿತೈತಣ್ಣ
ಸುಳ್ಳಲ್ಲ ನೀ ಕೇಳೋ ತಮ್ಮ
ದ್ವಾಸುಪರ್ಣದ ಶ್ರುತಿಯಲ್ಲೈತೆ
ಒಂದೇ ಕುಲದ ಹಕ್ಕಲ್ಲಣ್ಣ
ಒಂದೇ ಕುಲವೆಂದು ತಿಳಿಯಲಿ ಬೇಡ
ತಿಳಿದರೆ ನಿಮಗೆ ಕೇಡಾದೀತು
ಹಳೇ ವಸ್ತ್ರವ ಬಿಸಾಡಣ್ಣ
ಹೊಸ ವಸ್ತ್ರವ ನಿಮಗೆ ದೇವರು ಕೊಟ್ಯಾನು
ಹಕ್ಕಿಯರಸ ಆಡಿದ ಮಾತು
ಉತ್ತಮ ಮಾರ್ಗವ ಹಿಡಿಯೊ ತಮ್ಮಾ
ಮಾರ್ಗವ ಕಟ್ಟಿ ಸುಲಿಯುತ್ತಾರೆ
ಗಿರಿ ದುರ್ಗಂಗಳು ಐದಾವಪ್ಪ
ಮಾರನೆಂಬ ಕಳ್ಳೈದಾನೆ
ಸಮೀರನಾದರೆ ಹೊರಟ್ಹೋಗ್ತಾನೆ
ಪುರಂದರನಾದರೆ ಬಿಡುವೊನಲ್ಲ
ಸುರಜ್ಯೇಷ್ಠನ ಸಂಗತಿ ಹಿಡಿಯೋ ತಮ್ಮಾ
ಕಣ್ಣು ಮೂಗು ಕಿವಿ ನಾಲಿಗೆಯಪ್ಪ
ಒಂದೊಂದೊಬ್ಬರ ಕೊಂದಾವಣ್ಣ
ಕುರಂಗ ಮಾತಂಗ ಪತಂಗವು ಕೇಳೋ
ಭೃಂಗ ಮೀನಾ ಹತವಾದವಣ್ಣ
ಜ್ಞಾನ ಭಕ್ತಿಯೆಂಬ ಮಾರ್ಗವು ಎರಡು

ದೊಡ್ಡ ಮಾರ್ಗವ ಹಿಡಿಬೇಕಣ್ಣ
ದೊಡ್ಡ ಸಂಗತಿ ಬರುವೋತನಕ
ಎರಡೂ ಮನೆಯಲ್ಲಿರಬೇಕಣ್ಣ
ದಾನದ ಕೈಯ ತೋರಿಸಬೇಕು
ಆದರಿಂದ ನದಿಯ ದಾಟುತಿಯಪ್ಪ
ನಿನ್ನ ಯೋಗ್ಯತೆ ತಿಳಿದಮೇಲೆ
ಪುರಂದರವಿಠಲ ಸ್ಥಳ ಕೊಟ್ಟಾನು

---

ಬುಡಬುಡಿಕೆಯವ ಮನೆಬಾಗಿಲಿಗೆ ಬಂದು ಶುಭನುಡಿಯ ಭವಿಷ್ಯ ಹೇಳಿದಂತೆ ವಿಷಯ ಮಂಡನೆ ಇದೆ.

## ೧೧೪. ಜಯ ಜಾನಕೀ ಕಾಂತ ಜಯ ಸಾಧುಜನ ವಿನುತ

[ ಶ್ರೀಹರಿ ಸ್ತುತಿ ]

ರಾಗ: ನಟ್ಟ

ತಾಳ: ಛಾಪು

ಜಯ ಜಾನಕೀ ಕಾಂತ ಜಯ ಸಾಧುಜನ ವಿನುತ ಪ.

ಜಯತು ಮಹಿಮಾನಂತ ಜಯ ಭಾಗ್ಯವಂತ ಜಯ ಜಯ ಅ.ಪ.

ದಶರಥನ ಮಗ ವೀರ ದಶಕಂಠ ಸಂಹಾರ
ಪಶುಪತೀಶ್ವರ ಮಿತ್ರ ಪಾವನ ಚರಿತ್ರ
ಕುಸುಮಬಾಣ ಸುರೂಪ ಕುಶಲಕೀರ್ತಿ ಕಲಾಪ
ಅಸಮ ಸಾಹಸ ಶಿಕ್ಷ ಅಂಬುಜದಳಾಕ್ಷ ೧

ಸಾಮಗಾನವಿಲೋಲ ಸಾಧುಜನ ಪರಿಪಾಲ
ಕಾಮಿತಾರ್ಥಪ್ರದಾತ ಕೀರ್ತಿ ಸಂಜಾತ
ಸೋಮಸೂರ್ಯಪ್ರಕಾಶ ಸಕಲ ಲೋಕಾಧೀಶ
ಶ್ರೀ ಮಹಾ ರಘುವೀರ ಸಿಂಧುಗಂಭೀರ ೨

ಸಕಲ ಶಾಸ್ತ್ರ ವಿಚಾರ ಶರಣಜನ ಮಂದಾರ
ವಿಕಸಿತಾಂಬುಜವದನ ವಿಶ್ವಮಯಸದನ
ಸುಕೃತ ಮೋಕ್ಷಾಧೀಶ ಸಾಕೇತಪುರವಾಸ
ಭಕುತವತ್ಸಲ ರಾಮ ಪುರಂದರವಿಠಲ ೩

## ೧೧೬. ಜಯಮಂಗಳಂ ನಿತ್ಯ ಶುಭಮಂಗಳಂ

[ ಶ್ರೀಹರಿ ಸ್ತುತಿ ]

ರಾಗ: ಭೈರವಿ ತಾಳ: ಛಾಪು

ಜಯಮಂಗಳಂ ನಿತ್ಯ ಶುಭಮಂಗಳಂ ಪ.

ಇಂದೀವರಾಕ್ಷಗೆ ಇಭರಾಜವರದಗೆ
ಇಂದಿರಾರಮಣ ಗೋವಿಂದ ಹರಿಗೆ
ನಂದನ ಕಂದಗೆ ನವನೀತ ಚೋರಗೆ
ವೃಂದಾರಕೇಂದ್ರ ಉಡುಪಿಯ ಕೃಷ್ಣಗೆ ೧

ಕ್ಷೀರಾಬ್ಧಿ ವಾಸಗೆ ಕ್ಷಿತಿಜನ ಪಾಲಗೆ
ಮಾರನನು ಪಡೆದ ಮಂಗಲಮೂರ್ತಿಗೆ
ಚಾರುಚರಣದಿಂದ ಚೆಲುವ ಗಂಗೆಯ ಪಡೆದ
ಕಾರುಣ್ಯಮೂರ್ತಿ ಕೌಸ್ತುಭಧಾರಿಗೆ ೨

ವ್ಯಾಸಾವತಾರಗೆ ವೇದ ಉದ್ಧಾರಗೆ
ವಾಸಿತಾನಂತಪದ ಸಕಲೇಶಗೆ
ವಾಸುದೇವನ ಮೂರ್ತಿ ಪುರಂದರವಿಟ್ಠಲಗೆ
ದಾಸರನು ಕಾಯ್ವ ರುಕ್ಮಿಣಿರಮಣಗೆ ೩

## ೧೧೭. ಜಾಲಿಯ ಮರದಂತೆ ಧರೆಯೊಳು ದುರ್ಜನರು

[ ಲೋಕನೀತಿ ]

ರಾಗ: ಮೋಹನ ತಾಳ: ಅಟ್ಟ

ಜಾಲಿಯ ಮರದಂತೆ ಧರೆಯೊಳು ದುರ್ಜನರು ಪ.

ಮೂಲಾಗ್ರ ಪರಿಯಂತ ಮುಳ್ಳು ಕೂಡಿಪ್ಪಂತೆ ಅ.ಪ.

ಬಿಸಿಲಲ್ಲಿ ಬಳಲಿ ಬಂದವರಿಗೆ ನೆರಳಿಲ್ಲ
ಹಸಿದು ಬಂದವರಿಗೆ ಹಣ್ಣು ಇಲ್ಲ
ಕುಸುಮ ವಾಸನೆಯಿಲ್ಲ ಕೂಡಲು ಸ್ಥಳವಿಲ್ಲ
ರಸದಲ್ಲಿ ಸ್ವಾದವು ವಿಷದಂತೆ ಇರುತಿಹ ೧

ಊರಹಂದಿಗೆ ಷಡ್ರಸಾನ್ನವನಿಕ್ಕಲು
ನಾರುವ ದುರ್ಗಂಧ ಬಿಡಬಲ್ಲುದೆ
ಘೋರಪಾಪಿಗೆ ತತ್ವಜ್ಞಾನವ ಪೇಳಲು
ಕ್ರೂರ ಕರ್ಮವ ಬಿಟ್ಟು ಸುಜನನಾಗುವನೆ ೨

ತನ್ನಿಂದ ಉಪಕಾರ ತೊಟಕಾದರು ಇಲ್ಲ
ಬಿನ್ನಾಣದ ಮಾತಿಗೆ ಕೊನೆಯಿಲ್ಲ
ಅನ್ನಕ್ಕೆ ಸೇರಿದ ಕುನ್ನಿ ಮಾನವರಂತೆ
ಇನ್ನಿವರ ಕಾರ್ಯವು ಪುರಂದರವಿಠಲ ೩

## ೧೧೮. ಜೋ ಜೋ ಶ್ರೀಕೃಷ್ಣ ಪರಮಾನಂದ

[ ಶ್ರೀಕೃಷ್ಣಲೀಲೆ-ಬಾಲಕೃಷ್ಣ ]

ರಾಗ: ಕುರಂಜಿ ತಾಳ: ಆದಿ

ಜೋ ಜೋ ಶ್ರೀ ಕೃಷ್ಣ ಪರಮಾನಂದ
ಜೋ ಜೋ ಗೋಪಿಯ ಕಂದ
ಮುಕುಂದ ಜೋ ಜೋ ಪ.

ಪಾಲಗಡಲೊಳು ಪವಡಿಸಿದವನೆ
ಆಲದೆಲೆಯ ಮೇಲೆ ಮಲಗಿದ ಶಿಶುವೆ
ಶ್ರೀಲತಾಂಗಿಯಳ ಚಿತ್ತದೊಲ್ಲಭನೆ
ಬಾಲ ನಿನ್ನನು ಪಾಡಿ ತೂಗುವೆನಯ್ಯ ಜೋ ಜೋ ೧

ಹೊಳೆವಂಥ ರನ್ನದ ತೊಟ್ಟಿಲ ಮೇಲೆ
ಥಳಥಳಿಸುವ ಗುಲಗಂಜಿಯ ಮಾಲೆ
ಅಳದೆ ನೀ ಪಿಡಿದಾಡೆನ್ನಯ ಮುದ್ದು ಬಾಲ
ನಳಿನನಾಭನೆ ನಿನ್ನ ಪಾಡಿ ತೂಗುವೆನಯ್ಯ ಜೋ ಜೋ ೨

ಯಾರ ಕಂದ ನೀನಾರ ನಿಧಾನಿ
ಯಾರ ರತ್ನವೊ ನೀನಾರ ಮಾಣಿಕವೊ
ಸೇರಿತು ಎನಗೊಂದು ಚಿಂತಾಮಣಿಯೆಂದು
ಪೋರ ನಿನ್ನನು ಪಾಡಿ ತೂಗುವೆನಯ್ಯ ಜೋ ಜೋ ೩

ಗುಣನಿಧಿಯೆ ನಿನ್ನನೆತ್ತಿಕೊಂಡಿದ್ದರೆ
ಮನೆಯ ಕೆಲಸವಾರು ಮಾಡುವರಯ್ಯ
ಮನಕೆ ಸುಖನಿದ್ರೆಯ ತಂದುಕೊ ಬೇಗ
ಫಣಿಶಯನನೆ ನಿನ್ನ ಪಾಡಿ ತೂಗುವೆನು ಜೋ ಜೋ ೪

ಅಂಡಜವಾಹನ ಅನಂತಮಹಿಮ
ಪುಂಡರೀಕಾಕ್ಷ ಶ್ರೀ ಪರಮಪಾವನ್ನ
ಹಿಂಡು ದೈವದ ಗಂಡ ಉದ್ದಂಡನೆ
ಪಾಂಡುರಂಗ ಶ್ರೀ ಪುರಂದರವಿಠಲ ಜೋ ಜೋ ೫

## ೧೧೯. ಡಂಗುರವ ಸಾರಿರಯ್ಯ

[ ಶ್ರೀಹರಿ ಸ್ತುತಿ ]

ರಾಗ: ಪೂರ್ವಿ ತಾಳ: ಆದಿ

ಡಂಗುರವ ಸಾರಿರಯ್ಯ ಡಿಂಗರಿಗರೆಲ್ಲರು ಭೂ-
ಮಂಡಲಕ್ಕೆ ಪಾಂಡುರಂಗವಿಟ್ಠಲ ಪರದೈವವೆಂದು ಪ.

ಹರಿಯು ಮುಡಿದ ಹೂವು ಹರಿವಾಣದೊಳಗಿಟ್ಟುಕೊಂಡು
ಹರುಷದಿಂದ ಹಾಡಿ ಪಾಡಿ ಕುಣಿದು ಚಪ್ಪಾಳಿಕ್ಕುತ ೧

ಒಡಲ ಜಾಗಟೆ ಮಾಡಿ ನುಡಿವ ನಾಲಿಗೆ ಪಿಡಿದು
ಥಂಥಂ ಥಣಾ ಥಣಾರೆಂದು ಹೊಡೆದು ಚಪ್ಪಾಳಿಕ್ಕುತ ೨

ಇಂತು ಜಗಕೆಲ್ಲ ಲಕ್ಷ್ಮೀಕಾಂತನಲ್ಲದಿಲ್ಲವೆಂದು
ಸಂತತ ಶ್ರೀ ಪುರಂದರವಿಟ್ಠಲ ಪರದೈವವೆಂದು ೩

## ೧೨೦. ಡೊಂಕು ಬಾಲದ ನಾಯಕರೆ ನೀವೇನೂಟ ಮಾಡಿದಿರಿ

[ ಲೋಕನೀತಿ-ವಿಡಂಬನೆ ]

ರಾಗ: ನವರೋಜು ತಾಳ: ಆದಿ

ಡೊಂಕು ಬಾಲದ ನಾಯಕರೆ ನೀವೇನೂಟ ಮಾಡಿದಿರಿ ಪ.

ಕಣಕ ಕುಟ್ಟೋ ಅಲ್ಲಿಗೆ ಹೋಗಿ
ಹಣಿಕಿ ಇಣಿಕಿ ನೋಡುವಿರಿ

ಕಣಕ ಕುಟ್ಟೋ ಒನಕೆಲಿ ಬಡಿದರೆ
ಕುಂಯಿ ಕುಂಯಿ ರಾಗವ ಹಾಡುವಿರಿ ೧

ಹುಗ್ಗಿ ಮಾಡೋ ಅಲ್ಲಿಗೆ ಹೋಗಿ
ತಗ್ಗಿ ಬಗ್ಗಿ ನೋಡುವಿರಿ
ಹುಗ್ಗಿ ಮಾಡೋ ಸೌಟಲಿ ಬಡಿದರೆ
ಕುಂಯಿ ಕುಂಯಿ ರಾಗವ ಮಾಡುವಿರಿ ೨

ಹಿರೇ ಬೀದಿಯಲಿ ಓಡುವಿರಿ
ಕರೇ ಬೂದಿಯಲಿ ಹೊರಳುವಿರಿ
ಪುರಂದರವಿಟ್ಠಲರಾಯನ ಈ ಪರಿ
ಮರೆತು ಸದಾ ನೀವು ಚರಿಸುವಿರಿ ೩

## ೧೨೧. ತನಗಿಲ್ಲದಾ ವಸ್ತುವೆಲ್ಲಿದ್ದರೇನು

[ ಲೋಕನೀತಿ-ಪ್ರಾಪಂಚಿಕ ]

ರಾಗ: ಸಾವೇರಿ ತಾಳ: ಆದಿ

ತನಗಿಲ್ಲದಾ ವಸ್ತುವೆಲ್ಲಿದ್ದರೇನು
ತನ್ನ ಮನಕೆ ಬಾರದ ಹೆಣ್ಣು ಮೆಚ್ಚಿ ಬಂದರೇನು ಪ.

ಆದರಣೆಯಿಲ್ಲದೂಟವಮೃತಾನ್ನವಾದರೇನು
ವಾದಿಸುವ ಸತಿಸುತರು ಇದ್ದು ಫಲವೇನು
ಕ್ರೋಧವನು ಬೆಳೆಸುವ ಸೋದರಿಗರಿದ್ದರೇನು
ಮಾದಿಗನ ಮನೆಯಲ್ಲಿ ಮದುವೆಯಾದರೇನು ೧

ಸಾವಿಗಿಲ್ಲದೌಷಧಿಯು ಸಂಚಿ ತುಂಬ ಇದ್ದರೇನು
ದೇವಕೀಸುತನ ಹೊಗಳದ ಕವಿತ್ವವೇನು
ಹೇವವಿಲ್ಲದ ಗಂಡು ಹೆಚ್ಚಾಗಿ ಬಾಳಿದರೇನು
ಹಾವಿನ ಹೆಡೆಯೊಳಗೆ ಹಣವಿದ್ದರೇನು ೨

ಸನ್ಮಾನ ಮಾಡದ ದೊರೆ ಸಾವಿರಾರು ಕೊಟ್ಟರೇನು
ತನ್ನ ತಾ ತಿಳಿಯದ ಜ್ಞಾನವೇನು
ಚೆನ್ನಾಗಿ ಪುರಂದರವಿಠಲನ ನೆನೆಯದವ
ಸಂನ್ಯಾಸಿಯಾದರೇನು ಸಂಸಾರಿಯಾದರೇನು ೩

## ೧೨೨. ತನುವ ನೀರೊಳಗದ್ದಿ ಫಲವೇನು

[ ಲೋಕನೀತಿ-ಬೋಧೆ ]

ರಾಗ: ಮಧ್ಯಮಾವತಿ  ತಾಳ: ಅಟ್ಟ

ತನುವ ನೀರೊಳಗದ್ದಿ ಫಲವೇನು ತನ್ನ
ಮನದಲ್ಲಿ ದೃಢಭಕ್ತಿಯಿಲ್ಲದ ಮನುಜರು ಪ.

ದಾನ ಧರ್ಮಗಳನ್ನು ಮಾಡುವುದೆ ಸ್ನಾನ
ಜ್ಞಾನತತ್ತ್ವಂಗಳ ತಿಳಿವುದೆ ಸ್ನಾನ
ಹೀನ ಪಾಶಂಗಳ ಹರಿವುದೆ ಸ್ನಾನ
ಧ್ಯಾನದಿ ಮಾಧವನ ನೋಡುವುದೆ ಸ್ನಾನ ೧

ಗುರುಗಳ ಶ್ರೀಪಾದ ತೀರ್ಥವೆ ಸ್ನಾನ
ಹಿರಿಯರ ದರ್ಶನ ಮಾಡುವುದೆ ಸ್ನಾನ
ಕರೆದು ಅತಿಥಿಗೆ ಅನ್ನ ಇಡುವುದೆ ಸ್ನಾನ
ನರಹರಿ ಚರಣವ ನಂಬುವುದೆ ಸ್ನಾನ ೨

ದುಷ್ಟರ ಸಂಗವ ಬಿಡುವುದೆ ಸ್ನಾನ
ಶಿಷ್ಟರ ಸಹವಾಸ ಮಾಡುವುದೆ ಸ್ನಾನ
ಸೃಷ್ಟಿಯೊಳಗೆ ಸಿರಿ ಪುರಂದರವಿಠಲನ
ಮುಟ್ಟಿ ಭಜಿಸಿ ಪುಣ್ಯ ಪಡೆವುದೆ ಸ್ನಾನ ೩

## ೧೨೩. ತಾಂಬೂಲವ ಕೊಳ್ಳೋ ತಮನಮರ್ದನನೇ

[ ಶ್ರೀಹರಿ ಸ್ತುತಿ ]

ರಾಗ: ರೀತಿಗೌಳ  ತಾಳ: ಆದಿ

ತಾಂಬೂಲವ ಕೊಳ್ಳೋ ತಮನಮರ್ದನನೇ ಕಮಲವದನನೇ ಪ.

ಅಂಬುಜಾಕ್ಷಿ ಮೋದದಿ ಮಡಚಿ ಕೊಡುತಾಳೆ ಅ.ಪ.

ಸಂಪಿಗೆಣ್ಣೆ ಅತ್ತರು ಚಂದನದೆಣ್ಣೆ
ಈ ಪರಿಪರಿ ವಿಧ ಪರಿಮಳದ ಎಣ್ಣೆ
ಕೆಂಪು ಕೇಸರಿ ಗಂಧ ಕಸ್ತೂರಿಯು
ಚಂಪಕ ಮೊದಲಾದ ಪುಷ್ಪವ ಮುಡಿಯೊ ೧

ಚಿಕ್ಕಣಿ ಅಡಿಕೆ ಕೇದಿಗೆ ಕಾಚು ಕೂಡಿದ ಏ-
ಲಕ್ಕಿ ಜಾಯಿಕಾಯಿ ಲವಂಗ ಜಾಯಪತ್ರೆಯು
ಮೌಕ್ತಿಕದ ಸುಣ್ಣ ಕರ್ಪೂರ ಬೆರಸಿ ತಾ
ರುಕ್ಮಿಣಿದೇವಿಯು ಸಮರ್ಪಿಸುತಾಳೆ ೨

ಮಂಚವ ಹಾಕಿದೆ ಮಲ್ಲಿಗೆ ಹೂವ ತರಿಸಿದೆ
ಮುಂಚೆ ಬಂದು ಮಲಗಯ್ಯ ಮಿಂಚುತಲಿ
ಚಂಚಲಾಕ್ಷಿಯು ನಿನ್ನ ಇದಿರು ನೋಡುತಾಳೆ
ಪಂಚಬಾಣನಯ್ಯ ಶ್ರೀಪುರಂದರವಿಠಲ ೩

## ೧೨೪. ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ

**[ ಲೋಕನೀತಿ-ಆಧ್ಯಾತ್ಮಿಕ ]**

**ರಾಗ: ಸೌರಾಷ್ಟ್ರ** **ತಾಳ: ಛಾಪು**

ತಾರಕ್ಕ ಬಿಂದಿಗೆ ನೀರಿಗೆ ಹೋಗುವೆ ತಾರೇ ಬಿಂದಿಗೆಯ ಪ.

ಬಿಂದಿಗೆ ಒಡೆದರೆ ಒಂದೇ ಕಾಸು ತಾರೇ ಬಿಂದಿಗೆಯ ಅ.ಪ.

ರಾಮನಾಮವೆಂಬ ರಸವುಳ್ಳ ನೀರಿಗೆ ತಾರೇ ಬಿಂದಿಗೆಯ
ಕಾಮಿನಿಯರ ಕೂಡೆ ಏಕಾಂತವಾಡೇನು ತಾರೇ ಬಿಂದಿಗೆಯ ೧

ಗೋವಿಂದಯೆಂಬುವ ಗುಣವುಳ್ಳ ನೀರಿಗೆ ತಾರೇ ಬಿಂದಿಗೆಯ
ಆವಾವ ಪರಿಯಲ್ಲಿ ಅಮೃತದ ನೀರಿಗೆ ತಾರೇ ಬಿಂದಿಗೆಯ ೨

ಬಿಂದುಮಾಧವನ ಘಟ್ಟಕ್ಕೆ ಹೋಗುವೆ ತಾರೇ ಬಿಂದಿಗೆಯ ಪು-
ರಂದರವಿಠಲಗೆ ಅಭಿಷೇಕ ಮಾಡುವೆ ತಾರೇ ಬಿಂದಿಗೆಯ ೩

---

ಇದೊಂದು ಒಡಪಿನ ರಚನೆ. ಬಿಂದಿಗೆಯೆಂದರೆ ಶರೀರ. ಬಿಂದಿಗೆ ಒಡೆಯುವುದೆಂದರೆ, ಶರೀರದ ನಿರ್ನಾಮ. ಕಾಮಿನಿಯರು ಎಂದರೆ ಶರೀರದಲ್ಲಿರುವ ತತ್ತ್ವಾಭಿಮಾನಿಗಳು.

## ೧೨೫. ತಾಸು ಬಾರಿಸುತಿದೆ ಕೇಳಿ ಹರಿದಾಸರೆಲ್ಲ

[ ಲೋಕನೀತಿ ]

ರಾಗ: ಮಧ್ಯಮಾವತಿ ತಾಳ: ಆದಿ

ತಾಸು ಬಾರಿಸುತಿದೆ ಕೇಳಿ ಹರಿದಾಸರೆಲ್ಲ ಪ.

ಶ್ರೀಶನ ಭಜನೆಯ ಮಾಡದ ಮನುಜನ
ಆಯುಷ್ಯ ವೃಥಾ ಹೋಯಿತು ಎಂದು ಅ.ಪ.

ಹಾಸು ಮಂಚ ಸುಪ್ಪತ್ತಿಗೆಯಲ್ಲಿ ಹಗಲು ಇರುಳು
ಹೇಸರಕತ್ತೆಯಂತೆ ಹೊರಳಿ ಸ್ತ್ರೀಯರ ಕೂಡಿ
ಬೇಸರದೆ ನಿತ್ಯ ಉರುಳಿ ಈ ಪರಿಯಿಂದಲಿ ಮಾ-
ನುಷ ಆಯುವು ವೃಥಾ ಹೋಯಿತು ಹೋಯಿತು ಎಂದು ೧

ವಾರ್ಧಕ್ಯ ಬಾಲ್ಯ ಕೆಲವು ಕಾಲ ವಿವೇಕವಿಲ್ಲದ
ಬುದ್ಧಿಮಾಂದ್ಯ ಕೆಲವು ಕಾಲ ಅಜ್ಞಾನದಿಂದ
ನಿದ್ರೆಯಿಂದಲಿ ಅತಿಲೋಲ ಈ ಪರಿ-
ಯಿಂದಲಿ ಕಾಲನ ಮನೆಯು ಸಮೀಪವಾಯಿತು ಆಯಿತು ಎಂದು ೨

ಕಂಡ ಕಂಡ ವಿಷಯವ ಕಾಮಿಸಿ ಕಷ್ಟವ ಪಡದೆಲೆ
ತಾಂಡವ ಶ್ರೀಕೃಷ್ಣನ ಭಜಿಸಿ
ಪುಂಡರೀಕಾಕ್ಷನ ಪುರಾಣಪುರುಷನ
ಪುರಂದರವಿಠಲನ ಭಜಿಸಿ ಬದುಕು ಎಂದು ಥಂಥಣಾ ಥಣರೆಂದು ೩

## ೧೨೬. ತಾಳ ಬೇಕು ತಕ್ಕ ಮೇಳ ಬೇಕು

[ ಲೋಕನೀತಿ ]

ರಾಗ: ಮಧ್ಯಮಾವತಿ ತಾಳ: ಅಟ್ಟ

ತಾಳ ಬೇಕು ತಕ್ಕ ಮೇಳ ಬೇಕು ಶಾಂತ ಪ.

ವೇಳೆ ಬೇಕು ಗಾನವನ್ನು ಕೇಳಬೇಕೆಂಬುವರಿಗೆ ಅ.ಪ.

ಯತಿಪ್ರಾಸವಿರಬೇಕು ಗತಿಗೆ ನಿಲ್ಲಿಸಬೇಕು
ರತಿಪತಿಪಿತನೊಳು ಅತಿ ಪ್ರೇಮವಿರಬೇಕು ೧

ಗಳ ಶುದ್ಧವಿರಬೇಕು ತಿಳಿದು ಪೇಳಲು ಬೇಕು
ಕಳವಳ ಬಿಡಬೇಕು ಕಳೆಮುಖವಿರಬೇಕು ೨

ಅರಿತವರಿರಬೇಕು ಹರುಷ ಹೆಚ್ಚಲಿಬೇಕು
ಪುರಂದರವಿಠಲನೆ ಪರದೈವವೆನಬೇಕು ೩

## ೧೨೭. ತಾಳು ತಾಳೆಲೊ ರಂಗಯ್ಯ

[ ಶ್ರೀಕೃಷ್ಣಲೀಲೆ ]

ರಾಗ: ಶಂಕರಾಭರಣ ತಾಳ: ಆದಿ

ತಾಳು ತಾಳೆಲೊ ರಂಗಯ್ಯ ನೀ
ತಾಳು ತಾಳೆಲೊ ಕೃಷ್ಣಯ್ಯ ಪ.

ನಾಳೆ ನಮ್ಮನೆಗೆ ಬಂದರೆ ನಿನ್ನ
ಕಾಲ ಕಂಭಕೆ ಕಟ್ಟಿ ಪೇಳುವೆ ಗೋಪಿಗೆ ಅ.ಪ.

ದೊರೆಗಳ ಮಗನೆಂಬುದದೇನೊ ಆ-
ತುರದಿ ಮನೆ ಪೊಕ್ಕ ಪರಿಯೇನೊ
ದುರುಳಬುದ್ಧಿ ನಿನಗೆ ತರವೇನೊ ಹಿಂದೆ
ತಿರುಗಿ ಬೇಡ್ಯುಂಡದ್ದು ಮರೆತ್ಯೇನೊ ೧

ಚಿಕ್ಕ ಮಕ್ಕಳು ಹೋದರು ಎಂದು ನೀ ಬಂದು
ಕಕ್ಕುಲತೆಯ ಮಾಡುವರೇನೊ
ಸಿಕ್ಕಿದ ಗೋಪಾಲ ಹಿಡಿಯೆಂದರೆ ನೀ
ಬಿಕ್ಕಿ ಬಿಕ್ಕಿ ಅತ್ತರೆ ಬಿಡುವರೇನೊ ೨

ಕಟ್ಟಿದಾಕಳ ಮೊಲೆಗಳನುಂಡು ಕರು
ಬಿಟ್ಟು ಹೇಳುವುದೇನೆಲೊ ರಂಗ
ಸೃಷ್ಟಿಗೊಡೆಯ ಶ್ರೀ ಪುರಂದರವಿಠಲ ನೀ
ಕಟ್ಟಲ್ಲಿ ನಿಂತ ಕಾರಣವೇನೊ ರಂಗ ೩

## ೧೨೮. ತಿರುಪತಿ ವೆಂಕಟರಮಣ, ನಿನಗೇತಕೆ ಬಾರದು ಕರುಣ

[ ತಿರುಪತಿಯ ಶ್ರೀನಿವಾಸ ]

ರಾಗ: ಖರಹರಪ್ರಿಯ ತಾಳ: ಏಕ

ತಿರುಪತಿ ವೆಂಕಟರಮಣ ನಿನಗೇತಕೆ ಬಾರದು ಕರುಣ ಪ.

ನಂಬಿದೆ ನಿನ್ನಯ ಚರಣ ಪರಿಪಾಲಿಸಬೇಕೊ ಕರುಣ ಅ.ಪ.

ಆಳಗಿರಿಯಿಂದಲಿ ಬಂದಾ ಸ್ವಾಮಿ ಅಂಜನಗಿರಿಯಲಿ ನಿಂದ
ಕೊಳಲೂದೊ ಧ್ವನಿ ಚಂದಾ ನಮ್ಮ ಕುಂಡಲರಾಯ ಮುಕುಂದ ೧

ಬೇಟೆಯಾಡುತ ಬಂದಾ ಸ್ವಾಮಿ ಬೆಟ್ಟದ ಮೇಲೆ ನಿಂದಾ
ನೀಟುಗಾರ ಗೋವಿಂದಾ ಅಲ್ಲಿ ಜೇನು ಸಕ್ಕರೆಯನು ತಿಂದಾ ೨

ಮೂಡಲಗಿರಿಯಲಿ ನಿಂತ ಮುದ್ದು ವೆಂಕಟಪತಿ ಬಲವಂತ
ಈಡಿಲ್ಲ ನಿನಗೆ ಶ್ರೀಕಾಂತಾ ಈರೇಳು ಲೋಕಕನಂತ ೩

ಆಡಿದರೆ ಸ್ಥಿರವಪ್ಪ ಅಬದ್ಧಗಳಾಡಲು ಒಪ್ಪ
ಬೇಡಿದ ವರಗಳನಿಪ್ಪ ನಮ್ಮ ಮೂಡಲಗಿರಿ ತಿಮ್ಮಪ್ಪ ೪

ಅಪ್ಪವ ಅತಿರಸ ಮೆದ್ದ ಸ್ವಾಮಿ ಅಸುರರ ಕಾಲಲಿ ಒದ್ದ
ಸತಿಯರ ಕೂಡಾಡುತಲಿದ್ದ ಸ್ವಾಮಿ ಸಕಲ ದುರ್ಜನರನು ಗೆದ್ದ ೫

ಬಗೆಬಗೆ ಭಕ್ಷ್ಯ ಪರಮಾನ್ನ ನಾನಾ ಬಗೆಯ ಸಕಲ ಶಾಲ್ಯಾನ್ನ
ಬಗೆಬಗೆ ಸೊಬಗು ಮೋಹನ್ನ ನಮ್ಮ ನಗೆಮುಖದ ಪ್ರಸನ್ನ ೬

ಕಾಶೀ ರಾಮೇಶ್ವರದಿಂದ ಅಲ್ಲಿ ಕಾಣಿಕೆ ಬರುವುದೆ ಚಂದ
ದಾಸರ ಕೂಡೆ ಗೋವಿಂದ ಅಲ್ಲಿ ದಾರಿ ನಡೆವುದೇ ಚೆಂದ ೭

ಎಲ್ಲ ದೇವರ ಗಂಡ ಆವ ಚಿಲ್ಲರೆ ದೈವದ ಮಿಂಡ
ಬಲ್ಲಿದರಿಗ ಉದ್ದಂಡ ಶಿವನ ಬಿಲ್ಲ ಮುರಿದ ಪ್ರಚಂಡ ೮

ಕಾಸು ತಪ್ಪಿದರೆ ಪಟ್ಟಿ ಬಡ್ಡಿ ಕಾಸುಬಿಡದೆ ಗಂಟು ಕಟ್ಟಿ
ದಾಸನೆಂದರ ಬಿಡ ಗಟ್ಟಿ ನಮ್ಮ ಕೇಸಕ್ಕಿ ತಿಮ್ಮಪ್ಪಸೆಟ್ಟಿ ೯

ದಾಸರ ಕಂಡರೆ ಪ್ರಾಣ ತಾ ಧರೆಯೊಳಗಧಿಕ ಪ್ರವೀಣ
ದ್ವೇಷಿಯ ಗಂಟಲ ಗಾಣ ನಮ್ಮ ದೇವಗೆ ನಿತ್ಯಕಲ್ಯಾಣ ೧೦

ಮೋಸ ಹೋಗುವನಲ್ಲಯ್ಯ ಒಂದು ಕಾಸಿಗೆ ಒಡ್ಡುವ ಕೈಯ
ಏಸು ಮಹಿಮಗಾರನಯ್ಯ ನಮ್ಮ ವಾಸುದೇವ ತಿಮ್ಮಯ್ಯ ೧೧

ಚಿತ್ತವಧಾನ ಪರಾಕು ನಿನ್ನ ಚಿತ್ತದ ದಯವೊಂದೆ ಸಾಕು
ಸತ್ಯವಾಹಿನಿ ನಿನ್ನ ವಾಕು ನೀನು ಸಕಲ ಜನರಿಗೆ ಬೇಕು ೧೨

ಅಲ್ಲಲ್ಲಿ ಪರಿಷೆಯ ಗುಂಪು ಮತ್ತಲ್ಲಲ್ಲಿ ತೋಪಿನ ತಂಪು
ಅಲ್ಲಲ್ಲಿ ಸೊಗಸಿನ ಸೊಂಪು ಮತ್ತಲ್ಲಲ್ಲಿ ಪರಿಮಳದಿಂಪು ೧೩

ಅಲ್ಲಲ್ಲಿ ಜನಗಳ ಕೂಟ ಮತ್ತಲ್ಲಲ್ಲಿ ಬ್ರಾಹ್ಮಣರೂಟ
ಅಲ್ಲಲ್ಲಿ ಪಿಡಿದ ಕೋಲಾಟ ಮತ್ತಲ್ಲಿಂದ ಊರಿಗೆ ಓಟ ೧೪

ಪಾಪ ವಿನಾಶಿನಿ ಸ್ನಾನ ಹರಿ ಪಾದೋದಕವೇ ಪಾನ
ಕೋಪತಾಪಗಳ ನಿಧಾನ ನಮ್ಮ ಪುರಂದರವಿಠಲನ ಧ್ಯಾನ ೧೫

---

ತಿರುಪತಿಯ ಶ್ರೀನಿವಾಸನನ್ನು ಕುರಿತ ಸೊಗಸಾದ ಕೀರ್ತನೆ. ಆಳಗಿರಿ ಕಡಪಾ ಜಿಲ್ಲೆಯ ಊರು; ಅಲ್ಲಿಂದ ಬಂದವ ತಿರುಪತಿ ಬೆಟ್ಟದಲ್ಲಿ (ಅಂಜನಗಿರಿ) ನಿಂತಿದ್ದಾನೆ. ಅದಕ್ಕೇ ಆತ ಕುಂಡಲ (ಬೆಟ್ಟ) ರಾಯ. ಅತಿರಸ, ಅಪ್ಪವು-ಎಂಬವುಗಳು ಸ್ಥಳೀಯ ಭಕ್ಷ್ಯಗಳು. (ಅಪ್ಪವು ಅತಿರಸ ಎಂದು ಹಿಂದುಮುಂದಾಗಿ ಕೆಲವೆಡೆ ಮುದ್ರಿತವಾಗಿದೆ; ಸರಿಯಲ್ಲ. ಅದರಿಂದ ಪ್ರಾಸವು ತಪ್ಪುವುದು). ದೇವಗೆ ನಿತ್ಯ ಕಲ್ಯಾಣ-ಎಂಬುದು ತಿರುಪತಿಯಲ್ಲಿ ಪ್ರತಿದಿನದ ಕಲ್ಯಾಣೋತ್ಸವವಾಗಿದೆ. ಅಲ್ಲಿಯ ಪುಷ್ಕರಿಣಿ ತೀರ್ಥದ ಸ್ನಾನವು ಪಾಪನಾಶಿಯಾಗಬಲ್ಲುದು. ಶಿವಧನುಸ್ಸನ್ನು ತಿರುಪತಿ ಶ್ರೀನಿವಾಸ ಮುರಿದನೆಂಬ ಪ್ರತೀತಿ ಇಲ್ಲ. ಹಾಗೆ ಮುರಿದವ ಶ್ರೀರಾಮ ಮಾತ್ರವಲ್ಲ; (ಸೀತಾಸ್ವಯಂವರದ ಕಾಲಕ್ಕೆ) ಶ್ರೀಕೃಷ್ಣನೂ ಕಂಸವಧೆಯ ಕಾಲಕ್ಕೆ ಅವನ ಶಿವದತ್ತ ಧನುಸ್ಸನ್ನೂ ಮುರಿದಿದ್ದಾನೆ (ನೋ. ಭಾಗವತ)

## ೧೨೯. ತುಂಗೆ ಮಂಗಳ ತರಂಗೆ

**[ ತುಂಗಭದ್ರ ]**

**ರಾಗ: ಭೂಪಾಳಿ**

**ತಾಳ: ಝಂಪೆ**

ತುಂಗೆ ಮಂಗಳ ತರಂಗೆ ಪ.

ಹರಿಸರ್ವಾಂಗೆ ಜಯ ಜಯತು ಜಯ ಜಯ ತುಂಗಭದ್ರೆ ಅ.ಪ.

ಆದಿಯಲ್ಲೊಬ್ಬ ದೈತ್ಯ ಮೇದಿನಿಯ ಕದ್ದೊಯ್ದು
ಸಾಧಿಸುತ್ತಿರಲವನ ಬೆನ್ನಟ್ಟಿ ಬಿಡದೆ
ಛೇದಿಸುತಲವನ ಭೂಮಿಯನೆತ್ತಿ ಕಾಯ್ದಂಥ
ಆದಿವರಾಹನ ದಾಡೆಗಳಿಂದ ಬಂದೆ ೧

ಜಲವೆಲ್ಲ ಹರಿಮಯ ಶಿಲೆಯಲ್ಲ ಶಿವಮಯ
ಮಳಲು ಮಿಟ್ಟೆಗಳೆಲ್ಲ ಮಣಿಯ ಮಯವು
ಬೆಳೆದಿಪ್ಪ ದರ್ಭೆಗಳು ಸಾಕ್ಷಾತ್ತು ಬ್ರಹ್ಮಮಯ
ನಳಿನ ನಾಳವು ಸರ್ವವಿಷ್ಣುಮಯವು ೨

ಇದೆ ವೃಂದಾವನ ಇದೆ ಕ್ಷೀರಾಂಬುಧಿ
ಇದೆ ವೈಕುಂಠಕೆ ಸರಿಯೆಂದೆನಿಸಿದೆ
ಇದೆ ಬದರಿಕಾಶ್ರಮ ಇದೆ ವಾರಣಾಸಿಗೆ
ಅಧಿಕ ಫಲವನ್ನೀವ ದೇವಿ ೩

ಧರೆಗೆ ದಕ್ಷಿಣ ವಾರಣಾಸಿ ಎಂದೆನಿಸಿದೆ
ಪರಮ ಪವಿತ್ರೆ ಪಾವನ ಚರಿತೆ ನಿನ್ನ
ಸ್ಮರಣೆ ಮಾತ್ರದಿ ಕೋಟಿಜನ್ಮದಘವನು ಕಳೆವ
ಸರಿದು ಸಾಯುಜ್ಯ ಫಲವೀವ ದೇವಿ ೪

ಪರಮ ಭಕ್ತ ಪ್ರಹ್ಲಾದಗೊಲಿದು ಬಂದು
ನರಸಿಂಹ ಕ್ಷೇತ್ರವೆಂದೆನಿಸಿ ಮೆರೆದೆ
ಧರೆಯೊಳಧಿಕ ವರ ಕೂಡಲಿಪುರದಲ್ಲಿ
ವರದ ಪುರಂದರವಿಠಲನಿರಲು ಬಂದೆ ೫

---

ತುಂಗಾ ಮತ್ತು ಭದ್ರಾನದಿಗಳು ಶಿವಮೊಗ್ಗ ಜಿಲ್ಲೆಯಲ್ಲಿ ಸೇರುತ್ತವೆ. ಆ ಕ್ಷೇತ್ರದ ನಿಮಿತ್ತವಾದ ಕೀರ್ತನೆ ಇದು. ಮೇದಿನಿಯನ್ನು ಕದ್ದೊಯ್ದ ದೈತ್ಯನ ಸಂಹಾರಮಾಡಿದ ವರಾಹದೇವರ ದವಡೆಯಿಂದ ಜನಿಸಿದ್ದ ತುಂಗೆಯ ಜೊತೆಗೆ ಭದ್ರಾನದಿಯೂ ಅಲ್ಲಿಂದಲೇ ಬಂದುದೆಂದು ದಾಸರು ತಿಳಿದಿದ್ದಾರೆ. ಈ ಕೂಡಲಿಪುರವು ನರಸಿಂಹದೇವರ ಕ್ಷೇತ್ರವೂ ಹೌದು.

## ೧೩೦. ತೂಗಿರೆ ರಂಗನ ತೂಗಿರೆ ಕೃಷ್ಣನ

[ ಶ್ರೀಕೃಷ್ಣಲೀಲೆ ]

ರಾಗ: ಶಂಕರಾಭರಣ ತಾಳ: ಛಾಪು

ತೂಗಿರೆ ರಂಗನ ತೂಗಿರೆ ಕೃಷ್ಣನ
ತೂಗಿರೆ ಅಚ್ಯುತಾನಂತನ ಪ.

ತೂಗಿರೆ ವರಗಿರಿಯಪ್ಪ ತಿಮ್ಮಪ್ಪನ
ತೂಗಿರೆ ಕಾವೇರಿ ರಂಗಯ್ಯನ ಅ.ಪ.

ನಾಗಲೋಕದಲ್ಲಿ ನಾರಾಯಣ ಮಲಗ್ಯಾನೆ
ನಾಗಕನ್ನಿಕೆಯರು ತೂಗಿರೆ
ನಾಗವೇಣಿಯರು ನೇಣ ಪಿಡಿದುಕೊಂಡು
ಬೇಗನೆ ತೊಟ್ಟಿಲ ತೂಗಿರೆ ೧

ಇಂದ್ರಲೋಕದಲ್ಲುಪೇಂದ್ರ ಮಲಗ್ಯಾನೆ
ಇಂದುಮುಖಿಯರೆಲ್ಲ ತೂಗಿರೆ
ಇಂದ್ರಕನ್ನಿಕೆಯರು ಚಂದದಿ ಬಂದು ಮು-
ಕುಂದನ ತೊಟ್ಟಿಲ ತೂಗಿರೆ ೨

ಆಲದೆಲೆಯ ಮೇಲೆ ಶ್ರೀಲೋಲ ಮಲಗ್ಯಾನೆ
ನೀಲಕುಂತಳೆಯರು ತೂಗಿರೆ
ವ್ಯಾಳಶಯನ ಹರಿ ಮಲಗು ಮಲಗುಯೆಂದು
ಬಾಲಕೃಷ್ಣಯ್ಯನ ತೂಗಿರೆ ೩

ಸಾಸಿರನಾಮನೆ ಸರ್ವೋತ್ತಮನೆಂದು
ಸೂಸುತ್ತ ತೊಟ್ಟಿಲ ತೂಗಿರೆ
ಲೇಸಾಗಿ ಮಡುವಿನೊಳ್ ಶೇಷನ ತುಳಿದಿಟ್ಟ
ದೋಷವಿದೂರನ ತೂಗಿರೆ ೪

ಅರಳೆಲೆ ಮಾಗಾಯಿ ಕೊರಳ ಮುತ್ತಿನಹಾರ
ತರಳನ ತೊಟ್ಟಿಲ ತೂಗಿರೆ
ಸಿರಿದೇವಿ ರಮಣನೆ ಪುರಂದರವಿಠಲನೆ
ಕರುಣದಿ ಮಲಗೆಂದು ತೂಗಿರೆ ೫

## ೧೩೧. ತೇಲಿಸೋ ಇಲ್ಲ ಮುಳುಗಿಸೋ

[ಶ್ರೀಹರಿಸ್ತುತಿ-ಶರಣಾಗತಿ]

ರಾಗ: ಪೂರ್ವಿಕಲ್ಯಾಣಿ
ತಾಳ: ಅಟ್ಟ

ತೇಲಿಸೋ ಇಲ್ಲ ಮುಳುಗಿಸೋ ನಿನ್ನ
ಕಾಲಿಗೆ ಬಿದ್ದೆನೊ ಪರಮ ಕೃಪಾಳೋ ಪ

ಸತಿಸುತ ಧನದಾಸೆ ಎಂಬಂತೆ ಮೋಹದಿ
ಹಿತದಿಂದ ಅತಿ ನೊಂದು ಬೆಂಡಾದೆನೊ
ಗತಿ ಕೊಡುವರ ಕಾಣೆ ಮತಿಯ ಪಾಲಿಸೊ ಲಕ್ಷ್ಮೀ-
ಪತಿ ನಿನ್ನ ಚರಣದ ಸ್ಮರಣೆಯಿತ್ತೆನಗೆ ೧

ಜರೆ ರೋಗ ದಾರಿದ್ರ್ಯ ಕಶ್ಮಲವೆಂತೆಂಬ
ಶರಧಿಯೊಳಗೆ ಬಿದ್ದು ಮುಳುಗಿದೆನೊ
ಸ್ಥಿರವಲ್ಲ ದೇಹವು ನೆರೆ ನಂಬಿದೆ ನಿನ್ನ
ಕರುಣಾಭಯವಿತ್ತು ಪಾಲಿಸೊ ಹರಿಯೆ ೨

ದೋಷವುಳ್ಳವ ನಾನು ಭಾಷೆಯುಳ್ಳವ ನೀನು
ಮೋಸ ಹೋದೆನೊ ಭಕ್ತಿ ರಸವ ಬಿಟ್ಟು
ಶೇಷಶಯನ ಶ್ರೀ ಪುರಂದರವಿಠಲನೆ
ದಾಸರ ಸಂಗವಿತ್ತು ಪಾಲಿಸೊ ಹರಿಯೆ ೩

---

ಕೌಟುಂಬಿಕ ಹಿತಾಸಕ್ತಿಗಳಿಗೆ ಮನಸೋತು, ಕ್ಲೇಶಕ್ಕೊಳಗಾದ ಮೇಲೆ ಭಗವಂತನನ್ನು ಆಶ್ರಯಿಸುವ ಮನೋಭಾವ ಇಲ್ಲಿದೆ. ದೋಷವುಳ್ಳವ - ತಪ್ಪು ಮಾಡುವವ ನಾನು ಆದರೆ ಕಾಪಾಡುವುದಾಗಿ ಮಾತು ಕೊಟ್ಟವ ನೀನು.

## ೧೩೨. ತೋಳು ತೋಳು ತೋಳು ಕೃಷ್ಣ ತೋಳನ್ನಾಡೈ

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ನವರೋಜು ತಾಳ: ಆದಿ

ತೋಳು ತೋಳು ತೋಳು ಕೃಷ್ಣ ತೋಳನ್ನಾಡೈ
ನೀಲಮೇಘಶ್ಯಾಮ ಕೃಷ್ಣ ತೋಳನ್ನಾಡೈ ಪ.

ಗಲಿಕೆಂಬಂದುಗೆ ಉಲಿಯುವ ಗೆಜ್ಜೆಯ ತೋ-
ಅಲುಗುವ ಅರಳೆಲೆ ಮಾಗಾಯ್ಮಿನುಗಲು ತೋ-
ನೆಲುವು ನಿಲುಕದೆಂದೊರಳ ತಂದಿಡುವನೆ ತೋ-
ಚೆಲುವ ಮಕ್ಕಳ ಮಾಣಿಕ್ಯವೆ ನೀ ತೋ- ೧

ದಟ್ಟಡಿಯಿಡುತಲಿ ಬೆಣ್ಣೆಯ ಮೆಲುವನೆ ತೋ-
ಕಟ್ಟಿದ ಕರಡೆಯ ಕರುವೆಂದೆಳೆವನೆ ತೋ-

ಬೊಟ್ಟಿನಲ್ಲಿ ತಾಯ್ಗಣಕಿಸಿ ನಗುವನೆ ತೋ-
ಬಟ್ಟಲ ಹಾಲನು ಕುಡಿದು ಕುಣಿವನೇ ತೋ- ೨

ಅಂಬೆಗಾಲಿಲೊಂದೊರಳನ್ನೆಳೆವನೆ ತೋ-
ತುಂಬಿದ ಬಂಡಿಯ ಮುರಿಯಲೊದ್ದವನೆ ತೋ-
ಕಂಬದಿಂದಲವತರಿಸಿದವನೆ ನೀ ತೋ-
ನಂಬಿದವರನು ಹೊರೆವ ಕೃಷ್ಣ ತೋ- ೩

ಕಾಲಕೂಟದ ವಿಷವ ಕಲಕಿದ ತೋ-
ಕಾಳಿಂಗನ ಹೆಡೆಯನು ತುಳಿದ ತೋ-
ಕಾಳೆಗದಲಿ ದಶಕಂಠನ ಮಡುಹಿದ ತೋ-
ಶಾಲಕ ವೈರಿಯೆ ಕರುಣೆಗಳರಸನೆ ತೋ- ೪

ನಖದಿಂದಲಿ ಹಿರಣ್ಯಕನನು ಸೀಳಿದ ತೋ-
ಸುಖವನಿತ್ತು ಪ್ರಹ್ಲಾದನ ಕಾಯ್ದವ ತೋ-
ವಿಕಳಗೊಳಿಸಿದೆ ಗೋಪಿಯರೆಲ್ಲರ ತೋ-
ರುಕುಮಿಣಿಪತಿ ಸಿರಿಪುರಂದರವಿಟ್ಠಲ ತೋ- ೫

## ೧೩೩. ದಯಮಾಡೊ ರಂಗ

[ ಶ್ರೀಹರಿ ಸ್ತುತಿ-ಶರಣಾಗತಿ ]

**ರಾಗ: ಮಧ್ಯಮಾವತಿ** **ತಾಳ: ಆದಿ**

ದಯಮಾಡೊ ರಂಗ ದಯಮಾಡೊ ಪ.

ದಯಮಾಡೊ ನಿನ್ನ ದಾಸನು ನಾನೆಂದು ಅ.ಪ.

ಹಲವು ಕಾಲದಿ ನಿನ್ನ ಹಂಬಲು ಎನಗೆ
ಒಲಿದು ಪಾಲಿಸಬೇಕು ವಾರಿಜನಾಭ ೧

ಇಹಪರಗತಿ ನೀನೆ ಇಂದಿರಾರಮಣ
ಭಯವೇಕೊ ನೀನಿರಲು ಭಕ್ತರಭಿಮಾನಿ ೨

ಕರಿರಾಜವರದನೆ ಕಾಮಿತ ಫಲದ
ಪುರಂದರವಿಠಲನೆ ಹರಿಸಾರ್ವಭೌಮ ೩

## ೧೩೪. ದಾನವನ ಕೊಂದದ್ದಲ್ಲ ಕಾಣಿರೊ

[ ಶ್ರೀಹರಿ ಸ್ತುತಿ-ನರಸಿಂಹದೇವರು ]

ರಾಗ: ಧನ್ಯಾಸಿ ತಾಳ: ಆದಿ

ದಾನವನ ಕೊಂದದ್ದಲ್ಲ ಕಾಣಿರೊ ಪ.
ಗಾನ ವಿನೋದಿ ನಮ್ಮ ತೊರವೆಯ ನರಸಿಂಹ ಅ.ಪ.

ಅಚ್ಚಪುರುಷನೆಂಬ ಸ್ವಚ್ಛರತ್ನ ಒಡಲೊಳು
ಬಿಚ್ಚಿ ಬೆದಕಿ ನೋಡಿದರೆ ಇನ್ನೆಷ್ಟು ಇದ್ದಾವೊ ಎಂದು ೧

ನೆಂಟತನವು ಬೆಳೆಯಬೇಕೆಂದು ಕರುಳ ಕೊರಳೊಳು
ಗಂಟು ಹಾಕಿಕೊಂಡನೆಷ್ಟೊ ದೇಹ ಸಂಬಂಧದಿಂದ ೨

ತೊರವೆಯ ನಾರಸಿಂಹ ಪ್ರಹ್ಲಾದ ಪಾಲಕ
ಉರಿಮೋರೆ ದೈವ ನಮ್ಮ ಪುರಂದರವಿಠಲ ೩

ಶ್ರೀ ನರಸಿಂಹ ಹಿರಣ್ಯಕಶಿಪುವನ್ನು ಕೊಂದದ್ದು ಅವನೊಬ್ಬ ದೈತ್ಯ ಎಂದಲ್ಲ. ತನ್ನ ಆತ್ಮೀಯ ಪರಿಚಾರಕ ಜಯ (ವಿಜಯ)ನೆಂಬ ಕಾರಣದಿಂದ. ಆ ಸೇವಕನ ಒಡಲಲ್ಲಿ ಏನೇನು ಸದ್ಗುಣಗಳಿವೆಯೋ ಎಂಬ ಕಾರಣದಿಂದ ಕರುಳನ್ನು ಬಗೆದನಂತೆ! ವಿಜಾಪುರ ಜಿಲ್ಲೆಯ ತೂರವಿಯಲ್ಲಿಯ ನರಸಿಂಹದೇವರನ್ನು ಕಂಡಾಗ ಅರಳಿದ ಸುಂದರವಾದ ಕಲ್ಪನೆ ಇದು.

## ೧೩೫. ದಾರಿ ಯಾವುದಯ್ಯ ವೈಕುಂಠಕೆ

[ ಶ್ರೀಹರಿ ಸ್ತುತಿ ]

ರಾಗ: ಕಲ್ಯಾಣಿ ತಾಳ: ಅಟ್ಟ

ದಾರಿ ಯಾವುದಯ್ಯ ವೈಕುಂಠಕೆ ದಾರಿ ತೋರಿಸಯ್ಯ ಪ.

ದಾರಿ ಯಾವುದಯ್ಯ ದಾರಿ ತೋರಿಸಯ್ಯ ಆ-
ಧಾರ ಮೂರುತಿ ನಿನ್ನ ಪಾದ ಸೇರುವುದಕ್ಕೆ ಅ.ಪ.

ಬಲು ಭವದನುಭವದಿ ಕತ್ತಲೆಯೊಳು
ಬಲು ಅಂಜುತೆ ನಡುಗಿ
ಬಳಲುತ್ತ ತಿರುಗಿದೆ ಹಾದಿಯ ಕಾಣದೆ
ಹೊಳೆವಂಥ ದಾರಿಯ ತೋರೊ ನಾರಾಯಣ ೧

ಪಾಪ ಪೂರ್ವದಲ್ಲಿ ಮಾಡಿದುದಕೆ
ಲೇಪವಾಗಿದೆ ಕರ್ಮ
ಈ ಪರಿಯಿಂದಲಿ ನಿನ್ನ ನೆನೆಸಿಕೊಂಬೆ
ಶ್ರೀಪತಿ ಸಲಹೆನ್ನ ಭೂಪನಾರಾಯಣ ೨

ಇನ್ನು ನಾ ಜನಿಸಲಾರೆ ಭೂಮಿಯ ಮೇಲೆ
ನಿನ್ನ ದಾಸನಾದೆನೊ
ಪನ್ನಗಶಯನ ಶ್ರೀ ಪುರಂದರವಿಠಲ
ಇನ್ನು ಪುಟ್ಟಿಸದಿರೊ ಎನ್ನ ನಾರಾಯಣ ೩

## ೧೩೬. ದಾರಿಯೇನಿದಕೆ ಮುರಾರಿ

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ಕಲ್ಯಾಣಿ ತಾಳ: ಅಟ್ಟ

ದಾರಿಯೇನಿದಕೆ ಮುರಾರಿ ನೀ
ಕರುಣದಿ ಕೈ ಹಿಡಿಯದಿದ್ದರೆ ಪ.

ಕಷ್ಟ ಕರ್ಮಂಗಳು ಎಷ್ಟಾದರು ಮಾಳ್ಪೆ
ಇಷ್ಟೂ ಲಕ್ಷಿಪನಲ್ಲ ಗುರುಹಿರಿಯರ
ದುಷ್ಟರ ಸಂಗವ ಬಹಳ ಮಾಡಿದರಿಂದ
ಶ್ರೇಷ್ಠರ ಸೇವೆಯೆಂದರೆ ಆಗದೆನಗೆ ೧

ಪರರ ದೂಷಣೆಮಾಡಿ ಪರರ ಪಾಪಂಗಳ
ಪರಿಪರಿಯಲಿ ಆಡಿಕೊಂಬೆ ನಾನು
ಹರಿನಾಮಾಮೃತವನು ಹೇಳಿ ಕೇಳದೆ ಹಾಳು
ಹರಟೆಯಿಂದ ಹೊತ್ತು ಕಳೆಯುವ ಎನಗೆ ೨

ಪಾತಕ ಕರ್ಮಗಳ ಮಾಡಿದಜಾಮಿಳಗೆ
ಪ್ರೀತಿಯಿಂದಲಿ ಮುಕ್ತಿ ಕೊಡಲಿಲ್ಲವೆ
ನೂತನವೇಕಿನ್ನು ಸೂರ್ಯಾಂತರ್ಗತ ಜಗ
ಜ್ಯೋತಿಯಾದ ಶ್ರೀ ಪುರಂದರವಿಠಲ ೩

## ೧೩೭. ದಾಸನ ಮಾಡಿಕೊ ಎನ್ನ

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ನಾದನಾಮಕ್ರಿಯೆ ತಾಳ: ಆದಿ

ದಾಸನ ಮಾಡಿಕೊ ಎನ್ನ ಇಷ್ಟು ಪ.
ಘಾಸಿ ಮಾಡುವರೇನೊ ಕರುಣಾಸಂಪನ್ನ ಅ.ಪ.

ದುರುಳ ಬುದ್ಧಿಗಳೆಲ್ಲ ಬಿಡಿಸೋ ನಿನ್ನ
ಕರುಣ ಕವಚವೆನ್ನ ಹರಣಕ್ಕೆ ತೊಡಿಸೊ
ಚರಣ ಸೇವೆ ಎನಗೆ ಕೊಡಿಸೊ
ಅಭಯಕರಪುಷ್ಪ ಎನ್ನಯ ಶಿರದೊಳು ಮುಡಿಸೊ ೧

ದೃಢಭಕ್ತಿ ನಿನ್ನಲ್ಲಿ ಬೇಡಿ ದೇವ
ಅಡಿಗೆರಗುವೆನಯ್ಯ ಅನುದಿನ ಪಾಡಿ
ಕಡೆಗಣ್ಣಲೇಕೆನ್ನ ನೋಡಿ ಬಿಡುವೆ
ಕೊಡು ನಿನ್ನ ಧ್ಯಾನವ ಮನ ಶುಚಿ ಮಾಡಿ ೨

ಮೊರೆ ಹೊಕ್ಕವರ ಕಾಯ್ವ ಬಿರುದು ನೀ
ಮರೆಯದೆ ರಕ್ಷಣೆ ಮಾಡೆನ್ನ ಪೊರೆದು
ದುರಿತ ರಾಶಿಗಳೆಲ್ಲ ತರಿದು ಸ್ವಾಮಿ
ಪುರಂದರವಿಠಲ ಕರುಣದಿ ಕರೆದು ೩

## ೧೩೮. ದುರಿತಗಜ ಪಂಚಾನನ

[ ಶ್ರೀಹರಿಸ್ತುತಿ-ಶರಣಾಗತಿ ]

ರಾಗ: ಮಾಧ್ಯಮಾವತಿ ತಾಳ: ಅಟ್ಟ

ದುರಿತಗಜ ಪಂಚಾನನ ನರ-
ಹರಿಯೆ ದೇವರ ದೇವ ಕಾಯಬೇಕೆನ್ನ ಪ.

ಹೆತ್ತ ಮಕ್ಕಳು ಮರುಳಾದರೆ ತಾಯ್ತಂದೆ
ಎತ್ತದೆ ನೆಲಕೆ ಬಿಸುಡುವರೆ ಗೋವಿಂದ ೧

ಅರಸು ಮುಟ್ಟಲು ದಾಸಿ ರಂಭೆಯು ದೇವ
ಪರುಷ ಮುಟ್ಟಲು ಲೋಹ ಹೊನ್ನು ಗೋವಿಂದ ೨

ಹೆಸರುಳ್ಳ ನದಿಗಳನೊಳಗೊಂಬ ಜಲಧಿಯು
ಬಿಸುಡುವನೆ ಕಾಲುಹೊಳೆಗಳನು ಗೋವಿಂದ ೩

ಮುನ್ನ ಮಾಡಿದ ಕರ್ಮ ಬೆನ್ನಟ್ಟಿ ಬಂದರೆ
ನಿನ್ನನ್ನು ಮರೆಹೋಗಲೇಕೆ ಗೋವಿಂದ ೪

ಸ್ಮರಣೆಮಾತ್ರಕಜಾಮಿಳಗೆ ಮುಕ್ತಿಯನಿತ್ತೆ
ವರದ ಪುರಂದರವಿಠಲ ಗೋವಿಂದ ೫

---

'ಕಾಯಬೇಕೆನ್ನ'ಕ್ಕೆ ಪ್ರತಿಯಾಗಿ ಗಿರಿಯ ಗೋವಿಂದ ಎಂಬ ಪಾಠಾಂತರವೂ ಇದೆ. ಪರಸು-ಸ್ಪರ್ಶಮಣಿ. ಕಬ್ಬಿಣವನ್ನು ಬಂಗಾರವಾಗಿ ಪರಿವರ್ತಿಸಬಲ್ಲುದು. ಇಲ್ಲಿಯ ಕೆಲ ಉಕ್ತಿಗಳು ನಾಣ್ಣುಡಿಗಳಂತಿವೆ.

## ೧೩೯. ದೂರು ಮಾಡುವರೇನೆ ರಂಗಯ್ಯನ

[ ಶ್ರೀಕೃಷ್ಣಲೀಲೆ ]

ರಾಗ: ಕೇದಾರಗೌಳ ತಾಳ: ಛಾಪು

ದೂರು ಮಾಡುವರೇನೆ ರಂಗಯ್ಯನ
ದೂರು ಮಾಡುವರೇನೆ ಪ.

ದೂರು ಮಾಡುವರೇನೆ ಚೋರಸೆಂದಿವನನು
ಮೂರು ಲೋಕಕೆ ಮುದ್ದು ತೋರ್ರೋ ರಂಗಯ್ಯನ ಅ.ಪ.

ನಂದಗೋಕುಲದಲಿ ಮಂದೆ ಗೋವುಗಳ
ಮುಂದೆ ಕೊಳಲನೂದಿ ಚಂದದಿ ಬರುವನ ೧

ಗೊಲ್ಲರ ಮನೆಗಳ ಕಳ್ಳತನದಿ ಪೊಕ್ಕು
ಗುಲ್ಲು ಮಾಡುತಲವರ ಗಲ್ಲ ಕಚ್ಚುವನೆಂದು ೨

ಕಾಮದಿಂದಲಿ ನಿನ್ನ ಕಳವಳತನಕಾಗಿ
ಶ್ಯಾಮಸುಂದರ ಶ್ರೀ ಪುರಂದರವಿಠಲನ ೩

## ೧೪೦. ದೇವಕಿ ಕಂದ ಮುಕುಂದ

[ ಶ್ರೀಕೃಷ್ಣಲೀಲೆ ]

ತಾಳ: ಪೀಲು
ರಾಗ: ಆದಿ

ದೇವಕಿ ಕಂದ ಮುಕುಂದ ಪ.

ನಿಗಮೋದ್ಧಾರ ನವನೀತ ಚೋರ
ಖಗಪತಿ ವಾಹನ ಜಗದೋದ್ಧಾರ ೧

ಶಂಖ ಚಕ್ರಧರ ಶ್ರೀ ಗೋವಿಂದ
ಪಂಕಜಲೋಚನ ಪರಮಾನಂದ ೨

ಮಕರಕುಂಡಲಧರ ಮೋಹನವೇಷ
ರುಕುಮಿಣಿ ವಲ್ಲಭ ಪಾಂಡವ ಪೋಷ ೩

ಕಂಸಮರ್ದನ ಕೌಸ್ತುಭಾಭರಣ
ಹಂಸವಾಹನ ಪೂಜಿತ ಚರಣ ೪

ವರ ವೇಲಾಪುರ ಚೆನ್ನ ಪ್ರಸನ್ನ
ಪುರಂದರವಿಠಲ ಸಕಲ ಗುಣಪೂರ್ಣ ೫

## ೧೪೧. ದೇವ ಬಂದ ನಮ್ಮ ಸ್ವಾಮಿ ಬಂದನೊ

[ ಶ್ರೀಹರಿ ಸ್ತುತಿ ]

ರಾಗ: ಬೇಹಾಗು
ತಾಳ: ಆದಿ

ದೇವ ಬಂದ ನಮ್ಮ ಸ್ವಾಮಿ ಬಂದನೊ
ದೇವರ ದೇವ ಶಿಖಾಮಣಿ ಬಂದನೊ ಪ

ಉರಗಶಯನ ಬಂದ ಗರುಡಗಮನ ಬಂದ
ನರಗೊಲಿದವ ಬಂದ ನಾರಾಯಣ ಬಂದ ೧

ಮಂದರೋದ್ಧರ ಬಂದ ಮಾಮನೋಹರ ಬಂದ
ಬೃಂದಾವನಪತಿ ಗೋವಿಂದ ಬಂದನೊ ೨

ನಕ್ರಹರನು ಬಂದ ಚಕ್ರಧರನು ಬಂದ
ಅಕ್ರೂರಗೊಲಿದ ತ್ರಿವಿಕ್ರಮ ಬಂದನೊ ೩

ಪಕ್ಷಿವಾಹನ ಬಂದ ಲಕ್ಷ್ಮಣಾಗ್ರಜ ಬಂದ
ಅಕ್ಷಯ ಫಲದ ಶ್ರೀ ಲಕ್ಷ್ಮೀರಮಣ ಬಂದನೊ ೪

ನಿಗಮಗೋಚರ ಬಂದ ನಿತ್ಯತೃಪ್ತನು ಬಂದ
ನಗೆಮುಖ ಪುರಂದರವಿಠಲ ಬಂದನೊ ೫

---

ನರಗೊಲಿದವ-ಅರ್ಜುನನಿಗೆ ಒಲಿದವನು. ಮಾಮನೋಹರ-ಲಕ್ಷ್ಮಿಗೆ ಒಲಿದವನು. ನಕ್ರಹರ-ಮೊಸಳೆಯನ್ನು ಕೊಂದವನು. ಅಕ್ಷಯಫಲದ-ದ್ರೌಪದಿಗೆ ಅಕ್ಷಯಪಾತ್ರೆ, ಅಕ್ಷಯ ವಸ್ತ್ರವನ್ನಿತ್ತವನು.

## ೧೪೨. ಧನವ ಗಳಿಸಬೇಕಿಂತಹದು

[ ಲೋಕನೀತಿ-ಬೋಧೆ ]

ರಾಗ: ಪೂರ್ವಿ ತಾಳ: ಏಕ

ಧನವ ಗಳಿಸಬೇಕಿಂತಹದು ಈ
ಜನರಿಗೆ ಕಾಣಿಸದಂತಹದು ಪ.

ಕೊಟ್ಟರೆ ತೀರದಂತಹದು ತನ್ನ
ಬಿಟ್ಟು ಅಗಲಿ ಇರದಂತಹದು
ಕಟ್ಟಿದ ಗಂಟನು ಬಯಲೊಳಗಿಟ್ಟರೆ
ಮುಟ್ಟರು ಆರೂ ಅಂತಹದು ೧

ಕರ್ಮವನೋಡಿಸುವಂತಹದು
ಧರ್ಮವ ಮಾಡಿಸುವಂತಹದು
ನಿರ್ಮಲವಾಗಿಸಿ ಮನಸಿನೊಳಗೆ ನಿಜ
ಧರ್ಮವ ತೋರಿಸುವಂತಹದು ೨

ಅಜ್ಞಾನವು ಬಾರದಂತಹದು ನಿಜ
ಸುಜ್ಞಾನವ ತೋರುವಂತಹದು
ವಿಜ್ಞಾನಮೂರುತಿ ಪುರಂದರವಿಠಲನ
ಪ್ರಜ್ಞೆಯನ್ನು ಕೊಡುವಂತಹದು ೩

## ೧೪೩. ಧರಣಿಗೆ ಧೊರೆಯೆಂದು ನಂಬಿದೆ

[ ಶ್ರೀಹರಿ ಸ್ತುತಿ-ದಶಾವತಾರ (ನಿಂದಾಸ್ತುತಿ) ]

ರಾಗ: ಶಂಕರಾಭರಣ ತಾಳ: ತ್ರಿವಿಡೆ

ಧರಣಿಗೆ ಧೊರೆಯೆಂದು ನಂಬಿದೆ, ಇಂಥ
ಪರಮಲೋಭಿ ಎಂಬುದರಿಯೆ ಶ್ರೀಹರಿಯೆ ಪ.

ಕಾಡಿ ಬೇಡುವರಿಗೆ ಕೊಡಲಾರದೆ ಅಂಜಿ
ಓಡಿ ನೀರೊಳು ಸೇರಿಕೊಂಡೆ ಬೇಗ
ಹೇಡಿಯ ತೆರದಲಿ ಮೋರೆಯ ತೋರದೆ
ಓಡಿ ಅರಣ್ಯದಿ ಮೃಗಗಳ ಸೇರ್ದೆ ೧

ಬಡವರ ಬಿನ್ನಹ ಲಾಲಿಸದೆ ಹಲ್ಲ
ಕಡು ಕೋಪದಲಿ ತೆರೆದಂಜಿಸಿದೆ
ತಡೆಯದೆ ಭಿಕ್ಷುಕನಾದರೆ ಬಿಡರೆಂದು
ಕೊಡಲಿಯ ಪಿಡಿದು ಕೋಡಗಪಿಂಡ ಕಾಯ್ದೆ ೨

ಉತ್ತಮನೆಂದರೆ ಮತ್ತೆ ಚೋರನಾದೆ
ಬತ್ತಲೆ ನಿಂತೆ ತೇಜಿಯನೇರಿದೆ
ಎತ್ತಹೋದರು ಬಿಡೆ ಮತ್ತೆ ನಿನ್ನನು ದೇವ
ಚಿತ್ತಜಜನಕ ಶ್ರೀ ಪುರಂದರವಿಠಲ ೩

---

ಇಲ್ಲಿಯ ನಿಂದಾಸ್ತುತಿಯ ವೈಶಿಷ್ಟ್ಯವೆಂದರೆ ಒಂದೊಂದು ನುಡಿಯಲ್ಲಿ ಹಲವು ಅವತಾರಗಳು ಕಾಣಿಸಿಕೊಳ್ಳುತ್ತವೆ. ಒಂದನೆಯ ನುಡಿಯಲ್ಲಿ ಮತ್ಸ್ಯ-ವರಾಹ ಅವತಾರಗಳು. ಎರಡನೆಯದರಲ್ಲಿ ನರಸಿಂಹ, ಪರಶುರಾಮ ಶ್ರೀರಾಮ ಅವತಾರಗಳು. ಮೂರನೆಯದರಲ್ಲಿ ಕೃಷ್ಣ, ಬೌದ್ಧ, ಕಲ್ಕ್ಯವತಾರಗಳು ಮೂಡಿಬಂದಿವೆ.

## ೧೪೪. ಧರ್ಮಕ್ಕೆ ಕೈ ಬಾರದೀ ಕಾಲ

[ ಲೋಕನೀತಿ-ಪಾಪಂಚಿಕ ]

ರಾಗ: ಪೂರ್ವಿ ತಾಳ: ಅಟ್ಟ

ಧರ್ಮಕ್ಕೆ ಕೈ ಬಾರದೀ ಕಾಲ ಪಾಪ
ಕರ್ಮಕ್ಕೆ ಮನ ಸೋಲುವುದೀ ಕಾಲ ಪ.

ದಂಡ ದ್ರೋಹಕೆ ಉಂಟು, ಪುಂಡು ಪೋಕರಿಗುಂಟು
ಹೆಂಡತಿ ಮಕ್ಕಳಿಗಿಲ್ಲೀ ಕಾಲ
ದಿಂಡೇರಿಗುಂಟು ಜಗಭಂಡರಿಗುಂಟು
ಅಂಡಲೆವರಿಗಿಲ್ಲವೀ ಕಾಲ ೧

ಮತ್ತೆ ಸುಳ್ಳರಿಗುಂಟು ನಿತ್ಯ ಹಾದರಕುಂಟು
ಉತ್ತಮರಿಗಿಲ್ಲವೀ ಕಾಲ
ತೊತ್ತೇರಿಗುಂಟು ತಾಟಕಿಗುಂಟು
ಹೆತ್ತತಾಯಿಗಿಲ್ಲವೀ ಕಾಲ ೨

ಹುಸಿ ದಿಟವಾಯಿತು ರಸ ಕಸವಾಯಿತು
ಸೊಸೆ ಅತ್ತೆಯ ದಂಡಿಸೋದೀ ಕಾಲ
ಬಿಸಜಾಕ್ಷ ಪುರಂದರವಿಠಲನ ಮನದಲ್ಲಿ
ಸ್ತುತಿಸುವವರಿಗಿಲ್ಲವೀ ಕಾಲ ೩

## ೧೪೫. ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ

[ ಲೋಕನೀತಿ-ಚತುರೋಕ್ತಿ ]

ರಾಗ: ಪಂತುವರಾಳಿ ತಾಳ: ಆದಿ

ಧರ್ಮವೆಂಬ ಸಂಬಳವ ಗಳಿಸಿಕೊಳ್ಳಿರೊ
ಹೆರ್ಮೆಯಿಂದ ದೇಹವ ನಂಬಬೇಡಿ ಕಾಣಿರೊ ಪ.

ಅಟ್ಟ ಅಡುಗೆ ಉಣಲು ಬಿಡನು
ಕೊಟ್ಟ ಸಾಲ ಕೇಳಬಿಡನು
ಪೆಟ್ಟಿಗೆಯೊಳಿದ್ದ ಚಿನ್ನವ
ತೊಟ್ಟೆನೆಂದರೆ ಯಮನು ಬಿಡನು ೧

ಅಕ್ಕನಿಲ್ಲಿ ಕರೆಯಲಿಲ್ಲ
ಮಕ್ಕಳನ್ನು ಪಡೆಯಲಿಲ್ಲ
ದುಃಖಗೊಂಡ ಕಣ್ಣೀರನು
ಉಕ್ಕಿಸಿದರೆ ಬಿಡನು ಯಮನು ೨

ಪೇಳ್ವೆ ನೆಂಟರಿಂಗೆ ಕರೆದು
ಬೇಳೆ ಬೆಲ್ಲವನ್ನು ತಂದು
ನಾಳೆ ಮಗನ ಮದುವೆಯೆಂದು
ತಾಳು ಎಂದರೆ ಯಮನು ಬಿಡನು ೩

ಮಾಳಿಗೆ ಮನೆಯಿರಲಿ
ಜಾಳಿಗೆ ತುಂಬ ಹೊನ್ನಿರಲಿ
ಆಳು ಮಂದಿ ಶಾನೆಯಿರಲಿ
ಕಾಲನು ತಾ ಬೆನ್ನ ಬಿಡನು ೪

ಆರ್ತಿಯಿಂದ ಸಂಸಾರವ
ವ್ಯರ್ಥವಾಗಿ ನೆಚ್ಚಬೇಡಿ
ಕರ್ತು ಪುರಂದರವಿಠಲನ್ನ
ಭಕ್ತಿಯಿಂದ ಭಜಿಸಿರೋ ೫

## ೧೪೬. ಧರ್ಮವೇ ಜಯವೆಂಬ ದಿವ್ಯಮಂತ್ರ

[ ಲೋಕನೀತಿ-ಬೋಧೆ ]

ರಾಗ: ಸಾವೇರಿ ತಾಳ: ಅಟ್ಟ

ಧರ್ಮವೇ ಜಯವೆಂಬ ದಿವ್ಯಮಂತ್ರ ಪ.

ಮರ್ಮವನರಿತು ಮಾಡಲಿಬೇಕು ತಂತ್ರ ಅ.ಪ.

ವಿಷವಿಕ್ಕಿದವಗೆ ಷಡ್ರಸವನುಣಿಸಲಿಬೇಕು
ದ್ವೇಷ ಮಾಡಿದವನ ಪೋಷಿಸಲಿಬೇಕು
ಪುಸಿ ಮಾಡಿ ಕೆಡಿಸುವನ ಹಾಡಿ ಹರಸಲಿಬೇಕು
ಮೋಸ ಮಾಡುವನ ಹೆಸರು ಮಗನಿಗಿಡಬೇಕು ೧

ಹಿಂದೆ ನಿಂದಿಪರನ್ನು ವಂದಿಸುತಲಿರಬೇಕು
ಬಂಧನದೊಳಿಟ್ಟವರ ಬೆರೆಯಬೇಕು
ಕೊಂದ ವೈರಿಯ ಮನೆಗೆ ನಡೆದು ಹೋಗಲಿಬೇಕು
ಕುಂದೆಣಿಸುವವರ ಗೆಳೆತನ ಮಾಡಬೇಕು ೨

ಕೊಂಡೊಯ್ದು ಬಡಿಯುವರ ಕೊಂಡಾಡುತಿರಬೇಕು
ಕಂಡು ಸಹಿಸದವರ ಕರೆಯಬೇಕು
ಪುಂಡರೀಕಾಕ್ಷ ಶ್ರೀಪುರಂದರವಿಟ್ಠಲನ
ಕೊಂಡಾಡಿ ತಾ ಧನ್ಯನಾಗಬೇಕು ೩

---

ಜೀವನದಲ್ಲಿ ಪ್ರತೀಕಾರ ಇಟ್ಟುಕೊಳ್ಳದೆ ಭೂತದಯೆ, ಅಹಿಂಸೆ, ಶಾಂತಿ, ಔದಾರ್ಯಗಳನ್ನು ಬೆಳೆಸಿಕೊಳ್ಳಬೇಕೆಂಬುದು ಇಲ್ಲಿನ ಆಶಯ.

## ೧೪೭. ಧ್ಯಾನವು ಕೃತಯುಗದಲ್ಲಿ

[ ಲೋಕನೀತಿ ]

ಧ್ಯಾನವು ಕೃತಯುಗದಲ್ಲಿ
ಯಜ್ಞಯಾಗವು ತ್ರೇತಾಯುಗದಲ್ಲಿ
ಅರ್ಚನೆ ದ್ವಾಪರದಲ್ಲಿ
ಕೀರ್ತನೆ ಮಾತ್ರದಿ ಕಲಿಯುಗದಲ್ಲಿ
ಮುಕುತಿಯನೀವ ಪುರಂದರವಿಠಲ

## ೧೪೮. ನಂಬದಿರು ಈ ದೇಹ ನಿತ್ಯವಲ್ಲ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಮಧ್ಯಮಾವತಿ ತಾಳ: ಝಂಪೆ

ನಂಬದಿರು ಈ ದೇಹ ನಿತ್ಯವಲ್ಲ
ಅಂಬುಜಾಕ್ಷನ ಭಜಿಸಿ ಸುಖಿಯಾಗೊ ಮನವೆ ಪ.

ಎಲುಬು ರಕ್ತ ಮಾಂಸಗಳು ಮೇಲೆ ಚರ್ಮದ ಹೊದಿಕೆ
ಒಳಗೆ ಮಲ ಮೂತ್ರ ಕ್ರಿಮಿರಾಶಿ ಇಹವು
ಹಲವು ವ್ಯಾಧಿಯ ಬೀಡು ಪಂಚಭೂತದ ನಾಡು
ಬಲುಹು ದೇಹವ ನೆಚ್ಚಿ ಕೆಡಬೇಡ ಮನವೆ ೧

ಸತಿ ಸುತರು ಹಿತರೆಂದು ಮತಿ ಮರೆತು ಮಮತೆಯಲಿ
ಅತಿಕಾಂಕ್ಷೆಯಿಂದ ದುರ್ವಿಷಯ ಬಲಿದು
ಸತತ ಲಕ್ಷ್ಮೀಪತಿಯ ಶರಣೆನ್ನದಿಹಪರದ
ಗತಿ ಶೂನ್ಯನಾಗಿ ನೀ ಕೆಡಬೇಡ ಮನವೆ ೨

ಪರರ ನಿಂದಿಸದೆ ಪರ ವಧುಗಳನು ಬಯಸದೆ
ಗುರು ವಿಪ್ರ ಸೇವೆಯನು ಮಾಡು ಬಿಡದೆ
ಹರಿ ಸ್ತುತಿಯ ನೀ ಕೇಳು ಹರಿ ಕೀರ್ತನೆಯ ಪಾಡು
ಸಿರಿ ಪುರಂದರವಿಠಲನೊಲಿದು ಪಾಲಿಸುವ ೩

---

ಈ ದೇಹವೆಂಬುದು-ಪೃಥ್ವಿ, ಅಪ್, ತೇಜ, ವಾಯು ಹಾಗೂ ಆಕಾಶಗಳೆಂಬ ಐದು ಘಟಕಗಳಿಂದ ಕೂಡಿದ 'ನಾಡು'. ಇದರಲ್ಲಿ ಬಲುಹು-ಎಂದರೆ ಬಲ, ಶಕ್ತಿ ಇದೆಯೆಂದು ನೆಚ್ಚಬಾರದು.

## ೧೪೯. ನಂಬಿ ಕೆಟ್ಟವರಿಲ್ಲವೊ ರಂಗಯ್ಯನ

[ ಶ್ರೀಹರಿಸ್ತುತಿ-ಭಕ್ತವಾತ್ಸಲ್ಯ ]

ರಾಗ: ಕಲ್ಯಾಣಿ ತಾಳ: ಆದಿ

ನಂಬಿ ಕೆಟ್ಟವರಿಲ್ಲವೊ ರಂಗಯ್ಯನ
ನಂಬದೆ ಕೆಟ್ಟರೆ ಕೆಡಲಿ ಪ.

ಅಂಬುಜನಾಭನ ಅಖಿಳ ಲೋಕೇಶನ
ಅಪ್ರಮೇಯನಾದ ಆದಿಪುರುಷನ ಅ.ಪ.

ಪಿತನ ತೊಡೆಯ ಮೇಲೆ ಧ್ರುವರಾಯ
ಹಿತದಿಂದ ಕುಳಿತಿರಲು
ಮತಿಹೀನಳಾದ ಸುರುಚಿದೇವಿ ನೂಕಲು
ಹಿತದಿ ಧ್ರುವಗೆ ಪಟ್ಟ ಕೊಟ್ಟ ಮುರಾರಿಯ ೧

ವರ ಪ್ರಹ್ಲಾದನ ಪಿತನು ಬಾಧಿಸುತಿರೆ
ಹರಿ ನೀನೆ ಗತಿಯೆನಲು
ಪರಮ ಪ್ರೀತಿಯಿಂದ ತರಳನ ಪಾಲಿಸಿ
ದುರುಳ ಹಿರಣ್ಯಕಶ್ಯಪನ ಸೀಳಿದ ದೊರೆಯ ೨

ಕರಿರಾಜನ ಸಲಹಿ ಅಂಜದಿರೆಂದು ಆ-
ದರಿಸಿದವರು ಯಾರೋ
ಗರುಡಗಮನ ಶ್ರೀ ಪುರಂದರವಿಠಲನ
ಚರಣಕಮಲವನ್ನು ದೃಢದಿಂದ ನಂಬಿರೊ ೩

## ೧೫೦. ನಗೆಯು ಬರುತಿದೆ ಎನಗೆ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಪಂತುವರಾಳಿ ತಾಳ: ಏಕ

ನಗೆಯು ಬರುತಿದೆ ಎನಗೆ ನಗೆಯು ಬರುತಿದೆ ಪ

ಜಗದೊಳಿರುವ ಜಾಣರೆಲ್ಲ ಹಗರಣ ಮಾಡುವುದನೆ ಕಂಡು ಅ.ಪ.

ಪರರ ವನಿತೆಯೊಲುಮೆಗೊಲಿದು
ಹರುಷದಿಂದ ಅವಳ ಬೆರೆದು
ಹರಿವ ನೀರೊಳಗೆ ಮುಳುಗಿ
ಬೆರಳನೆಣಿಸುತಿಹರ ಕಂಡು ೧

ಪತಿಯ ಸೇವೆ ಬಿಟ್ಟು ಪರ
ಪತಿಯ ಕೂಡೆ ಸರಸವಾಡಿ
ಸತತ ಮೈಯ ತೊಳೆದು ಹಲವು
ವ್ರತವ ಮಾಳ್ಪ ಸತಿಯ ಕಂಡು ೨

ಹೀನ ಗುಣವ ಮನದೊಳಿಟ್ಟು
ತಾನು ವಿಷದ ಪುಂಜನಾಗಿ
ಮೌನಿ ಪುರಂದರವಿಠಲನ್ನ
ಧ್ಯಾನ ಮಾಡುವವನ ಕಂಡು ೩

## ೧೫೧. ನರನಾದ ಮೇಲೆ ಹರಿನಾಮ

[ ಲೋಕನೀತಿ ]

ರಾಗ: ನಾದನಾಮಕ್ರಿಯೆ ತಾಳ: ಆದಿ

ನರನಾದ ಮೇಲೆ ಹರಿನಾಮ ಜಿಹ್ವೆಯೊಳಿರಬೇಕು ಪ.

ಭೂತದಯಾಪರನಾಗಿರಬೇಕು
ಪಾತಕವೆಲ್ಲ ಕಳೆಯಲಿಬೇಕು
ಮಾತು ಮಾತಿಗೆ ಹರಿಯೆನ್ನಬೇಕು ೧

ಆರುವರ್ಗವನಳಿಯಲಿಬೇಕು
ಮೂರು ಗುಣಂಗಳ ಮೀರಲಿಬೇಕು
ಸೇರಿ ಬ್ರಹ್ಮನೊಳಿರಬೇಕು ೨

ಅಷ್ಟಮದಂಗಳ ತುಳಿಯಲಿಬೇಕು
ದುಷ್ಟರ ಸಂಗವ ಬಿಡಬೇಕು
ಕೃಷ್ಣ ಕೇಶವ ಎನ್ನಬೇಕು ೩

ವೇದ ಶಾಸ್ತ್ರವನೋದಲಿಬೇಕು
ಭೇದ ಅಹಂಕಾರವ ನೀಗಲಿಬೇಕು
ಮಾಧವ ಸ್ಮರಣೆಯೊಳಿರಬೇಕು ೪

ಶಾಂತಿ ಕ್ಷಮೆ ದಮೆ ಪಿಡಿಯಲಿಬೇಕು
ಭ್ರಾಂತಿ ಕ್ರೋಧವ ಕಳೆಯಲಿಬೇಕು
ಶಾಂತರ ಸಂಗದೊಳಿರಬೇಕು ೫

ಗುರುವಿನ ಚರಣಕ್ಕೆರಗಲಿಬೇಕು
ತರಣೋಪಾಯವನರಿಯಲಿಬೇಕು
ವಿರಕ್ತಿ ಮಾರ್ಗದಲಿರಬೇಕು ೬

ಬಂದದ್ದುಂಡು ಸುಖಿಸಲಿಬೇಕು
ನಿಂದಾಸ್ತುತಿಗಳ ತಾಳಲಿಬೇಕು
ತಂದೆ ಪುರಂದರವಿಠಲ ಎನಬೇಕು ೭

---

ಅಷ್ಟಮದಂಗಳು: ಧನ, ಕುಲ, ವಿದ್ಯೆ, ರೂಪ, ಯೌವನ, ದೇಹಶಕ್ತಿ, ತಪಸ್ಸು, ಸಿದ್ಧಿ-ಇವು ಎಂಟು ಮದಗಳು.
ಬಂದದ್ದುಂಡು ಸುಖಿಸಲಿಬೇಕು-ಎಂಬುದು ಭಗವದ್ಗೀತೆಯಲ್ಲಿ ಬರುವ ಯದೃಚ್ಛಾ ಲಾಭ ಸಂತುಷ್ಟಃ.

## ೧೫೨. ನರಸಿಂಹನ ಪಾದ ಭಜನೆಯ ಮಾಡೋ

[ ಶ್ರೀಹರಿ ಸ್ತುತಿ-ನರಸಿಂಹ ]

ರಾಗ: ಬೇಹಾಗು ತಾಳ: ಆದಿ

ನರಸಿಂಹನ ಪಾದ ಭಜನೆಯ ಮಾಡೋ ಪ.

ನರಸಿಂಹನ ಪಾದ ಭಜನೆಯ ಮಾಡಲು
ದುರಿತ ಪರ್ವತವ ಖಂಡಿಸುವ ಕುಲಿಶದಂತೆ ಅ.ಪ.

ತರಳನ ಮೊರೆ ಕೇಳಿ ತವಕದಿಂದಲಿ ಬಂದು
ದುರುಳನ ಕರುಳ ತನ್ನ ಕೊರಳಲಿ ಧರಿಸಿದ ೧

ಸುರರೆಲ್ಲ ನಡುಗಲು ಸಿರಿದೇವಿ ಮೊರೆಯಿಡೆ
ವರ ಕಂಭದಿಂದ ಬಂದ ವೈಕುಂಠಪತಿ ನಮ್ಮ ೨

ಹರವಿರಿಂಚಾದಿಗಳು ಕರವೆತ್ತಿ ಮುಗಿಯಲು
ಪರಮ ಶಾಂತನಾದ ಪುರಂದರವಿಠಲ ೩

## ೧೫೩. ನಾ ನಿನಗೇನ ಬೇಡುವದಿಲ್ಲ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ನಾದನಾಮಕ್ರಿಯೆ ತಾಳ: ಆಟ

ನಾ ನಿನಗೇನ ಬೇಡುವದಿಲ್ಲ
ಎನ್ನ ಹೃದಯಕಮಲದೊಳು ನೆಲಸಿರು ಹರಿಯೆ ಪ.

ಶಿರ ನಿನ್ನ ಚರಣಕೆರಗಲಿ ಚಕ್ಷು
ಎರಕದಿಂದಲಿ ನಿನ್ನ ನೋಡಲಿ ಹರಿಯೆ
ನಿರುಮಾಲ್ಯ ನಾಸ ಘ್ರಾಣಿಸಲಿ ಎನ್ನ
ಕರಣ ಗೀತಂಗಳ ಕೇಳಲಿ ಹರಿಯೆ ೧

ನಾಲಗೆ ನಿನ್ನ ಕೊಂಡಾಡಲಿ ಎನ್ನ
ತೋಳು ಕರಂಗಳ ಮುಗಿಯಲಿ ಹರಿಯೆ
ಕಾಲು ತೀರ್ಥಯಾತ್ರೆಗೆ ಪೋಗಲಿ ಮನ
ಓಲೈಸಿ ನಿನ್ನನು ಸ್ಮರಿಸಲಿ ಹರಿಯೆ ೨

ಚಿತ್ತ ನಿನ್ನೊಳು ಮುಳುಗಾಡಲಿ ನಿನ್ನ
ಭಕ್ತಜನರ ಸಂಗ ದೊರಕಲಿ ಹರಿಯೆ
ತತ್ತ್ವಯೋಗಾಭ್ಯಾಸಕ್ಕಾಗಲಿ ಉಕ್ತಿ
ಸತ್ಯಮೂರುತಿ ನಮ್ಮ ಪುರಂದರವಿಠಲ ೩

## ೧೫೪. ನಾ ನಿನ್ನ ಧ್ಯಾನದೊಳಿರಲು

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಕಾನಡ — ತಾಳ: ರೂಪಕ

ನಾ ನಿನ್ನ ಧ್ಯಾನದೊಳಿರಲು ಮಿಕ್ಕ
ಹೀನ ಮಾನವರೇನ ಮಾಡಬಲ್ಲರೋ ರಂಗ ಪ.

ಮಚ್ಚರಿಸುವರೆಲ್ಲ ಕೂಡಿ ಮಾಡುವದೇನು
ಅಚ್ಯುತ ನಿನದೊಂದು ದಯೆಯಿರಲು
ವಾತ್ಸಲ್ಯ ಬಿಡದಿರು ನಿನ್ನ ನಂಬಿದೆ ದೇವ
ಕಿಚ್ಚಿಗೆ ಇರುವೆ ಮುತ್ತುವುದೆ ಕೇಳೆಲೋ ರಂಗ ೧

ಧಾಳಿಲಿ ಕುದುರೆ ವೈಯಾರದಿ ಕುಣಿಯಲು
ಧೂಳು ರವಿಯ ಮೇಲೆ ಮುಸುಕುವುದೆ
ತಾಳಿದವರಿಗೆ ವಿರುದ್ಧ ಲೋಕದೊಳುಂಟೆ
ಗಾಳಿಗೆ ಗಿರಿಯು ಅಲ್ಲಾಡಬಲ್ಲುದೆ ರಂಗ ೨

ಕನ್ನಡಿಯೊಳಗಿನ ಗಂಟು ಕಂಡು ಕಳ್ಳ
ಕನ್ನವಿಕ್ಕಲವನ ವಶವಹುದೆ
ನಿನ್ನ ನಂಬಲು ಮುದ್ದು ಪುರಂದರವಿಠಲ
ಚಿನ್ನಕ್ಕೆ ಪುಟವಿಟ್ಟಂತೆ ಅಹುದು ರಂಗ ೩

## ೧೫೫. ನಾ ಮಾಡಿದ ಕರ್ಮ ಬಲವಂತವಾದರೆ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಸಾವೇರಿ — ತಾಳ: ತ್ರಿವಿಡೆ

ನಾ ಮಾಡಿದ ಕರ್ಮ ಬಲವಂತವಾದರೆ
ನೀ ಮಾಡುವದೇನೊ ದೇವ — ಪ.

ಸಾಮಾನ್ಯವಲ್ಲವಿದು ಬ್ರಹ್ಮ ಬರೆದ ಬರಹ
ನೇಮದಿಂದಲಿ ಎನ್ನ ಹಣೆಯಲ್ಲಿ ಬರೆದುದಕೆ — ಅ.ಪ.

ಅನ್ನಪಾನಂಗಳಿಗೆ ಅಗ್ರಗಣ್ಯನಾಗಿ
ಸ್ನಾನ ಸಂಧ್ಯಾನ ಜಪತಪ ನೀಗಿ
ದಾನವಾಂತಕ ನಿನ್ನ ಧ್ಯಾನವ ಮಾಡದೆ
ಶ್ವಾನನಂತೆ ಮನೆಮನೆಯ ತಿರುಗುತಲಿದ್ದೆ — ೧

ಅತಿಥಿಗಳಿಗೆ ಅನ್ನ ಕೊಟ್ಟವನಲ್ಲ ಪರ-
ಸತಿಯರ ಸಂಗ ಅರಘಳಿಗೆ ಬಿಟ್ಟವನಲ್ಲ
ಮತಿಹೀನ ನಾನಾಗಿ ಮರುಳಾಗಿದ್ದೆನೊ ದೇವ
ಗತಿ ಯಾವುದೆನಗಿನ್ನು ಗರುಡಗಮನ ಕೃಷ್ಣ — ೨

ಇನ್ನಾದರು ನಿನ್ನ ದಾಸರ ಸಂಗವಿತ್ತು
ಮನ್ನಿಸಿ ಸಲಹಯ್ಯ ಮನ್ಮಥಜನಕ
ಅನ್ಯರೊಬ್ಬರ ಕಾಣೆ ಆದರಿಸುವರಿಲ್ಲ
ಪನ್ನಂಗಶಯನ ಶ್ರೀ ಪುರಂದರವಿಠಲ — ೩

## ೧೫೬. ನಾಚಿಕೆಪಡಬೇಡ

[ ಲೋಕನೀತಿ ]

ರಾಗ: ಕೇದಾರಗೌಳ — ತಾಳ: ಆದಿ

ನಾಚಿಕೆಪಡಬೇಡ ಮನದೊಳು
ಯೋಚಿಸಿ ಕೇಡಬೇಡ — ಪ.

ನಿಚ್ಚ ನೆನೆಯೊ ನಮ್ಮಚ್ಯುತನಾಮವ
ಮೆಚ್ಚಿ ಕೊಟ್ಟರೆ ಅಚ್ಯುತ ಪದವೀವ — ಅ.ಪ.

ಹರಿಹರಿಯೆಂದೊದರೋ ಹತ್ತಿದ
ದುರಿತಗಳಿಗೆ ಬೆದರೋ
ವಾರಿಜಾಕ್ಷನ ವೈಕುಂಠಪುರವ
ಸೇರಿ ಸೇರಿ ನೀ ಕುಣಿಕುಣಿದಾಡೊ ೧

ಆರಗೊಡವೆ ಏಕೋ ನರಕದ
ದಾರಿ ತಪ್ಪಿಸುವರೇನೋ
ನೀರಜಾಕ್ಷ ನಮ್ಮ ನಿರ್ಜರಪತಿಯಲಿ
ಸೇರಿ ಸೇರಿ ಮನ ನಲಿನಲಿದಾಡೊ ೨

ಭಕ್ತಜನರ ಕೂಡೊ ಭವಭಯ
ಬತ್ತಿಪೋಪುದು ನೋಡೋ
ಮುಕ್ತಿದಾಯಕ ಶ್ರೀಪುರಂದರವಿಠಲನ
ಭಕ್ತಿಯಿಂದ ನೀ ಹಾಡಿ ಕೊಂಡಾಡೊ ೩

## ೧೫೭. ನಾಮಕೀರ್ತನೆ ಅನುದಿನ ಮಾಳ್ಪಗೆ

[ ಶ್ರೀಹರಿ ಸ್ತುತಿ-ನಾಮಮಹಿಮೆ ]

ರಾಗ: ಧನಾಸರಿ ತಾಳ:ಆದಿ

ನಾಮಕೀರ್ತನೆ ಅನುದಿನ ಮಾಳ್ಪಗೆ ನರಕ ಭಯಗಳುಂಟೆ ಪ.

ನಾಮವೊಂದೆ ಯಮನಾಳ್ಗಳನೊದೆದು,
ಅಜಾಮಿಳನಿಗೆ ಸುಕ್ಷೇಮವಿತ್ತ ಹರಿ ಅ.ಪ.

ಕೇಸರಿಗಂಜದ ಮೃಗವುಂಟೆ ದಿ-
ನೇಶನಿಗಂಜದ ತಮವುಂಟೆ
ವಾಸುದೇವ ವೈಕುಂಠ ಜಗನ್ಮಯ
ಕೇಶವ ಕೃಷ್ಣಾ ಎಂದುಚ್ಚರಿಸುತ ೧

ಕುಲಿಶಕ್ಕೆದುರಿಹ ಗಿರಿಯುಂಟೆ ಬಲು
ಪ್ರಳಯ ಬಂದಾಗ ಜೀವಿಪರುಂಟೆ
ಜಲಜನಾಭ ಗೋವಿಂದ ಜನಾರ್ದನ
ಕಲುಷಹರಣ ಕರಿರಾಜ ವರದನೆಂದು ೨

ಗರುಡನಿಗಂಜದ ಫಣಿಯುಂಟೆ ದ-
ಳ್ಳುರಿಯಲಿ ಬೇಯದ ತೃಣವುಂಟೆ
ನರಹರಿ ನಾರಾಯಣ ದಾಮೋದರ
ಪುರಂದರವಿಠಲ ಎಂದುಚ್ಚರಿಸುತ ೩

## ೧೫೮. ನಾನೇಕೆ ಬಡವನೊ ನಾನೇಕೆ ಪರದೇಶಿ

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ಆನಂದಭೈರವಿ ತಾಳ: ಝಂಪೆ

ನಾನೇಕೆ ಬಡವನೊ ನಾನೇಕೆ ಪರದೇಶಿ
ಶ್ರೀನಿಧೇ ಹರಿ ಎನಗೆ ನೀನಿರುವ ತನಕ ಪ.

ಪುಟ್ಟಿಸಿದ ತಾಯ್ತಂದೆ ಇಷ್ಟಮಿತ್ರನು ನೀನೆ
ಇಷ್ಟ ಬಂಧು ಬಳಗ ಸರ್ವ ನೀನೆ
ಪೆಟ್ಟಿಗೆಯೊಳಗಿನ ಅಷ್ಟಾಭರಣ ನೀನೆ
ಶ್ರೇಷ್ಠ ಮೂರುತಿ ಕೃಷ್ಣ ನೀನಿರುವತನಕ ೧

ಒಡಹುಟ್ಟಿದವ ನೀನೆ ಒಡಲಹೊರೆವವ ನೀನೆ
ಉಡಲು ಹೊದೆಯಲು ವಸ್ತ್ರ ಕೊಡುವವ ನೀನೆ
ಮಡದಿ ಮಕ್ಕಳನೆಲ್ಲ ಕಡೆಹಾಯಿಸುವವ ನೀನೆ
ಬಿಡದೆ ಸಲಹುವ ಒಡೆಯ ನೀನಿರುವತನಕ ೨

ವಿದ್ಯೆ ಹೇಳುವವ ನೀನೆ ಬುದ್ಧಿ ಕಲಿಸುವವ ನೀನೆ
ಉದ್ಧಾರಕರ್ತ ಮಮಸ್ವಾಮಿ ನೀನೆ
ಮುದ್ದು ಶ್ರೀ ಪುರಂದರವಿಠಲ ನಿನ್ನಡಿಮೇಲೆ
ಬಿದ್ದು ಕೊಂಡಿರುವತನಕ ಏತರ ಭಯವೊ ೩

---

ಭಗವಂತನನ್ನು ಅಖಂಡವಾಗಿ ನಂಬಿದರೆ, ನಾನು ಬಡವನಲ್ಲ ಎಂಬ ಭಾವನೆ ಸಹಜವಾಗಿಯೆ ಮೂಡುತ್ತದೆ. ಅಷ್ಟಾಭರಣಗಳವು: ಕುಂಡಲದ್ವಯ, ಕುಸುಮ, ಧಮ್ಮಿಲ್ಲ, ನೂಪುರ, ಉಂಗುರ, ಹಾರ ಮತ್ತು ಕಂಕಣ. ಈ ಹಾಡಿನ ಪಲ್ಲವಿಯನ್ನು 'ನಾನೇಕೆ ಪರದೇಶಿ, ನಾನೇಕೆ ಬಡವನೊ' ಎಂದೂ ಹೇಳುವುದುಂಟು.

## ೧೫೫. ನಾರಾಯಣ ಗೋವಿಂದ

[ ಶ್ರೀಹರಿ ಸ್ತುತಿ-ದಶಾವತಾರ ]

ರಾಗ: ಧನ್ಯಾಸಿ ತಾಳ: ಆದಿ

ನಾರಾಯಣ ಗೋವಿಂದ ಹರಿಹರಿ
ನಾರಾಯಣ ಗೋವಿಂದ ಪ.

ನಾರಾಯಣ ಗೋವಿಂದ ಮುಕುಂದ
ಪರತರ ಪರಮಾನಂದ ಅ.ಪ.

ಮೊದಲು ಮತ್ಸ್ಯನಾಗಿ ಉದಿಸಿ ಸೋಮನನು
ಸದೆದು ವೇದಗಳ ತಂದ ೧

ಮಂದರಗಿರಿಯಲಿ ಸಿಂಧುಮಥಿಸಿ ಸುಧೆ
ತಂದು ಭಕ್ತರಿಗುಣಲೆಂದ ೨

ಭೂಮಿಯ ಕದಿದಾ ಖಳನನು ಮರ್ದಿಸಿ
ಆ ಮಹಾಸತಿಯಳ ತಂದ ೩

ದುರುಳ ಹಿರಣ್ಯನ ಕರುಳು ಬಗೆದು ತನ್ನ
ಕೊರಳೊಳಗಿಟ್ಟಾನಂದದಿಂದ ೪

ಪುಟ್ಟನಾಗಿ ದಾನಕೊಟ್ಟ ಬಲಿಯ ತಲೆ
ಮೆಟ್ಟಿ ತುಳಿದ ಬಗೆಯಿಂದ ೫

ಧಾತ್ರಿಯೊಳಗೆ ಮುನಿಪುತ್ರನಾಗಿ ಬಂದು
ಕ್ಷತ್ರಿಯರೆಲ್ಲರ ಕೊಂದ ೬

ಮಡದಿಗಾಗಿ ತಾ ಕಡಲನೆ ಕಟ್ಟಿ
ಹಿಡಿದು ರಾವಣನ ಕೊಂದ ೭

ಗೋಕುಲದೊಳು ಪುಟ್ಟಿ ಆಕಳ ಕಾಯ್ದ
ಶ್ರೀಕೃಷ್ಣನು ತಾ ಬಂದ ೮

ಛಲದಲಿ ತ್ರಿಪುರರ ಸತಿಯರ ವ್ರತದ
ಫಲವನಳಿದ ಬಗೆಯಿಂದ ೯

ಧರೆಯೊಳು ಪರಮನೀಚರ ಸವರಲು ಕು-
ದುರೆಯನೇರಿದ ಕಲಿ ಚೆಂದ ೧೦

ದೋಷದೂರ ಶ್ರೀಪುರಂದರವಿಠಲ
ಪೋಷಿಪ ಭಕ್ತರ ವೃಂದ ೧೧

## ೧೬೦. ನಾರಾಯಣ ತೇ ನಮೋ ನಮೋ

[ ಶ್ರೀಹರಿ ಸ್ತುತಿ-ಸಂಸ್ಕೃತ ರಚನೆ ]

ರಾಗ: ಪೀಲು ತಾಳ: ಆದಿ

ನಾರಾಯಣ ತೇ ನಮೋ ನಮೋ ಭವ
ನಾರದ ಸನ್ನುತ ನಮೋ ನಮೋ ಪ.

ಮುರಹರ ನಗಧರ ಮುಕುಂದ ಮಾಧವ
ಗರುಡಗಮನ ಪಂಕಜನಾಭ
ಪರಮಪುರುಷ ಭವ ಭಂಜನ ಕೇಶವ
ನರಹರಿ ಶರೀರ ನಮೋ ನಮೋ ೧

ಜಲಧಿ ಶಯನ ರವಿ ಚಂದ್ರ ವಿಲೋಚನ
ಜಲರುಹ ಭವನುತ ಚರಣ ಯುಗ
ಬಲಿಭಂಜನ ಗೋವರ್ಧನವಲ್ಲಭ
ನಳಿನೋದರ ತೇ ನಮೋ ನಮೋ ೨

ಆದಿದೇವ ಸಕಲಾಗಮ ಪೂಜಿತ
ಯಾದವಕುಲ ಮೋಹನರೂಪ
ವೇದೋದ್ಧಾರ ಶ್ರೀ ವೇಂಕಟನಾಯಕ ಪು-
ರಂದರವಿಠಲ ತೇ ನಮೋ ನಮೋ ೩

## ೧೬೧. ನಾರಾಯಣ ನಿನ್ನ ನಾಮದ ಸ್ಮರಣೆಯ

[ ಶ್ರೀಹರಿ ಸ್ತುತಿ-ನಾಮಮಹಿಮೆ ]

ರಾಗ: ಆನಂದಭೈರವಿ ತಾಳ: ಆದಿ

ನಾರಾಯಣ ನಿನ್ನ ನಾಮದ ಸ್ಮರಣೆಯ
ಸಾರಾಮೃತವೆನ್ನ ನಾಲಿಗ್ಗೆ ಬರಲಿ ಪ.

ಕೂಡುವಾಗಲು ನಿಂತಾಡುವಾಗಲು ಮತ್ತೆ
ಹಾಡುವಾಗಲು ಹರಿದಾಡುವಾಗಲು
ಖೋಡಿ ವಿನೋದದಿ ನೋಡದೆ ನಾ ಬಲು
ಮಾಡಿದ ಪಾಪ ಬಿಟ್ಹೋಡಿ ಹೋಗೊ ಹಾಂಗೆ ೧

ಊರಿಗೆ ಹೋಗಲಿ ಊರೊಳಗಿರಲಿ
ಕರಣಾರ್ಥಂಗಳೆಲ್ಲ ಕಾದಿರಲಿ
ವಾರಿಜನಾಭ ನರಸಾರಥಿ ನಿನ್ನನು
ಸಾರಿಸಾರಿಗೆ ನಾ ಬೇಸರದ್ಹಾಂಗೆ ೨

ಹಸಿವು ಇದ್ದಾಗಲಿ ಹಸಿವಿಲ್ಲದಾಗಲಿ
ಕಸವಿಸಿಯಿರಲಿ ಹರುಷವಿರಲಿ
ವಸುದೇವಾತ್ಮಜ ಶಿಶುಪಾಲಕ್ಷಯ
ಅಸುರಾಂತಕ ನಿನ್ನ ಹೆಸರು ಮರೆಯದ್ಹಾಂಗೆ ೩

ಕಷ್ಟದಲ್ಲಿರಲಿ ಉತ್ಕೃಷ್ಟದಲ್ಲಿರಲಿ
ಎಷ್ಟಾದರು ಮತಿಗೆಟ್ಟಿರಲಿ
ಕೃಷ್ಣ ಕೃಷ್ಣ ಎಂದು ಶಿಷ್ಟರು ಪೇಳುವ
ಅಷ್ಟಾಕ್ಷರ ಮಹಮಂತ್ರದ ನಾಮದ ೪

ಕನಸಿನೊಳಾಗಲಿ ಕಳವಳಿಕಾಗಲಿ
ಮನಸುಗೊಟ್ಟಿರಲಿ ಮುನಿದಿರಲಿ
ಜನಕಜಾಪತಿ ನಿನ್ನ ಚರಣಕಮಲವನು
ಮನಸಿನೊಳಗೆ ಒಮ್ಮೆ ನೆನಸಿಕೊಳ್ಳುವ ಹಾಗೆ ೫

ಜ್ವರ ಬಂದಾಗಲು ಚಳಿ ಬಂದಾಗಲು
ಮರಳಿ ಮರಳಿ ಮತ್ತೆ ನಡುಗುವಾಗ
ಹರಿನಾರಾಯಣ ದುರಿತನಿವಾರಣೆಂದು
ಇರುಳು ಹಗಲು ನಿನ್ನ ಸ್ಮರಣೆ ಮರೆಯದಂತೆ ೬

ಸಂತತ ಹರಿ ನಿನ್ನ ಸಾಸಿರನಾಮವ
ಅಂತರಂಗದಾ ಒಳಗಿರಿಸಿ
ಎಂತೋ ಪುರಂದರವಿಟ್ಠಲರಾಯನೆ
ಅಂತ್ಯಕಾಲದಲಿ ಚಿಂತಿಸೊ ಹಾಂಗೆ ೭

---

ದಿನನಿತ್ಯವ ನಮ್ಮ ವ್ಯವಹಾರದಲ್ಲಿ-ಯಾವುದೇ ಇರಲಿ, ಎಂಥದೇ ಇರಲಿ ಭಗವಚ್ಚಿಂತನೆ ನಮ್ಮಲ್ಲಿ ಸದಾ ಇರಬೇಕು. ಕರಣಾರ್ಥಂಗಳು-ಪಂಚೇಂದ್ರಿಯಗಳು ಕರಣಗಳು. ಅವೆಂದರೆ, ರೂಪ, ಶಬ್ದ, ರಸ, ಗಂಧ ಮತ್ತು ಸ್ಪರ್ಶ. ಅಷ್ಟಾಕ್ಷರ ಮಂತ್ರ: 'ಓಂ ನಮೋ ನಾರಾಯಣಾಯ'.

## ೧೬೨. ನಿಂದಕರಿರಬೇಕಿರಬೇಕು

**[ ಲೋಕನೀತಿ-ಚತುರೋಕ್ತಿ ]**

**ರಾಗ: ನಾದನಾಮಕ್ರಿಯೆ** **ತಾಳ: ಅಟ್ಟ**

ನಿಂದಕರಿರಬೇಕಿರಬೇಕು ಪ.

ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧಿಯೋ ಹಾಂಗೆ ಅ.ಪ.

ಅಂದಂದು ಮಾಡಿದ ಪಾಪವೆಂಬ ಮಲ
ತಿಂದು ಹೋಗುವರಯ್ಯ ನಿಂದಕರು
ವಂದಿಸಿ ಸ್ತುತಿಸುವ ಜನರೆಲ್ಲರು ನಮ್ಮ
ಪೊಂದಿದ ಪುಣ್ಯವನೊಯ್ಯುವರಯ್ಯ ೧

ದುಷ್ಟಜನರು ಈ ಸೃಷ್ಟಿಯೊಳಿದ್ದರೆ
ಶಿಷ್ಟ ಜನರಿಗೆಲ್ಲ ಕೀರ್ತಿಗಳು
ಇಷ್ಟಪ್ರದ ಶ್ರೀಕೃಷ್ಣ ನಿನ್ನೊಳು
ಇಷ್ಟೇ ವರವನು ಬೇಡುವೆನಯ್ಯ ೨

ದುರುಳ ಜನಂಗಳು ಚಿರಕಾಲವಿರುವಂತೆ
ಕರವ ಮುಗಿದು ವರವ ಬೇಡುವೆನು
ಪರಿಪರಿ ತಮಸಿಗೆ ಗುರಿಯಹರಲ್ಲದೆ
ಪರಮ ದಯಾನಿಧೆ ಪುರಂದರವಿಠಲ ೩

## ೧೬೩. ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ

[ ಶ್ರೀಹರಿ ಸ್ತುತಿ-ನಿಂದಾಸ್ತುತಿ ]

ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ
ನಿನ್ನಂಥ ದೊರೆಯೊಬ್ಬ ಎನಗುಂಟು ನಿನಗಿಲ್ಲ
ನೀನೆ ಪರದೇಶಿ ನಾನೆ ಸ್ವದೇಶಿ
ನಿನ್ನ ಅರಸಿ ಲಕ್ಷ್ಮಿ ಎನ್ನ ತಾಯಿಯುಂಟು
ನಿನ್ನ ತಾಯಿ ತೋರೋ ಪುರಂದರವಿಠಲ

## ೧೬೪. ನಿನ್ನ ಆಶ್ರಯಿಸುವೆ ನಿಗಮಗೋಚರ ನಿತ್ಯ

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ಕಲ್ಯಾಣಿ ತಾಳ: ಝಂಪೆ

ನಿನ್ನ ಆಶ್ರಯಿಸುವೆ ನಿಗಮಗೋಚರ ನಿತ್ಯ
ಬೆನ್ನ ಬಿಡದೆ ಕಾಯೊ ಮನದಿಷ್ಟವೀಯೊ ಪ.

ಕುಂದಣದ ಆಶ್ರಯ ನವರತ್ನಗಳಿಗೆಲ್ಲ
ಚಂದಿರನ ಆಶ್ರಯ ಚಕೋರಗೆ
ಕಂದರ್ಪನಾಶ್ರಯ ವಸಂತಕಾಲಕೆ, ಗೋ-
ವಿಂದನಾಶ್ರಯ ಮರಣಕಾಲದೊಳಗೆ ೧

ಹಣ್ಣುಳ್ಳ ಮರಗಳು ಪಕ್ಷಿಗಳಿಗಾಶ್ರಯವು
ಪುಣ್ಯವುಳ್ಳ ನದಿಗಳು ಋಷಿಗಳಾಶ್ರಯವು
ಕಣ್ಣಿಲ್ಲದಾತಗೆ ಕೈಗೋಲಿನಾಶ್ರಯವು
ಎನ್ನಿಷ್ಟ ಪಡೆವರೆ ನಿನ್ನ ಆಶ್ರಯವು ೨

ಪತಿವ್ರತೆ ವನಿತೆಗೆ ಪತಿಯೊಂದೆ ಆಶ್ರಯವು
ಯತಿಗನುಶ್ರುತ ಪ್ರಣವವಾಶ್ರಯವು
ಮತಿಯುತ ನರಗೆ ಹರಿಸ್ತುತಿಗಳೇ ಆಶ್ರಯವು
ಹಿತವಾದ ಪುರಂದರವಿಠಲನಾಶ್ರಯವು ೩

---

ನಿಗಮಗೋಚರ-ವೇದಗಳಿಗೆ ಮಾತ್ರ ಗೋಚರ. ಅನುಶ್ರುತ ಪ್ರಣವ-ಆಶ್ರಮ ಸ್ವೀಕರಿಸುವ ಕಾಲಕ್ಕೆ ಹೇಳುವ ಓಂಕಾರಮಂತ್ರ.

## ೧೬೫. ನಿನ್ನ ನೋಡಿ ಧನ್ಯನಾದೆನೊ

**[ ತಿರುಪತಿ ಶ್ರೀನಿವಾಸ ]**

**ರಾಗ: ಶಂಕರಾಭರಣ** **ತಾಳ: ರೂಪಕ**

ನಿನ್ನ ನೋಡಿ ಧನ್ಯನಾದೆನೊ ಹೇ ಶ್ರೀನಿವಾಸ ಪ.

ನಿನ್ನ ನೋಡಿ ಧನ್ಯನಾದೆ ಎನ್ನ ಮನೋನಯನಕೀಗ-
ಲಿನ್ನು ದಯಮಾಡು ಸುಪ್ರಸನ್ನ ಸ್ವಾಮಿ ಪಾಂಡುರಂಗ ಅ.ಪ.

ಪಕ್ಷಿವಾಹನ ಲಕ್ಷ್ಮೀರಮಣ
ಲಕ್ಷ್ಮಿ ನಿನ್ನ ವಕ್ಷದಲ್ಲಿ
ರಕ್ಷ ಶಿಕ್ಷಣದಕ್ಷ ಪಾಂಡವ
ಪಕ್ಷ ರಕ್ಷ ಕಮಲಾಕ್ಷ ೧

ದೇಶದೇಶ ತಿರುಗಿ ನಾನು
ಆಶಾಬದ್ಧನಾದೆ ಸ್ವಾಮಿ
ದಾಸನು ನಾನಲ್ಲವೆ ಜಗ-
ದೀಶ ಶ್ರೀಶ ಶ್ರೀನಿವಾಸ ೨

ಕಂತುಜನಕ ಕೇಳೊ ನೀ ನಿ-
ರಂತರದಿ ನಿನ್ನ ಸೇವೆ
ಅಂತರಂಗದಿ ಪಾಲಿಸಯ್ಯ
ಹೊಂತಕಾರಿ ಪುರಂದರವಿಠಲ ೩

---

ಕಂತುಜನಕ-ಮನ್ಮಥನ ತಂದೆ ಶ್ರೀಕೃಷ್ಣ. ಹೊಂತಕಾರಿ-ಚತುರ

## ೧೬೬. ನಿನ್ನನೇ ನಂಬಿದೆನು ನೀನೆನ್ನ ಸಲಹಯ್ಯ

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ಸಾವೇರಿ — ತಾಳ: ಅಟ್ಟ

ನಿನ್ನನೇ ನಂಬಿದೆನು ನೀನೆನ್ನ ಸಲಹಯ್ಯ ಪ.

ಎನ್ನ ಗುಣದೋಷಗಳನೆಣಿಸಬೇಡಯ್ಯ ಅ.ಪ.

ಬಾಲ್ಯದಲಿ ಕೆಲವು ದಿನ ಬರಿದೆ ಹೋಯಿತು ಹೊತ್ತು
ಮೇಲೆ ಯೌವನ ಮದದಿ ಮುಂದರಿಯದಿದ್ದೆ
ಜಾಲ ಸಂಸಾರದಲಿ ಸಿಲುಕಿ ಬಳಲಿದೆನಯ್ಯ
ಪಾಲಿಸೋ ಪರಮಾತ್ಮ ಭಕ್ತಿಯ ಕೊಟ್ಟು ೧

ಆಸೆಯೆಂಬುದು ಅಜನ ಲೋಕವನು ಮುಟ್ಟುತಿದೆ
ಬೇಸರದು ಸ್ತ್ರೀಯರಲಿ ಬುದ್ಧಿಯೆನಗೆ
ವಾಸುದೇವನ ಸ್ಮರಣೆಯೊಮ್ಮೆಯಾದರು ಇಲ್ಲ
ಕ್ಲೇಶವನು ಬಿಡಿಸಿ ನಿನ್ನ ದಾಸನೆನಿಸಯ್ಯ ೨

ಈ ತೆರದಿ ಕಾಲವನು ಇಂದಿರೇಶನೆ ಕಳೆದೆ
ಭೀತಿಯಿಲ್ಲದೆ ಜ್ಞಾನರಹಿತನಾಗಿ
ಮಾತೆ ತನ್ನಯ ಶಿಶುವ ಮನ್ನಿಸುವ ತೆರನಂತೆ
ದಾತ ಪುರಂದರವಿಠಲ ದಯಮಾಡಿ ಸಲಹೊ ೩

## ೧೬೭. ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ

[ ಲೋಕನೀತಿ-ನಿಂದಾಸ್ತುತಿ ]

ರಾಗ: ಪಂತುವರಾಳಿ — ತಾಳ: ಆದಿ

ನಿಮ್ಮ ಭಾಗ್ಯ ದೊಡ್ಡದೋ ನಮ್ಮ ಭಾಗ್ಯ ದೊಡ್ಡದೋ ಪ.

ಸಮ್ಮತಿಂದ ನಾವು ನೀವು ಸಾಟಿ ಮಾಡಿ ನೋಡುವ. ಅ.ಪ.

ಹೇಮ ಹೊನ್ನು ಹಣಗಳಿಗೆ ಹೇರಳ ಭಯಗಳುಂಟು
ರಾಮನಾಮ ದ್ರವ್ಯಕಿನ್ನು ಯಾರ ಭಯವಿಲ್ಲವಯ್ಯ ೧

ಕಡಗ ಕಂಠಮಾಲೆಗಳಿಗೆ ಕಳ್ಳರ ಅಂಜಿಕೆಯುಂಟು
ಅಡವಿ ತುಳಸಿಮಾಲೆಗಿನ್ನು ಆರ ಅಂಜಿಕಿಲ್ಲವಯ್ಯ ೨

ವ್ಯಾಪಾರ ಉದ್ಯೋಗಕಿನ್ನು ವ್ಯಾಕುಲದ ಭಯವುಂಟು
ಗೋಪಾಳದ ವೃತ್ತಿಗಿನ್ನು ಗೂಡವೆ ಯಾರದಿಲ್ಲವಯ್ಯ ೩

ಸರಕು ಬೆಲ್ಲ ತುಪ್ಪ ಧಾನ್ಯ ಸವೆದೀತೆಂಬ ಚಿಂತೆಯುಂಟು
ಪರಿನಾಮಾಮೃತಕೆ ಇನ್ನು ಯಾವ ಚಿಂತೆಯಿಲ್ಲವಯ್ಯ ೪

ನಿಮ್ಮ ಭಾಗ್ಯ ಲಕ್ಷ್ಮೀದೇವಿ ನಮ್ಮ ಭಾಗ್ಯ ನಾರಾಯಣನು
ನಮ್ಮ ನಿಮ್ಮ ಭಾಗ್ಯದೊಡೆಯ ಪುರಂದರವಿಠಲನು ೫

## ೧೬೮. ನಿಲ್ಲಬೇಕಯ್ಯ ಕೃಷ್ಣಯ್ಯ

**[ ಶ್ರೀಹರಿ ಸ್ತುತಿ ]**

**ರಾಗ: ಮೋಹನ** **ತಾಳ: ಛಾಪು**

ನಿಲ್ಲಬೇಕಯ್ಯ ಕೃಷ್ಣಯ್ಯ ನೀ ಪ.

ನಿಲ್ಲಬೇಕಯ್ಯ ಮಲ್ಲಮರ್ದನ ಸಿರಿ
ವಲ್ಲಭ ಎನ್ನ ಹೃದಯದಲ್ಲಿ ಸತತ ನೀ ಅ.ಪ.

ಚುಪ್ಪಾಣಿ ಮುತ್ತಿಟ್ಟು ನೋಡುವೆ ನಿನ್ನ
ಚಪ್ಪಾಳಿ ತಟ್ಟಿ ನಾ ಪಾಡುವೆ
ಅಪ್ಪ ಶ್ರೀಕೃಷ್ಣ ನಿನ್ನೆತ್ತಿ ಮುದ್ದಿಸಿಕೊಂಬೆ
ಸರ್ಪಶಯನ ಕೃಪೆ ಮಾಡೆಂದು ಬೇಡುವೆ ೧

ಚಂದದ ಹಾಸಿಗೆ ಹಾಸುವೆ ಪುನುಗು
ಗಂಧ ಕಸ್ತೂರಿಯ ಪೂಸುವೆ
ತಂದು ಮುದದಿ ಮುತ್ತಿನ ಹಾರ ಹಾಕುವೆ ಆ-
ನಂದದಿಂದಲಿ ನಿನ್ನ ಎತ್ತಿ ಮುದ್ದಿಸಿಕೊಂಬೆ ೨

ನೀಲದ ಕಿರೀಟವನಿಡುವೆ ಬಲು
ಬಾಲಲೀಲೆಗಳ ಪಾಡುವೆ
ಚೆಲುವ ಶ್ರೀ ಪುರಂದರವಿಠಲರಾಯನೆ
ನಿಲು ಎನ್ನ ಮನದಲ್ಲಿ ಒಂದೇ ಘಳಿಗೆ ೩

## ೧೬೯. ನೀನೆ ಅನಾಥಬಂಧು ಕಾರುಣ್ಯಸಿಂಧು

[ ಶ್ರೀಹರಿ ಸ್ತುತಿ-ಭಕ್ತವಾತ್ಸಲ್ಯ ]

ರಾಗ: ತೋಡಿ ತಾಳ: ಅಟ್ಟ

ನೀನೆ ಅನಾಥಬಂಧು ಕಾರುಣ್ಯಸಿಂಧು ಪ.

ಮದಗಜವೆಲ್ಲ ಕೂಡಿದರೇನು ಅದರ ವ್ಯಾಳ್ಯಕೆ ಒದಗಲಿಲ್ಲ
ಮದನನಯ್ಯ ಮಧುಸೂದನ ಎನ್ನಲು
ಮುದದಿಂದಲಿ ಬಂದೊದಗಿದೆ ಕೃಷ್ಣಾ ೧

ಪತಿಗಳೈವರಿದ್ದರೇನು ಸತಿಯ ಭಂಗ ಬಿಡಿಸಲಿಲ್ಲ
ಗತಿ ನೀನೇ ಮುಕುಂದ ಎನ್ನಲು
ಅತಿವೇಗದಿ ಅಕ್ಷಯವಿತ್ತೆ ಕೃಷ್ಣಾ ೨

ಶಿಲೆಯ ರಕ್ಷಿಸಿ ಕುಲಕೆ ತಂದೆ
ಬಲಿಗೆ ಒಲಿದು ಪದವಿಯಿತ್ತೆ
ಸುಲಭದಿ ಭಕ್ತರ ಸಲುಹುವ ನಮ್ಮ
ಚೆಲುವ ಪುರಂದರವಿಟ್ಠಲರಾಯ ೩

## ೧೭೦. ನೀನೆ ದಯಾಳೊ ನಿರ್ಮಲಚಿತ್ತ ಗೋವಿಂದ

[ ಶ್ರೀಹರಿ ಸ್ತುತಿ ]

ರಾಗ: ಆನಂದಭೈರವಿ ತಾಳ: ಅಟ್ಟ

ನೀನೆ ದಯಾಳೊ ನಿರ್ಮಲಚಿತ್ತ ಗೋವಿಂದ
ನಿಗಮಗೋಚರ ಮುಕುಂದ ಪ.

ಜ್ಞಾನಿಗಳರಸ ನೀನಲ್ಲದೆ ಜಗಕಿನ್ನು
ಮಾನದಿಂದಲಿ ಕಾವ ಧೊರೆಗಳ ನಾ ಕಾಣೆ ಅ.ಪ.

ದಾನವಾಂತಕ ದೀನಜನಮಂದಾರನೆ
ಧ್ಯಾನಿಪರ ಮನಸಂಚಾರನೆ
ಮೌನವಾದೆನು ನಿನ್ನ ಧ್ಯಾನಾನಂದದಿ ಈಗ
ಸಾನುರಾಗದಿ ಕಾಯೊ ಸನಕಾದಿವಂದ್ಯನೆ ೧

ಬಗೆ ಬಗೆಯಲಿ ನಿನ್ನ ತುತಿಪೆನೊ ನಗಧರ
ಖಗಪತಿವಾಹನನೆ
ಮಗುವಿನ ಮಾತೆಂದು ನಗುತ ಕೇಳುತ ಬಂದೆ
ಬೇಗದಿಂದಲಿ ಕಾಯೊ ಸಾಗರಶಯನನೆ ೨

ಮಂದರಧರ ಅರವಿಂದಲೋಚನ ನಿನ್ನ
ಕಂದನೆಂದೆಣಿಸೊ ಎನ್ನ
ಸಂದೇಹವೇಕಿನ್ನು ಸ್ವಾಮಿ ಮುಕುಂದನೆ
ಬಂದೆನ್ನ ಕಾಯೊ ಶ್ರೀಪುರಂದರವಿಠಲ ೩

## ೧೭೧. ನೀನ್ಯಾಕೋ ನಿನ್ನ ಹಂಗ್ಯಾಕೋ

[ ಶ್ರೀಹರಿ ಸ್ತುತಿ-ನಿಂದಾಸ್ತುತಿ ]

ರಾಗ: ಕಾನಡ

ನೀನ್ಯಾಕೋ ನಿನ್ನ ಹಂಗ್ಯಾಕೋ ಪ.

ನಿನ್ನ ನಾಮದ ಬಲವೊಂದಿದ್ದರೆ ಸಾಕೊ ಅ.ಪ.

ಆ ಮರ ಈ ಮರ ಧ್ಯಾನಿಸುತಿರುವಾಗ
ರಾಮ ರಾಮ ಎಂಬ ನಾಮವೆ ಕಾಯ್ತೊ ೧

ಬಾಲೆಯ ಸಭೆಯಲಿ ಸೀರೆಯ ಸೆಳೆವಾಗ
ಬಾಲಕೃಷ್ಣನೆಂಬ ನಾಮವೆ ಕಾಯ್ತೊ ೨

ಯಮನ ದೂತರು ಬಂದು ಅಜಾಮಿಳನೆಳೆವಾಗ
ನಾರಾಯಣನೆಂಬ ನಾಮವೆ ಕಾಯ್ತೊ ೩

ಕರಿ ಮಕರಿಗೆ ಸಿಕ್ಕಿ ಮೊರೆಯಿಡುತಿರುವಾಗ
ಆದಿಮೂಲನೆಂಬ ನಾಮವೆ ಕಾಯ್ತೊ ೪

ಪ್ರಹ್ಲಾದನ ಪಿತ ಬಾಧಿಸುತಿರುವಾಗ
ನಾರಸಿಂಹನೆಂಬ ನಾಮವೆ ಕಾಯ್ತೊ ೫

ಹಸುಳೆ ಆ ಧ್ರುವರಾಯ ಅಡವಿಗೆ ಪೋಪಾಗ
ವಾಸುದೇವನೆಂಬ ನಾಮವೆ ಕಾಯ್ತೊ ೬

ನಿನ್ನ ನಾಮಕೆ ಸರಿ ಯಾವುದು ಕಾಣೆನೊ
ಘನ್ನ ಮಹಿಮ ಸಿರಿ ಪುರಂದರವಿಠಲ ೭

---

ಆ ಮರ ಈ ಮರ ಎಂದು ಧ್ಯಾನಿಸುತಿರುವಾಗ-ಈ ಶಬ್ದವನ್ನು ತುಸು ಹಿಂದೆಮುಂದಾಗಿ ಮತ್ತೆ ಮತ್ತೆ ನುಡಿದರೆ 'ರಾಮ ರಾಮ' ಎಂದಾಗುವುದು!

## ೧೭೨. ನೆಚ್ಚನಯ್ಯ ಹರಿ ಮೆಚ್ಚನಯ್ಯ

[ ಲೋಕನೀತಿ ]

ರಾಗ: ಪೂರ್ವಿ ತಾಳ: ಆದಿ

ನೆಚ್ಚನಯ್ಯ ಹರಿ ಮೆಚ್ಚನಯ್ಯ ಪ.

ಉತ್ತಮನೆಂದೆನಿಸಿಕೊಂಡು ಅರುಣೋದಯದ ಕಾಲದಲ್ಲಿ
ನಿತ್ಯ ಕಾಗೆಯ ಹಾಗೆ ನೀರೊಳಗೆ ಮುಳುಗುವವಗೆ ೧

ತೊಗಲಿನ ದೇಹಕೆ ಗೋಪೀಗಂಧ ತೇದುಕೊಂಡು
ರೋಗ ಬಂದೆಮ್ಮೆಯಹಾಗೆ ಬರೆದುಕೊಂಬ ಮನುಜಗೆ ೨

ಮರುಳುತನವು ಮಾತಿನಲ್ಲಿ ಹೃದಯದಲ್ಲಿ ವಿಷದ ಗುಟಿಕೆ
ಮರದ ಮೇಲಣ ಓತಿಯಂತೆ ನಮಿಸುವಂಥ ಮರುಳನಿಗೆ ೩

ಹಣವಿಗೆ ಹಾರೈಸಿಕೊಂಡು ತಿರುಪತಿಗೆ ಹೋಹರ ಕಂಡು
ಹಣ ಕಾಸು ಕೊಂಡು ಬಂದು ಸ್ವಾಮಿಯ ನೋಡುವವಗೆ ೪

ಬಾಯಿ ಬೀಗದಲ್ಲಿ ಹೊಯ್ದು ಹಾಲು ತುಪ್ಪಗಳನು ಸವಿದು
ಮೈಯು ಹುಳಿತ ನಾಯಿಯಂತೆ ಬೀದಿ ಬೀದಿ ತಿರುಗುವವಗೆ ೫

ತಾನು ತನ್ನ ಮನೆಯ ಒಳಗೆ ದಾನ ಧರ್ಮಗಳನು ಕೊಡದೆ
ನೀನು ದಾನ ಮಾಡು ಎಂದು ಅನ್ಯರಿಗೆ ಹೇಳುವವಗೆ ೬

ಏಕೋ ಭಾವ ಏಕೋಭಕ್ತಿ ಏಕೋಯುಕ್ತಿ ಏಕೋಮುಕ್ತಿ
ಬೇಕಾಗಿ ಪುರಂದರವಿಠಲನ್ನ ಭಜಿಸದವಗೆ ೭

## ೧೭೩. ನೈವೇದ್ಯವ ಕೊಳ್ಳೊ ನಾರಾಯಣಸ್ವಾಮಿ

[ ಶ್ರೀಹರಿ ಸ್ತುತಿ-ನೈವೇದ್ಯ ಸಮರ್ಪಣೆ ]

ರಾಗ: ಆನಂದಭೈರವಿ ತಾಳ: ಆದಿ

ನೈವೇದ್ಯವ ಕೊಳ್ಳೊ ನಾರಾಯಣಸ್ವಾಮಿ
ದಿವ್ಯಷಡುರಸಾನ್ನವನಿಟ್ಟೆನೊ ಪ.

ಘಮಘಮಿಸುವ ಶಾಲ್ಯಾನ್ನ ಪಂಚಭಕ್ಷ್ಯ
ಅಮೃತಕೂಡಿದ ದಿವ್ಯ ಪರಮಾನ್ನವು
ರಮಾದೇವಿಯರು ಸ್ವಹಸ್ತದಿ ಮಾಡಿದ ಪಾಕ
ಭೂ ಮೊದಲಾದ ದೇವೇರ ಸಹಿತೌತಣ ೧

ಅರವತ್ತು ಶಾಕ ಲವಣಶಾಕ ಮೊದಲಾದ
ಸರಸ ಮೊಸರು ಬುತ್ತಿ ಚಿತ್ರಾನ್ನವು
ಪರಮಮಂಗಳ ಅಪ್ಪಾವು ಅತಿರಸಗಳ
ಹರುಷದಿಂದಲಿ ಇಟ್ಟ ಹೊಸ ತುಪ್ಪವು ೨

ಒಡೆಯಂಬೊಡೆ ದಧಿವಡೆಯು ತಿಂಥಿಣಿ
ಒಡೆಯ ಎಡೆಗೆ ಒಡನೆ ಬಡಿಸಿದೆ
ದೃಢವಾದ ಪದಾರ್ಥವನ್ನೆಲ್ಲ ಇಡಿಸಿದೆ
ಒಡೆಯ ಶ್ರೀ ಪುರಂದರವಿಠಲನೆ ಉಣ್ಣೊ ೩

## ೧೭೪. ನೋಡದಿರು ಪರಸ್ತ್ರೀಯರ

[ ಲೋಕನೀತಿ ]

ರಾಗ: ಆನಂದಭೈರವಿ ತಾಳ: ಝಂಪೆ

ನೋಡದಿರು ಪರಸ್ತ್ರೀಯರ
ನೋಡಿದರೆ ಕೇಡಹುದು ತಪ್ಪದಿದಕೋ ಪ.

ನೋಡಿದರೆ ಸ್ತ್ರೀ ಹತ್ಯವು, ನುಡಿಸಿ ಮಾ-
ತಾಡಿದರೆ ಗೋಹತ್ಯವು
ಕಾಡಿದರೆ ಶಿಶುಹತ್ಯವು ಮೈ-
ಗೂಡಿದರೆ ಬ್ರಹ್ಮಹತ್ಯವು ೧

ಎರಳೆಗಂಗಳರೊಲುಮೆಗೆ ಮರುಳಾಗಿ
ಬರಿದೆ ನೀ ಕೆಡಬೇಡವೊ
ದುರುಳ ಯಮಲೋಕದಲ್ಲಿ ಕರೆದೊಯ್ದು
ಉರಿಗಂಬ ಅಪ್ಪಿಸುವರೊ ೨

ಮರುಳು ಮಾನವನೆ ಕೇಳೊ ಪರಸತಿಯ
ಉರಿಯೆಂದು ನೋಡು ನಿತ್ಯ
ವರದ ಪುರಂದರವಿಠಲನ ನೆನೆದರೆ
ಸ್ಥಿರವಾದ ಮುಕುತಿಯಹುದು ೩

## ೧೭೫. ನೋಡುವುದೇ ಕಣ್ಣು ಕೇಳುವುದೇ ಕಿವಿ

[ ಶ್ರೀಕೃಷ್ಣಲೀಲೆ ]

ರಾಗ: ಧನಾಸರಿ ತಾಳ: ಅಟ್ಟ

ನೋಡುವುದೇ ಕಣ್ಣು ಕೇಳುವುದೇ ಕಿವಿ
ಪಾಡುವುದೇ ವದನ ಪ.

ಗಾಡಿಕಾರ ಶ್ರೀ ವೇಣುಗೋಪಾಲನ
ಕೂಡಿ ಕೊಂಡಾಡುವ ಸುಖದ ಸೊಬಗನು ಅ.ಪ.

ಪೊಂಗಳಲೂದುತ ಮೃಗಪಕ್ಷಿಗಳನೆಲ್ಲ
ಸಂಗಳಿಸುತಲಿಪ್ಪನ
ಅಂಗಜ ಜನಕ ಗೋಪಾಂಗನೇರೊಡನೆ ಬೆಳ-
ದಿಂಗಳೊಳಗೆ ಸುಳಿದಾಡೊ ರಂಗಯ್ಯನ ೧

ನವಿಲಂತೆ ಕುಣಿವ ಹಂಸೆಯಂತೆ ನಲಿವ
ಮರಿ ಕೋಗಿಲೆಯಂತೆ ಕೂಗುವ
ಎರಳೆಯ ಮರಿಯಂತೆ ಜಿಗಿಜಿಗಿದಾಡುವ
ತುಂಬಿ ಝೇಂಕರಿಸುವಂದದಿ ಝೇಂಕರಿಪನ ೨

ಮುರುಡು ಕುಬ್ಜೆಯ ಡೊಂಕು ತಿದ್ದಿ ರೂಪವ ಮಾಡಿ
ಸೆರೆಯ ಬಿಡಿಸಿಕೊಂಬನ
ಗರುಡಗಮನ ಸಿರಿ ಪುರಂದರವಿಠಲನ
ಶರಣಾಗತ ಸುರಧೇನು ರಂಗಯ್ಯನ ೩

## ೧೭೬. ಪರಾಕು ಮಾಡದೆ ಪರಾಂಬರಿಸಿ

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ಸಾವೇರಿ ತಾಳ: ಅಟ್ಟ

ಪರಾಕು ಮಾಡದೆ ಪರಾಂಬರಿಸಿ ಎನ್ನ ಅ-
ಪರಾಧಂಗಳ ಕ್ಷಮಿಸೋ ಪ.

ಧರಾರಮಣ ಫಣಿಧರಾಮರಾರ್ಚಿತ
ಸುರಾಧಿಪತಿ ವಿಧಿ ಹರಾದಿ ವಂದಿತ ಅ.ಪ.

ನರರೊಳಗೆ ಪಾಮರನು ನಾನಿಹ
ಪರಕೆ ಸಾಧನವರಿಯೆ ಶ್ರೀ ಹರಿಯೆ
ಶರಣು ಹೊಕ್ಕೆ ನಿನ್ನ ಚರಣ ಕಮಲಕೆ
ಕರುಣದಿಂದ ನಿನ್ನ ಸ್ಮರಣೆ ಎನಗಿತ್ತು ೧

ಜಪವನರಿಯೆನು ತಪವನರಿಯೆನು
ಉಪವಾಸ ವ್ರತಗಳನರಿಯೆ ಶ್ರೀ ಹರಿಯೆ
ಕೃಪಾವಲೋಕನದಿ ಆ ಪಾಪಗಳನೆಲ್ಲ
ಅಪಹೃತವ ಮಾಡೊ ಅಪಾರ ಮಹಿಮನೆ ೨

ಕರಿರಾಜನುದ್ಧರಿಸಿ ದ್ರೌಪದಿಯ
ಮೊರೆ ಲಾಲಿಸಿ ತರಳನಿಗೊಲಿದು ನೀ ಪೊರೆದೆ
ಸಿರಿಯರಸ ನಿನ್ನ ಸರಿ ಯಾರ ಕಾಣೆ
ಪುರಾರಿನುತ ಸಿರಿ ಪುರಂದರವಿಠಲ ೩

## ೧೭೭. ಪರಾನ್ನವೇತಕೆ ಬಂತಯ್ಯ

[ ಲೋಕನೀತಿ ]

ರಾಗ: ಕಲ್ಯಾಣಿ ತಾಳ: ಅಟ್ಟ

ಪರಾನ್ನವೇತಕೆ ಬಂತಯ್ಯ ಎನಗೆ ಇಂದು
ಪರಾನ್ನವೇತಕೆ ಬಂತಯ್ಯ? ಪ.

ಪರಾನ್ನವೇತಕೆ ಬಂತು ಪರಮೇಷ್ಟಿಜನಕನ
ಪರನೆಂದು ತಿಳಿಸದೆ ಪರಗತಿ ಕೆಡಿಸುವ ಅ.ಪ.

ಸ್ನಾನವ ಮಾಡಿಕೊಂಡು ಕುಳಿತು ಬಹು
ಮೌನದಿಂದಿರಲೀಸದು
ಶ್ರೀನಿವಾಸನ ಧ್ಯಾನಮಾಡದೆ ಮನವಿದು
ತಾನೆ ಓಡುವುದು ಶ್ವಾನನೋಪಾದಿಯಲಿ ೧

ಜಪವ ಮಾಡುವ ಕಾಲದಿ ಕರೆಯ ಬರೆ
ವಿಪರೀತವಾಗುವುದು
ಸ್ವಪನದಂತೆ ಪೊಳೆದು ನನ್ನ ಮನಕೆ ಬಲು
ಸುಪಥವ ತಪ್ಪಿಸಿ ಅಪಗತಿ ಕೊಡುವಂಥ ೨

ಪ್ರಸ್ಥದ ಮನೆಯೊಳಗೆ ಕರೆಯದೆ ಪೋಗಿ
ಸ್ವಸ್ಥದಿ ಕುಳಿತುಕೊಂಡು
ವಿಸ್ತಾರವಾಗಿ ಹರಟೆಯನೆ ಬಡಿದು ಪ್ರ-
ಶಸ್ತವಾಯಿತು ಎಂದು ಮಸ್ತಕ ತಿರುವುವ ೩

ಯಜಮಾನನು ಮಾಡಿದ ಪಾಪಂಗಳ
ವ್ರಜವು ಅನ್ನದೊಳಿರಲು
ದ್ವಿಜರು ಭುಂಜಿಸಲಾಗಿ ಅವರ ಉದರದೊಳು
ನಿಜವಾಗಿ ಸೇರುವುದು ಸುಜನರು ಲಾಲಿಸಿ ೪

ಮಾಡಿದ ಮಹಾಪುಣ್ಯವ ಓದನಕಾಗಿ [ಅನ್ನಕ್ಕಾಗಿ]
ಕಾಡಿಗೊಪ್ಪಿಸಿಕೊಡುತ
ರೂಢಿಗಧಿಕನಾದ ಪುರಂದರವಿಠಲನ
ಪಾಡಿ ಪೊಗಳಿ ಕೊಂಡಾಡಿಕೊಂಡಿರದಂತೆ ೫

## ೧೭೮. ಪವಡಿಸು ಪರಮಾತ್ಮನೆ

[ ಶ್ರೀಹರಿ ಸ್ತುತಿ ]

ರಾಗ: ಮಧ್ಯಮಾವತಿ ತಾಳ: ಆದಿ

ಪವಡಿಸು ಪರಮಾತ್ಮನೆ ಸ್ವಾಮಿ ಪ.

ಭವರೋಗ ವೈದ್ಯನೆ ಭಕ್ತರ ಪ್ರಿಯನೆ ಅ.ಪ.

ಕುಂದಣದಿ ರಚಿಸಿದ ಸೆಜ್ಜೆ ಮನೆಯಲ್ಲಿ
ಇಂದ್ರನೀಲಮಣಿ ಮಂಟಪದಿ
ಚಂದ್ರಕಾಂತಿಯ ಠಾಣದೀವಿಗೆ ಹೊಳೆಯಲು
ಸಿಂಧುತನಯೆ ಆನಂದದಿಂದ ೧

ತೂಗುಮಂಚದಿ ಹಂಸತೂಲದ ಹಾಸಿಗೆ
ನಾಗಸಂಪಿಗೆ ಹೂವಿನ ಒರಗು
ಸಾಗರಸುತೆ ಸಮ್ಮೇಳದಲಿ ನಿಜ
ಭೋಗದಿಂದ ಓಲಾಡುತಲಿ ೨

ಸದ್ದಡಗಿತು ಸಮಯ ಸಾಗಿತು ಬೀಗ
ಮುದ್ರೆಗಳಾಯಿತು ಬಾಗಿಲಿಗೆ
ತಿದ್ದಿದ ಭಾವಣೆ ಶಂಖದ ಘೋಷಣೆ
ಪದ್ಮನಾಭ ಶ್ರೀ ಪುರಂದರವಿಠಲ ೩

## ೧೭೯. ಪಾಪಿ ಬಲ್ಲನೆ ಪರರ ಸುಖ ದುಃಖವ

[ ಲೋಕನೀತಿ ]

ರಾಗ: ಕಾಂಬೋದಿ ತಾಳ: ಝಂಪೆ

ಪಾಪಿ ಬಲ್ಲನೆ ಪರರ ಸುಖ ದುಃಖವ ಪ.

ಕೋಪಿ ಬಲ್ಲನೆ ಶಾಂತ ಸುಗುಣದ ಘನವ ಅ.ಪ.
ಕತ್ತೆ ಬಲ್ಲುದೆ ಹೊತ್ತ ಕಸ್ತುರಿಯ ಪರಿಮಳವ
ಮೃತ್ಯು ಬಲ್ಲುದೆ ವೇಳೆ ಹೊತ್ತೆಂಬುದ
ತೊತ್ತು ಬಲ್ಲಳೆ ಮಾನಾಪಮಾನವೆಂಬುದನು
ಮತ್ತೆ ಬಲ್ಲುದೆ ಬೆಕ್ಕು ಹರಿಯ ಮೀಸಲನು ೧

ಹೇನು ಬಲ್ಲುದೆ ಮುಡಿದ ಹೂವಿನ ಪರಿಮಳವ
ಶ್ವಾನ ಬಲ್ಲುದೆ ರಾಗ ಭೇದಂಗಳ
ಮೀನು ಬಲ್ಲುದೆ ನೀರು ಸೌಳು ಸ್ವಾದೆಂಬುದನು
ಹಾನು ಬಲ್ಲುದೆ ಹಾವು ಹಾಲನೆರೆದವರನು ೨

ಬಾಳೆ ಬಲ್ಲುದೆ ಮರಳಿ ಫಲವಾಗೊ ಸುದ್ದಿಯನು
ಸೂಳೆ ಬಲ್ಲಳೆ ವಿಟನ ಬಡತನವನು
ಕೇಳಬಲ್ಲನೆ ಕಿವುಡನೇಕಾಂತ ಮಾತುಗಳ
ಹೇಳಬಲ್ಲನೆ ಮೂಕ ಕನಸು ಕಂಡುದನು ೩

ಕಾಗೆ ಬಲ್ಲುದೆ ಒಳ್ಳೆ ಕೋಗಿಲೆಯ ಸುಸ್ವರವ
ಗೂಗೆ ಬಲ್ಲುದೆ ಹಗಲು ಹರಿದಾಟವ
ಜೋಗಿ ಬಲ್ಲನೆ ಮನೆಯೊಳಿಲ್ಲ ಉಂಟೆಂಬುದನು
ರೋಗಿ ಬಲ್ಲನೆ ಷಡ್ರಸಾನ್ನರುಚಿಯ ೪

ಕೋಡಗವು ಬಲ್ಲುದೆ ರತ್ನದಾಭರಣವನು
ಹೇಡಿ ಬಲ್ಲನೆ ರಣದ ಸಂಭ್ರಮವನು
ಬೇಡಿದ ವರಗಳ ಪುರಂದರವಿಠಲನಲ್ಲದೆ
ನಾಡಾಡಿ ದೈವಗಳು ಕೊಡಬಲ್ಲುವೆ ೫

## ೧೪೦. ಪಾಪೋಸು ಹೋದುವಲ್ಲ ಸ್ವಾಮಿ

[ ತಿರುಪತಿಯ ಶ್ರೀನಿವಾಸ ]

ರಾಗ: ಮಧ್ಯಮಾವತಿ ತಾಳ: ಅಟ್ಟ

ಪಾಪೋಸು ಹೋದುವಲ್ಲ ಸ್ವಾಮೀ ಎನ್ನ
ಪಾಪೋಸು ಹೋದುವಲ್ಲ ಪ.

ಅಪಾರ ದಿನಗಳಿಂದ ಆರ್ಜನೆ ಮಾಡಿದ ಅ.ಪ.

ಉರಗಾದ್ರಿಯಲಿ ಸ್ವಾಮಿಪುಷ್ಕರಣಿ ಮೊದಲಾದ
ಪರಿಪರಿ ತೀರ್ಥ ಸ್ನಾನಗಳ ಮಾಡಿ
ಹರಿದಾಸರ ಕೂಡಿ ಗಿರಿರಾಯನ ಮೂರ್ತಿ
ದರುಶನದಲ್ಲಿ ಮೈಮರೆತಿರಲು ಎನ್ನ ೧

ಪರಮ ಭಾಗವತರ ಹರಿಕಥೆ ಕೇಳಲು
ಪರಮ ಭಕುತಿಯಿಂದ ಕೇಳುತಿರೆ
ಪರಮ ಪಾಪಿಗಳ ಪಾಲಾಗಿ ಪೋದುವು
ಪರಮ ಪುರುಷನ ಮನಸಿಗೆ ಬಂದೀಗ ೨

ಮಾಯಾದೇವಿ ಎನಗೆ ಮೆಚ್ಚಿ ಕೊಟ್ಟಿದ್ದಳು
ದಾಯಾದಿಗಳು ನೋಡಿ ಸಹಿಸಲಿಲ್ಲ
ಮಾಯಾರಮಣ ನಮ್ಮ ಪುರಂದರವಿಠಲನ
ಮಾಯದಿಂದಲಿ ಮಟ್ಟಮಾಯವಾದವು ಎನ್ನ ೩

ಪಾಪೋಸು - ಎಂದರೆ ಕಾಲಿಗೆ ಹಾಕಿಕೊಳ್ಳುವ ಮೆಟ್ಟುಗಳು. ಇದಕ್ಕೆ ಪಾಪ+ಓಸು-ಪಾಪವೆಲ್ಲವೂ ಎಂಬ ಶ್ಲೇಷಾರ್ಥ ಇದೆ. ತಿರುಪತಿಯ ಶ್ರೀನಿವಾಸನ ದರ್ಶನಕ್ಕೆಂದು ಒಳಗೆ ಹೋದಾಗ, ಪಾಪವೆಲ್ಲ ಹೋಗುವುದು ಸಹಜವೇ. ಮಾಯಾದೇವಿ ಕೊಟ್ಟಿದ್ದ ಪಾಪವೆಂದರೆ ವಿಷಯಾಸಕ್ತಿ, ಕಾಮಕ್ರೋಧಾದಿಗಳು.

## ೧೪೧. ಪಾಲಿಸೆ ಎನ್ನ ಶ್ರೀಮಹಾಲಕ್ಷ್ಮಿ

[ ಮಹಾಲಕ್ಷ್ಮಿ ]

ರಾಗ: ಶ್ರೀರಾಗ ತಾಳ: ಅಟ್ಟ

ಪಾಲಿಸೆ ಎನ್ನ ಶ್ರೀಮಹಾಲಕ್ಷ್ಮಿ
ಪಾಲಿಸೆ ಎನ್ನನು ಪಾಲಾಬ್ಧಿ ಸಂಜಾತೆ ಪ.

ಲಲಿತಾಂಗಿ ಶುಭೆ ದೇವಿ ಮಂಗಳೆ ದೇವಿ ಅ.ಪ.

ವೇದಾಭಿಮಾನಿ ಸಾರಸಾಕ್ಷಿ
ಶ್ರೀಧರರಮಣಿ
ಕಾದುಕೊ ನಿನ್ನಯ ಪಾದಸೇವಕರನ್ನು
ಆದಿಶಕ್ತಿ ಸರ್ವಾಧಾರೆ ಗುಣಪೂರ್ಣೆ ೧

ದಯದಿಂದ ನೋಡೆ ಭಜಿಪ ಭಕ್ತರ
ಭಯ ದೂರ ಮಾಡೆ
ದಯಪಾಲಿಸೆ ಮಾತೆ ತ್ರೈಲೋಕ್ಯ ವಿಖ್ಯಾತೆ
ಜಯದೇವಿ ಸುವ್ರತೆ ಜಗದೀಶನ ಪ್ರೀತೆ ೨

ನೀನಲ್ಲದನ್ಯ ರಕ್ಷಿಪರನು
ಕಾಣೆ ನಾ ಮುನ್ನ
ದಾನವಾಂತಕ ಸಿರಿ ಪುರಂದರವಿಠಲನ
ಧ್ಯಾನಿಪ ಭಕುತರ ಮಾನ ನಿನ್ನದು ತಾಯೆ ೩

## ೧೮೨. ಪಾಲಿಸೆಮ್ಮ ಮುದ್ದುಶಾರದೆ

[ ಸರಸ್ವತಿದೇವಿ ]

ರಾಗ: ಮುಖಾರಿ — ತಾಳ: ಆದಿ

ಪಾಲಿಸೆಮ್ಮ ಮುದ್ದು ಶಾರದೆ ಎನ್ನ ನಾಲಿಗೆಯಲಿ ನಿಲ್ಲಬಾರದೆ ಪ.

ಲೋಲಲೋಚನೆ ತಾಯೆ ನಿರುತ ನಂಬಿದೆ ನಿನ್ನ ಅ.ಪ.

ಅಕ್ಷರಕ್ಷರ ವಿವೇಕವ ನಿಮ್ಮ
ಕುಕ್ಷಿಯೊಳೀರೇಳು ಲೋಕವ
ಸಾಕ್ಷಾತು ರೂಪದಿಂದ ಒಲಿದು ರಕ್ಷಿಸು ತಾಯೆ ೧

ಶೃಂಗಾರಪುರ ನೆಲೆವಾಸಿನೀ ದೇವಿ
ಸಂಗೀತಗಾನವಿಲಾಸಿನೀ
ಮಂಗಳಗಾತ್ರೆ ತಾಯೆ ಭಳಿರೆ ಬ್ರಹ್ಮನ ರಾಣಿ ೨

ಸರ್ವಾಲಂಕಾರ ದಯಾಮೂರುತಿ ನಿಮ್ಮ
ಚರಣವ ಸ್ಮರಿಸುವೆ ಕೀರುತಿ
ಗುರುಮೂರ್ತಿ ಪುರಂದರವಿಠಲನ್ನ ಸ್ಮರಿಸುವೆ ೩

## ೧೮೩. ಪಿಳ್ಳಂಗೋವಿಯ ಚೆಲ್ವ ಕೃಷ್ಣನ

[ಶ್ರೀಕೃಷ್ಣಲೀಲೆ]

ರಾಗ: ಕಲ್ಯಾಣಿ — ತಾಳ: ತ್ರಿವಿಡೆ

ಪಿಳ್ಳಂಗೋವಿಯ ಚೆಲ್ವ ಕೃಷ್ಣನ
ಎಲ್ಲಿ ನೋಡಿದಿರಿ ರಂಗನ ಎಲ್ಲಿ ನೋಡಿದಿರಿ ಪ.

ಎಲ್ಲಿ ನೋಡಿದರಲ್ಲಿ ತಾನಿಲ್ಲದಿಲ್ಲವೆಂದು ಬಲ್ಲ ಜಾಣರು ಅ.ಪ.

ನಂದಗೋಪನ ಮಂದಿರಂಗಳ ಸಂದುಗೊಂದಿನಲಿ
ಚೆಂದ ಚೆಂದವ ಗೋಪಬಾಲರ ವೃಂದವೃಂದದಲಿ
ಸುಂದರಾಂಗದ ಸುಂದರಿಯರ ಹಿಂದುಮುಂದಿನಲಿ
ಅಂದದಾಕಳ ಕಂದಕರುಗಳ ಮಂದೆ ಮಂದೆಯಲಿ ೧

ಶ್ರೀಗುರೂಕ್ತ ಸದಾ ಸುಮಂಗಳ ಯೋಗ ಯೋಗದಲಿ
ಆಗಮಾರ್ಥದೊಳಗೆ ಮಾಡುವ ಯಾಗ ಯಾಗದಲಿ
ಶ್ರೀಗೆ ಭಾಗ್ಯನಾಗಿ ವರ್ತಿಪ ಭೋಗ ಭೋಗದಲಿ
ಭಾಗವತರು ಸದಾ ಬಾಗಿ ಪಾಡುವ ರಾಗ ರಾಗದಲಿ ೨

ಈ ಚರಾಚರದೊಳಗೆ ಜನಂಗಳಾಚೆ ಈಚೆಯಲಿ
ಖೇಚರೇಂದ್ರನ ಸುತನ ರಥದ ಚೌಕ ಪೀಠದಲಿ
ನಾಚದೆ ಮಾಧವ ಎಂಬ ಭಕ್ತರ ವಾಚಕಂಗಳಲಿ
ವೀಚುಕೊಂಡದ ಪುರಂದರವಿಠಲನ ಲೋಚನಾಗ್ರದಲಿ ೩

---

ಪಿಳ್ಳಂಗೋವಿ-ಕೊಳಲು. ಖೇಚರೇಂದ್ರ-ಇಂದ್ರ.

## ೧೮೪. ಪುಟ್ಟಿಸಬೇಡವೊ ದೇವ ಎಂದೆಂದಿಗೂ

**[ಲೋಕನೀತಿ-ಶರಣಾಗತಿ]**

**ರಾಗ: ಸಹಾನ** **ತಾಳ: ರೂಪಕ**

ಪುಟ್ಟಿಸಬೇಡವೊ ದೇವ ಎಂದೆಂದಿಗೂ ಇಂಥ ಪ.

ಕಷ್ಟಪಟ್ಟು ತಿರುಗುವ ಪಾಪಿ ಜೀವನವ ಅ.ಪ.

ನರರ ತುತಿಸಿ ನಾಲಗೆ ಬರಡು ಮಾಡಿ ಉ-
ದರ ಪೋಷಣೆಗಾಗಿ ಅವರಿವರೆನ್ನದೆ
ಧರೆಯೊಳು ಲಜ್ಜೆ ನಾಚಿಕೆಗಳನೀಡಾಡಿ
ಪರರ ಪೀಡಿಸಿ ತಿಂಬ ಪಾಪಿ ಜೀವನವ ೧

ಎಂಟು ಗೇಣು ಶರೀರ ಒಂದು ಗೇಣು ಮಾಡಿಕೊಂಡು
ಪಂಟಿಸುತ್ತ ಮೆಲ್ಲ ಮೆಲ್ಲನೆ ಪೋಗಿ
ಗಂಟಲ ಸೆರೆಗಳುಬ್ಬಿ ಕೇಳುವ ಸಂಕಟ ವೈ-
ಕುಂಠಪತಿ ನೀನೆ ಬಲ್ಲೆ ಕಪಟನಾಟಕನೆ ೨

ಲೆಖ್ಖದಲಿ ನೀ ಮೊದಲು ಮಾಡಿದ್ದಲ್ಲದೆ
ಸಖ್ಯಕೆ ವೆಗ್ಗಳ ಕೊಡುವರುಂಟೆ
ಕಕ್ಕುಲಾತಿಪಟ್ಟರಿಲ್ಲ ಕರುಣಾಳು ನಿನ್ನ ಮೊರೆ
ಹೊಕ್ಕೆ ಎನ್ನನು ಕಾಯೊ ಪುರಂದರವಿಠಲ ೩

## ೧೮೫. ಪೊಂಗೊಳಲನೂದುತಿಹ ಯದುಕುಲೋತ್ತುಂಗ

[ ದಶಾವತಾರ ]

ರಾಗ: ಕಾಂಬೋದಿ ತಾಳ: ಝಂಪೆ

ಪೊಂಗೊಳಲನೂದುತಿಪ ಯದುಕುಲೋತ್ತುಂಗ ಪ.

ತಿಂಗಳಾಪಾಂಗ ನೀರಾಜಿತ ಶುಭಾಂಗ ಅ.ಪ.

ಸಲಿಲಗಾಚಲಧರನೆ ಇಳೆಯಾಣ್ಮ ಜ್ವಲನೇತ್ರ
ಬಲಿಯ ಬೇಡಿದೆ ಭೃಗುಕುಲಜನೆನಿಸಿ
ಬಲಿದ ಬಿಲ್ಲನೆ ಮುರಿದು ಲಲನೆಯರ ವಶನಾಗಿ
ಖಳರ ಸಂಬೋಧಿಸಿದೆ ಚೆಲುವ ಹಯವೇರಿ ೧

ಬಿಡದೆ ನೋಡಿದ ಬೆಟ್ಟವಡಿಗೆ ಬೆನ್ನನು ಕೊಟ್ಟೆ
ಅಡವಿಚರ ಕಡುಕೋಪಿ ಕೊಡೆಯ ಪಿಡಿದು
ಕೊಡಲಿಕೈ ಜಡೆ ಧರಿಸಿ ಗಿಡ ಹತ್ತಿ ಕೆಡಿಸಿ ಸ-
ನ್ಮಡದಿಯರ ಹಯವೇರಿ ಕಡಿದ ರಣಶೂರ ೨

ವಾರಿಚರ ಕೂರ್ಮಾವತಾರ ಸೂಕರ ಹರಿಯೆ
ಧಾರುಣಿಯನಳೆದೆ ಶೂರರನು ಗೆಲಿದೆ
ನೀರಜಾಕ್ಷಿಯ ತಂದೆ ಚೋರ ವ್ರತವನಳಿದೆ ಹಯ-
ವೇರಿದನೆ ಪುರಂದರವಿಠಲ ಜಗದಯ್ಯ ೩

## ೧೮೬. ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ

[ ಶ್ರೀಕೃಷ್ಣಲೀಲೆ ]

ರಾಗ: ಶಂಕರಾಭರಣ ತಾಳ: ಆದಿ

ಪೋಗದಿರೆಲೊ ರಂಗ ಬಾಗಿಲಿಂದಾಚೆಗೆ ಪ.

ಭಾಗವತರು ಕಂಡರೆತ್ತಿಕೊಂಡೊಯ್ವರೊ ಅ.ಪ.

ಸುರಮುನಿಗಳು ತಮ್ಮ ಹೃದಯಗಹ್ವರದಲ್ಲಿ
ಪರಮಾತ್ಮನ ಕಾಣದರಸುವರೊ
ದೊರಕದ ವಸ್ತುವು ದೊರಕಿತು ತಮಗೆಂದು
ಹರುಷದಿಂದಲಿ ನಿನ್ನ ಕರೆದೆತ್ತಿಕೊಂಬರೊ ೧

ಅಗಣಿತಗುಣ ನಿನ್ನ ಜಗದ ನಾರಿಯರೆಲ್ಲ
ಹಗೆಯಾಗಿ ನುಡಿವರೊ ಗೋಪಾಲನೆ
ಮಗುಗಳ ಮಾಣಿಕ್ಯ ತಗುಲಿತು ಕರಕೆಂದು
ಬೇಗದಿಂದಲಿ ಬಂದು ಬಿಗಿದಪ್ಪಿಕೊಂಬರೊ ೨

ಧಿಟ್ಟ ನಾರಿಯರೆಲ್ಲ ಇಷ್ಟವ ಸಲಿಸೆಂದು
ಅಟ್ಟಟ್ಟಿ ಬೆನ್ನಿಂದೆ ತಿರುಗುವರೊ
ಸೃಷ್ಟೀಶ ಪುರಂದರವಿಠಲರಾಯನೆ
ಇಷ್ಟಿಷ್ಟು ಬೆಣ್ಣೆಯ ಕೊಟ್ಟೇನೊ ರಂಗಯ್ಯ ೩

## ೧೪೭. ಫಲಾಹಾರವನು ಮಾಡೊ ಪರಮಪುರುಷ

**[ ಶ್ರೀಹರಿ-ನೈವೇದ್ಯ ಸಮರ್ಪಣೆ ]**

**ರಾಗ: ಆನಂದಭೈರವಿ** **ತಾಳ: ಅಟ್ಟ**

ಫಲಾಹಾರವನು ಮಾಡೊ ಪರಮಪುರುಷ ಭೂ-
ಬಲನೆ ಲಕ್ಷ್ಮೀ ಕಂದರ್ಪರ ಸಹಿತ ಪ

ಕದಳಿ ಕೆಂಬಾಳೆ ಕಿತ್ತಳೆ ಕಂಚಿಫಲಗಳು
ಬದರಿ ಬೆಳುವಲ ಜಂಬೀರ ದ್ರಾಕ್ಷೆಗಳು
ಮಧುರದ ಮಾದಾಳ ಮಾವಿನ ಹಣ್ಗಳು
ತುದಿ ಮೊದಲಿಲ್ಲದ ಪರಿಪರಿ ಫಲಗಳ ೧

ಉತ್ತತ್ತಿ ಜಂಬು ನಾರಂಗ ದಾಳಿಂಬವು
ಮುತ್ತಾದೌದುಂಬರ ಕಾರಿಯು ಕವಳಿ
ಕತ್ತರಿಸಿದ ಕಬ್ಬು ಪಲಸು ತೆಂಗಿನಕಾಯಿ
ಒತ್ತಿದ ಬೇಳೆ ನೆಲಗಡಲೆ ಖರ್ಜೂರ ಹಣ್ಣ ೨

ಹಾಲು ಸಕ್ಕರೆ ಜೇನುತುಪ್ಪ ಸೀಕರಣೆಯು
ಹಾಲು ರಸಾಯನ ಬೆಣ್ಣೆ ಸೀಯಾಳು
ಮೂಲೋಕದೊಡೆಯ ಶ್ರೀಪುರಂದರವಿಠಲನೆ
ಪಾಲಿಸೋ ನಿನ್ನಯ ಕರಕಂಜದಿಂದಲಿ ೩

## ೧೮೮. ಬಂದದ್ದೆಲ್ಲ ಬರಲಿ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಸುರಟ ತಾಳ: ಆದಿ

ಬಂದದ್ದೆಲ್ಲ ಬರಲಿ ಗೋವಿಂದನ ದಯ ನಮಗಿರಲಿ ಪ.

ಇಂದಿರೆ ರಮಣನ ಧ್ಯಾನವ ಮಾಡಲು
ಬಂದ ದುರಿತ ಬಯಲಾದುದಿಲ್ಲವೆ ಅ.ಪ.

ಅರಗಿನ ಮನೆಯೊಳಗಂದು ಪಾಂಡವರನು ಕೊಲಬೇಕೆಂದು
ದುರುಳ ಕೌರವ ಬಂದು ಅತಿ ಹರುಷದಲಿರುತಿರಲಂದು
ಹರಿ ಕೃಪೆ ಅವರಲ್ಲಿದ್ದ ಕಾರಣ ಬಂದ
ಘೋರ ದುರಿತ ಬಯಲಾದುದಿಲ್ಲವೆ? ೧

ಆರು ಒಲಿಯದಿರಲೆನ್ನ ಮುರಾರಿ ಎನಗೆ ಪ್ರಸನ್ನ
ಹೋರುವ ದುರಿತದ ಬನ್ನ ನಿವಾರಿಪ ಕರುಣ ಸಂಪನ್ನ
ಶ್ರೀರಮಣನ ಸಿರಿ ಚರಣ ಶರಣರಿಗೆ
ಕ್ರೂರ ಯಮನು ಶರಣಾಗಲಿಲ್ಲವೆ? ೨

ಸಿಂಗನ ಪೆಗಲೇರಿದವಗೆ ಕರಿ ಭಂಗವೇಕೆ ಮತ್ತವಗೆ
ರಂಗನ ಕೃಪೆಯುಳ್ಳವಗೆ ಭವ ಭಂಗಗಳೇತಕ್ಕವಗೆ
ಮಂಗಳ ಮಹಿಮ ಪುರಂದರವಿಠಲ ಶು-
ಭಾಂಗನ ದಯವೊಂದಿದ್ದರೆ ಸಾಲದೆ ೩

## ೧೮೯. ಬಂದು ನಿಂದಿಹ ನೋಡಿ ಭೂತಳದಿ ವೆಂಕಟ

[ ತಿರುಪತಿಯ ಶ್ರೀನಿವಾಸ ]

ರಾಗ: ಮಧ್ಯಮಾವತಿ ತಾಳ: ಅಟ್ಟ

ಬಂದು ನಿಂದಿಹ ನೋಡಿ ಭೂತಳದಿ ವೆಂಕಟ
ಇಂದಿರೆಯ ಒಡಗೂಡಿ ಒಪ್ಪುವ ನಿರಂತರ
ಪೊಂದಿ ಭಜನೆಯ ಮಾಡಿ ಆನಂದಗೂಡಿ ಪ.

ವಂದಿಸುತ ಮನದೊಳಗೆ ಇವನಡಿ
ದ್ವಂದ್ವ ಭಜಿಸಲು ಬಂದ ಭಯಹರ
ಇಂದುಧರ ಸುರವೃಂದನುತ ಗೋ-
ವಿಂದ ಘನ ದಯಾಸಿಂಧು ಶ್ರೀಹರಿ ಅ.ಪ.

ದ್ವಾರದೆಡಬಲದಲ್ಲಿ ಜಯವಿಜಯರಿಬ್ಬರು
ಸೇರಿ ಸೇವಿಪರಲ್ಲಿ ಸನಕಾದಿನುತ ಶೃಂ-
ಗಾರ ನಿಧಿ ಅಂಗದಲ್ಲಿ ಮುತ್ತಿನಲಿ ಶೋಭಿಪ
ಹಾರ ಪೊಂದಿಹುದಲ್ಲಿ ವಿಸ್ತಾರದಲ್ಲಿ
ವಾರವಾರಕೆ ಪೂಜೆಗೊಂಬುವ
ಹಾರ ಮಕುಟಾಭರಣ ಕುಂಡಲಧಾರ ಭುಜ ಕೇ-
ಯೂರಭೂಷಿತ ಮಾರಪಿತ ಗುಣ ಮೋಹನಾಂಗ
ಚಾರು ಪೀತಾಂಬರ ಕಟಿ ಕರವೀರ ಕ-
ಲ್ಹಾರಾದಿ ಪೂವಿನ ಹಾರ ಕೊರಳೊಳು ಎಸೆವು-
ತಿರೆ ವದನಾರವಿಂದನು ನಗುತ ನಲಿಯುತ ೧

ಎಲ್ಲ ಭಕುತರಭೀಷ್ಟ ಕೊಡುವುದಕೆ ತಾ ಕೈ-
ವಲ್ಯಸ್ಥಾನವ ಬಿಟ್ಟ ಶೇಷಾದ್ರಿ ಮಂದಿರ
ದಲ್ಲಿ ಲೋಲುಪ ದಿಟ್ಟ ಸೌಭಾಗ್ಯನಿಧಿಗೆದು-
ರಿಲ್ಲ ಭುಜಬಲ ಪುಷ್ಟ ಕಸ್ತೂರಿಯಿಟ್ಟ
ಚೆಲ್ವ ಫಣೆಯಲಿ ಶೋಭಿಸುವ ಸಿರಿ-
ವಲ್ಲಭನ ಗುಣ ಪೊಗಳದಿಹ ಜಗ ಖುಲ್ಲರೆದೆವಲ್ಲಣ ಪರಾಕ್ರಮ
ಮಲ್ಲಮರ್ದನ ಮಾತುಳಾರಿ ಫಲ್ಗುಣನ ಸಖ ಪ್ರಕಟನಾಗಿಹ
ದುರ್ಲಭನು ಅಘದೂರ ಬಹುಮಾಂಗಲ್ಯ ಹೃದಯನು ಸೃಷ್ಟಿಗೆ
ಉಲ್ಲಾಸ ಕೊಡುತಲಿ ಚಂದದಿಂದಲಿ ೨

ಪದಕ ಕೌಸ್ತುಭಧಾರ ಸರಿಗೆಯ ಕಂಧರ
ಸುದರುಶನದರಧಾರ ಸುಂದರ ಮನೋಹರ
ಪದಯುಗದಿ ನೂಪುರ ಇಟ್ಟಿಹನು
ಸನ್ಮುನಿ ಹೃದಯಸ್ಥಿತ ಗಂಭೀರ ಬಹು ದಾನಶೂರ
ವಿಧಿ ಭವಾದ್ಯರ ಪೊರೆವ ದಾತನು
ತುದಿ ಮೊದಲು ಮಧ್ಯಮ ವಿರಹಿತನು ಉದುಭವಾದಿಗಳೀವ ಕರ್ತನು

ತ್ರಿದಶಪೂಜಿತ ತ್ರಿಭುವನೇಶ ಸದುವಿಲಾಸದಿ ಸ್ವಾಮಿತೀರ್ಥದಿ
ಉದಿಸುತಿರ ಸಿರಿ ಮಹಿಳೆ ಸಹಿತದಿ ಪದುಮನಾಭ ಪುರಂದರವಿಟ್ಠಲ
ಪ್ರತಿ ವರುಷ ಬ್ರಹ್ಮೋತ್ಸವದಿ ಮೆರೆಯುತ ೩

---

ಇಂಮಥರ ಸುರವೃಂದ-ಶಿವನೇ ಮೊದಲಾದ ದೇವತಾಸಮೂಹ. ವಾರವಾರಕೆ ಪೂಜೆಗೊಂಬ-ನಿತ್ಯಪೂಜೆ ಇದ್ದೇ ಇದೆಯಾದರೂ ಪ್ರತಿ ಶುಕ್ರವಾರ ಅವನಿಗೆ ತಿರುಮಂಜನದ ವಿಶೇಷ ಸೇವೆ. ಖುಲ್ಲರೆದೆದಲ್ಲಣ-ಕ್ಷುದ್ರ ಜನರ ಎದೆಯನ್ನು ತಲ್ಲಣಗೊಳಿಸುವವ. ಮಲ್ಲಮರ್ದನ ಮಾತುಳಾರಿ-ಚಾಣೂರ ಮುಂತಾದ ಮಲ್ಲರನ್ನು ಹಾಗೂ ಮಾವ ಕಂಸನನ್ನು ಕೊಂದ ಶ್ರೀಕೃಷ್ಣ. ಅಘದೂರ-ಪಾಪವಿರಹಿತನು. ಸುದರ್ಶನವೆಂಬ ಚಕ್ರ (ಅರ)ವನ್ನು ಧರಿಸಿದವ. ವಿಧಿಭವಾದ್ಯರು-ಬ್ರಹ್ಮ, ಶಿವ ಮೊದಲಾದವರು. ಉದುಭವಾದಿಗಳೀವ-ಲೋಕದ ಸೃಷ್ಟಿ ಮತ್ತು ಅಭಿವೃದ್ಧಿಗೆ ಕಾರಣನು. ಸ್ವಾಮಿತೀರ್ಥದಿ.... ಸಿರಿ-ಪುಷ್ಕರಿಣಿ ಸರೋವರದಲ್ಲಿ ಉದಯಿಸಿದ ಲಕ್ಷ್ಮಿ.

## ೧೯೦. ಬಣ್ಣಿಸಿ ಗೋಪಿ ಹರಸಿದಳು

[ ಶ್ರೀಕೃಷ್ಣಲೀಲೆ ]

ರಾಗ: ಧನ್ಯಾಸಿ ತಾಳ: ಆದಿ

ಬಣ್ಣಿಸಿ ಗೋಪಿ ಹರಸಿದಳು ಪ.

ಎಣ್ಣೆಯನೊತ್ತುತ ಯದುಕುಲ ತಿಲಕಗೆ ಅ.ಪ.

ಆಯುಷ್ಯವಂತನಾಗು ಅತಿ ಬಲ್ಲಿದನಾಗು
ಮಾಯದ ಖಳರ ಮರ್ದನನಾಗು
ರಾಯರ ಪಾಲಿಸು ರಕ್ಕಸರ ಸೋಲಿಸು
ವಾಯುಸುತಗೆ ನೀನೊಡೆಯನಾಗೆನುತ ೧

ಧೀರನು ನೀನಾಗು ದಯಾಂಬುಧಿಯಾಗು
ಆ ರುಕ್ಮಿಣಿಗೆ ನೀನರಸನಾಗು
ಮಾರನ ಪಿತನಾಗು ಮಧುಸೂದನನಾಗು
ದ್ವಾರಾವತಿಗೆ ನೀ ದೊರೆಯಾಗೆನುತ ೨

ಆನಂದ ನೀನಾಗು ಅಚ್ಯುತ ನೀನಾಗು
ದಾನವಾಂತಕನಾಗು ದಯವಾಗು
ಶ್ರೀನಿವಾಸನಾಗು ಶ್ರೀನಿಧಿ ನೀನಾಗು
ಜ್ಞಾನಿ ಪುರಂದವಿಠಲನಾಗೆನುತ ೩

## ೧೯೧. ಬಲಿಯ ಮನೆಗೆ ವಾಮನ ಬಂದಂತೆ

[ ಶ್ರೀಹರಿಸ್ತುತಿ ]

ಬಲಿಯ ಮನೆಗೆ ವಾಮನ ಬಂದಂತೆ
ಭಗೀರಥಗೆ ಶ್ರೀಗಂಗೆ ಬಂದಂತೆ
ಮುಚುಕುಂದಗೆ ಶ್ರೀಮುಕುಂದ ಬಂದಂತೆ
ಗೋಪಿಯರಿಗೆ ಗೋವಿಂದ ಬಂದಂತೆ
ವಿದುರನ ಮನೆಗೆ ಶ್ರೀಕೃಷ್ಣ ಬಂದಂತೆ
ವಿಭೀಷಣನ ಮನೆಗೆ ಶ್ರೀರಾಮ ಬಂದಂತೆ
ನಿನ್ನ ನಾಮವು ಬಂದು ಎನ್ನ ನಾಲಿಗೆಯಲಿ
ನಿಂದು ಸಲಹಲಿ ಶ್ರೀಪುರಂದರವಿಠಲ

## ೧೯೨. ಬಾ ಬಾ ರಂಗ ಭುಜಂಗಶಯನ

[ಶ್ರೀಕೃಷ್ಣಲೀಲೆ]

ರಾಗ: ಕೇದಾರಗೌಳ

ತಾಳ: ಆದಿ

ಬಾ ಬಾ ರಂಗ ಭುಜಂಗಶಯನ ಕೋಮಲಾಂಗ ಕೃಪಾಪಾಂಗ ಪ.
ಬಾ ಬಾ ಎನ್ನಂತರಂಗ ಮಲ್ಲರಗಜ ಸಿಂಗ ದುರಿತ ಭವಭಂಗ ಅ.ಪ.

ಉಭಯ ಕಾವೇರಿಯ ಮಧ್ಯನಿವಾಸ
ಅಭಯದಾಯಕ ಮಂದಹಾಸ
ಸಭೆಯೊಳು ಸತಿಯಳ ಕಾಯಿದ ಉಲ್ಲಾಸ
ಇಭವರದನೆ ಶ್ರೀನಿವಾಸ ೧

ಏಳು ಪ್ರಾಕಾರದ ಮಾಳಿಗೆ ಮನೆಯೊಳಗೆ
ಗಾಳಿಯ ದೇವರ ದೇವ
ಸೋಳಸಾಸಿರ ಗೋಪಿಯರಾಳಿದ ಈ-
ರೇಳು ಲೋಕದ ಜನ ಕಾವ ೨

ಚಂದ್ರ ಪುಷ್ಕರಿಣಿಯ ತೀರವಿಹಾರ
ಇಂದ್ರಾದಿ ಸುರ ಪರಿವಾರ
ಚಂದ್ರಶೇಖರ ನುತನಾದ ಸುಖ-
ಸಾಂದ್ರ ಸುಗುಣ ಗಂಭೀರ ೩

ಈಷಣತ್ರಯಗಳ ದೂಷಿತ ನಿರತ ಅ-
ಶೇಷ ವಿಭವ ಜನಪಾಲ
ಭೂಷಿತ ನಾನಾ ವಸ್ತ್ರಾಭರಣ ವಿ-
ಭೀಷಣಗೊಲಿದ ಸುಪ್ರಾಣ ೪

ಶಂಬರಾರಿಯ ಪಿತ ಡಂಬರಹಿತ ಮನ
ಅಂಬುಜದಳನಿಭನೇತ್ರ
ಕಂಬುಚಕ್ರಧರ ಪುರಂದರವಿಠಲ
ತುಂಬುರು ನಾರದಕೃತ ಸ್ತೋತ್ರ ೫

## ೧೯೩. ಬಾರಯ್ಯ ವೆಂಕಟರಮಣ

[ದಶಾವತಾರ]

ರಾಗ: ಸಾವೇರಿ

ಬಾರಯ್ಯ ವೆಂಕಟರಮಣ-ಭಕ್ತರ ನಿಧಿಯೆ
ಬಾರೋ ವಿಶ್ವಂಭರಣ ಪ

ತೋರೋ ನಿನ್ನಯ ದಯೆ ತೋಯಜಾಂಬಕನೆ ಅ.ಪ.

ವೇದಗೋಚರ ಬಾರೋ ಆದಿಕಚ್ಛಪ ಬಾರೋ
ಮೋದಸೂಕರ ಬಾರೋ ಸದಯ ನರಸಿಂಹ ಬಾರೋ ೧

ವಾಮನ ಭಾರ್ಗವ ಬಾರೋ ರಾಮ ಕೃಷ್ಣನೆ ಬಾರೋ
ಪ್ರೇಮದ ಬುದ್ಧನೆ ಬಾರೋ ಸ್ವಾಮಿ ಕಲ್ಕಿಯೆ ಬಾರೋ ೨

ಅರವಿಂದನಾಭ ಬಾರೋ ಸುರರ ಪ್ರಭುವೆ ಬಾರೋ
ಪುರುಹೂತವಂದ್ಯ ಬಾರೋ ಪುರಂದರವಿಠಲ ಬಾರೋ ೩

---

ಕಚ್ಛಪ-ಕೂರ್ಮ, ಪುರುಹೂತ-ಇಂದ್ರ. ಸಂಕ್ಷಿಪ್ತವಾಗಿ ದಶಾವತಾರದ ಪ್ರಸ್ತಾಪವಿದೆ

## ೧೯೪. ಬಾರೋ ಬ್ರಹ್ಮಾದಿವಂದ್ಯಾ

**[ ಶ್ರೀಹರಿ ಸ್ತುತಿ ]**

**ರಾಗ: ಮಧ್ಯಮಾವತಿ** **ತಾಳ: ಆದಿ**

ಬಾರೋ ಬ್ರಹ್ಮಾದಿವಂದ್ಯಾ
ಬಾರೋ ವಸುದೇವ ಕಂದ ಪ

ಧಿಗಿಧಿಗಿ ನೀ ಕುಣಿದಾಡುತ ಬಾರೋ ದೀನರಕ್ಷಕನೇ
ಜಗದೀಶಾ ಕುಣಿದಾಡುತ ಬಾರೋ ಚೆನ್ನಕೇಶವನೇ ೧

ಗೊಲ್ಲರ ಮನೆಗೆ ಪೋಗಲು ಬೇಡ ಗೋವಿಂದಾ ಕೇಳೋ
ಹಾಲು ಬೆಣ್ಣೆ ಮೊಸರಿಕ್ಕುವೆ ನೀನುಣ್ಣಬಾರೋ ೨

ದೊಡ್ಡ ದೊಡ್ಡ ಮುತ್ತಿನ ಹಾರವ ಹಾಕಿ ನೋಡುವೆ ಬಾರೋ
ದೊಡ್ಡಪುರದ ದ್ವಾರಕಿವಾಸ ಪುರಂದರವಿಟ್ಠಲ ೩

## ೧೯೫. ಬಿನ್ನಹಕೆ ಬಾಯಿಲ್ಲವಯ್ಯಾ

**[ ಲೋಕನೀತಿ ]**

**ರಾಗ: ಕಾಂಬೋದಿ** **ತಾಳ: ಝಂಪೆ**

ಬಿನ್ನಹಕೆ ಬಾಯಿಲ್ಲವಯ್ಯಾ
ಅನಂತ ಅಪರಾಧ ಎನ್ನಲ್ಲಿ ಇರಲಾಗಿ ಪ.

ಅಸುರಾರಿ ನಿನ್ನ ಮರೆತೆನೊ ಕಾಯೊ ಹರಿಯೆ ಅ.ಪ

ಶಿಶು ಮೋಹ ಸತಿ ಮೋಹ ಜನನಿ ಜನಕರ ಮೋಹ
ರಸಿಕ ಭ್ರಾಂತಿಯ ಮೋಹ ರಾಜಮನ್ನಣೆ ಮೋಹ
ಪಶುಮೋಹ ಭೂಮೋಹ ಬಂಧುವರ್ಗದ ಮೋಹ
ಹಸನುಳ್ಳ ಆಭರಣಗಳ ಮೋಹದಿಂದ ೧

ಅನ್ನಮದ ಅರ್ಥಮದ ಅಖಿಳ ವೈಭವದ ಮದ
ಮುನ್ನ ಪ್ರಾಯದ ಮದವು ರೂಪಮದವು
ತನ್ನ ಸತ್ವದ ಮದ ಧಾತ್ರಿ ವಶವಾದ ಮದ
ಇನ್ನು ತನಗೆದುರಿಲ್ಲವೆಂತೆಂಬ ಮದದಿಂದ ೨

ಇಷ್ಟು ದೊರಕಿದರೆ ಮತ್ತಿಷ್ಟು ಬೇಕೆಂಬಾಸೆ
ಅಷ್ಟು ದೊರಕಿದರು ಮತ್ತಷ್ಟರಾಸೆ
ಕಷ್ಟ ಬೇಡೆಂಬಾಸೆ ಕಡುಸುಖವ ಕಾಂಬಾಸೆ
ನಷ್ಟಜೀವನದಾಸೆ ಪುರಂದರವಿಠಲ ೩

## ೧೯೬. ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಶಂಕರಾಭರಣ ತಾಳ: ಆದಿ

ಬುದ್ಧಿ ಮಾತು ಹೇಳಿದರೆ ಕೇಳಬೇಕಮ್ಮ ಮಗಳೆ ಮನ ಪ.

ಶುದ್ಧಳಾಗಿ ಗಂಡನೊಡನೆ ಬಾಳಬೇಕಮ್ಮ ಅ.ಪ.

ಅತ್ತೆ ಮಾವಗಂಜಿಕೊಂಡು ನಡೆಯಬೇಕಮ್ಮ ಮಗಳೆ
ಚಿತ್ತದೊಲ್ಲಭನ ಅಕ್ಕರೆಯನ್ನು ಪಡೆಯಬೇಕಮ್ಮ
ಹೊತ್ತುಹೊತ್ತಿಗೆ ಮನೆಯ ಕೆಲಸ ಮಾಡಬೇಕಮ್ಮ ಮಗಳೆ
ಹತ್ತುಮಂದಿ ಒಪ್ಪುವ ಹಾಗೆ ನುಡಿಯಬೇಕಮ್ಮ ೧

ಕೊಟ್ಟು ಕೊಂಬುವ ನಂಟರೊಡನೆ ದ್ವೇಷ ಬೇಡಮ್ಮ ಮಗಳೆ
ಅಟ್ಟು ಉಂಬುವ ಕಾಲದಲ್ಲಿ ಆಟ ಬೇಡಮ್ಮ
ಹಟ್ಟಿ ಬಾಗಿಲಲ್ಲಿ ಬಂದು ನಿಲ್ಲಬೇಡಮ್ಮ ಮಗಳೆ
ಕಟ್ಟಿ ಆಳುವ ಗಂಡನೊಡನೆ ಸಿಟ್ಟು ಬೇಡಮ್ಮ ೨

ನೆರೆಹೊರೆಯವರಿಗೆ ನ್ಯಾಯವನ್ನು ಹೇಳಬೇಡಮ್ಮ ಮಗಳೆ
ಗರುವ ಕೋಪ ಮತ್ಸರವನ್ನು ಮಾಡಬೇಡಮ್ಮ
ಪರರ ನಿಂದಿಪ ಹೆಂಗಳೊಡನೆ ಸೇರಬೇಡಮ್ಮ ಮಗಳೆ
ವರಪುರಂದರವಿಠಲನ ಸ್ಮರಣೆ ಮರೆಯಬೇಡಮ್ಮ ೩

## ೧೯೭. ಬೇವು ಬೆಲ್ಲದೊಳಿಡಲೇನು ಫಲ

**[ ಲೋಕನೀತಿ-ಪಾಪಂಚಕ ]**

**ರಾಗ: ಬೇಹಾಗು** **ತಾಳ: ಏಕ**

ಬೇವು ಬೆಲ್ಲದೊಳಿಡಲೇನು ಫಲ
ಹಾವಿಗೆ ಹಾಲೆರೆದೇನು ಫಲ ಪ.

ಕುಟಿಲವ ಬಿಡದಿಹ ಮನುಜರು ಮಂತ್ರವ
ಪಠನೆಯ ಮಾಡಿದರೇನು ಫಲ
ಸಟೆಯನ್ನಾಡುವ ಮನುಜರು ಸಂತತ
ನಟನೆಯ ಮಾಡಿದರೇನು ಫಲ ೧

ಕಪಟತನದಲಿ ಕಾಡುತ ಜನರನು
ಜಪವನು ಮಾಡಿದರೇನು ಫಲ
ಕುಪಿತ ತನುವನು ಬಿಡದೆ ನಿರಂತರ
ಜಪವನು ಮಾಡಿದರೇನು ಫಲ ೨

ಮಾತಾಪಿತರನು ಬಳಲಿಸಿದಾತನು
ಯಾತ್ರೆಯ ಮಾಡಿದರೇನು ಫಲ
ಘಾತಕತನವನು ಬಿಡದೆ ನಿರಂತರ
ಗೀತೆಯನೋದಿದರೇನು ಫಲ ೩

ಪತಿಗಳ ನಿಂದಿಪ ಸತಿಯರು ಬಹು ವಿಧ
ವ್ರತಗಳ ಮಾಡಿದರೇನು ಫಲ
ಅತಿಥಿಗಳೆಡೆಯಲಿ ಭೇದವ ಮಾಡುತ
ಗತಿಯನು ಬಯಸಿದರೇನು ಫಲ ೪

ಹೀನ ಗುಣಂಗಳು ಹಿಂಗದೆ ಗಂಗೆಯ
ಸ್ನಾನವ ಮಾಡಿದರೇನು ಫಲ
ಶ್ರೀನಿಧಿ ಪುರಂದರವಿಠಲನ ನೆನೆಯದೆ
ಮೌನವ ಮಾಡಿದರೇನು ಫಲ ೫

## ೧೯೮. ಭಂಡನಾದೆನು ನಾನು ಸಂಸಾರದಿ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಕಾಂಬೋದಿ ತಾಳ: ಝಂಪೆ

ಭಂಡನಾದೆನು ನಾನು ಸಂಸಾರದಿ ಪ.

ಕಂಡು ಕಾಣದ ಹಾಗೆ ಇರಬಹುದೆ ಹರಿಯೆ ಅ.ಪ.

ಕಂಡ ಕಲ್ಲುಗಳಿಗೆ ಕೈಮುಗಿದು ಸಾಕಾದೆ
ದಿಂಡೆಕಾರರ ಮನೆಗೆ ಬಲು ತಿರುಗಿದೆ
ಶುಂಡಾಲನಂತೆನ್ನ ಮತಿ ಮಂದವಾಯಿತು
ಪುಂಡರೀಕಾಕ್ಷ ನೀ ಕರುಣಿಸಯ್ಯ ಬೇಗ ೧

ನಾನಾ ವ್ರತಗಳನು ಮಾಡಿ ನಾ ಬಳಲಿದೆನು
ಏನಾದರೂ ಎನಗೆ ಫಲವಿಲ್ಲವಯ್ಯ
ಆ ನಾಡು ಈ ನಾಡು ಸುತ್ತಿ ನಾ ಕಂಗೆಟ್ಟೆ
ಇನ್ನಾದರೂ ಕೃಪೆಯ ಮಾಡಯ್ಯ ಹರಿಯೆ ೨

ಬುದ್ಧಿಹೀನರ ಮಾತ ಕೇಳಿ ನಾ ಮರುಳಾದೆ
ಶುದ್ಧಿಯಿಲ್ಲದೆ ಮನವು ಕೆಟ್ಟುಹೋಯ್ತು
ಉದ್ಧಾರಕ ಪುರಂದರವಿಟ್ಠಲನ ತತ್ತ್ವದ
ಸಿದ್ಧಿಯನು ದಯೆಗೈದು ಉದ್ಧರಿಸು ಹರಿಯೆ ೩

## ೧೯೯. ಭಯನಿವಾರಣವು ಶ್ರೀಹರಿಯ ನಾಮ

[ ಶ್ರೀಹರಿಸ್ತುತಿ-ನಾಮಮಹಿಮೆ ]

ರಾಗ: ಭೂಪಾಳಿ ತಾಳ: ಝಂಪೆ

ಭಯನಿವಾರಣವು ಶ್ರೀಹರಿಯ ನಾಮ
ಜಯಪಾಂಡುರಂಗವಿಟ್ಠಲ ನಿನ್ನ ನಾಮ ಪ.

ಧಾರಿಣೀದೇವಿಗಾಧಾರವಾಗಿಹ ನಾಮ
ನಾರದರು ನಲಿನಲಿದು ನೆನೆವ ನಾಮ

ಘೋರಪಾತಕಿ ಅಜಾಮಿಳನ ಸಲಹಿದ ನಾಮ
ತಾರಕವು ಬ್ರಹ್ಮ-ಭವರಿಗೆ ನಿನ್ನ ನಾಮ ೧

ಮೊರೆಯ ಲಾಲಿಸಿ ಮುನ್ನ ಗಜವ ಸಲಹಿದ ನಾಮ
ಕರುಣದಿಂ ದ್ರೌಪದಿಯ ಕಾಯ್ದ ನಾಮ
ಮರುಗುತಿಹ ಧ್ರುವನ ಉನ್ನತನ ಮಾಡಿದ ನಾಮ
ಪರತತ್ತ್ವ ಇಹಕಲ್ಲವೇ ನಿನ್ನ ನಾಮ ೨

ಚರಣದಲಹಲ್ಯೆಯ ಸೆರೆಯ ಬಿಡಿಸಿದ ನಾಮ
ಕರುಣದಲಿ ಪ್ರಹ್ಲಾದನನು ಕಾಯ್ದ ನಾಮ
ತೊರೆಯಲಕ್ರೂರನಿಗೆ ನಿಜವ ತೋರಿದ ನಾಮ
ಸ್ಮರಿಪ ಜನರಿಗೆ ಸಮಸ್ತವನಿತ್ತ ನಾಮ ೩

ಚಂದ್ರಶೇಖರ ಗಿರಿಜೆಗೊರೆದ ಸಿರಿಹರಿನಾಮ
ಬಂದಾ ವಿಭೀಷಣನ ಪಾಲಿಸಿದ ನಾಮ
ಕಂದ ಮುಚುಕುಂದನಿಗೆ ಕಾಮಿತವನಿತ್ತ ನಾಮ
ಸಂದ ಪಾಂಡವಪಕ್ಷ ಪಾವನವು ನಾಮ ೪

ಅಖಿಳವೇದಪುರಾಣ ಅರಸಿ ಕಾಣದ ನಾಮ
ಸಕಲ ಯೋಗಿಜನಕೆ ಸೌಖ್ಯನಾಮ
ಪ್ರಕಟಿಸಲು ಜಗವ ಪಾವನವ ಮಾಡಿವ ನಾಮ
ರುಕುಮಿಣೀಯರಸ ವಿಟ್ಠಲ ನಿನ್ನ ನಾಮ ೫

ಭಕ್ತಿಯಲಿ ನೆನೆವರನು ಎತ್ತಿ ಸಲಹುವ ನಾಮ
ಮುಕ್ತಿಮಾರ್ಗಕೆ ಯೋಗ್ಯ ಹರಿ ನಿನ್ನ ನಾಮ
ಎತ್ತರಕೆ ಏರಿಪುದು ಸ್ವಾಮಿ ನಿನ್ನಯ ನಾಮ
ಚಿತ್ತಜನ ಪೆತ್ತ ಶ್ರೀಹರಿಯ ನಾಮ ೬

ವಾರಿಜಾನನೆ ತುಳಸಿಗೊಲಿದ ಹರಿನಾಮ ಕಾ-
ವೇರಿ ಮಧ್ಯದಲಿ ನೆಲಸಿದ ನಿನ್ನ ನಾಮ
ಕ್ಷೀರಸಾಗರದಲ್ಲಿ ಶಯನವಾಗಿಹ ನಾಮ
ನಾರಾಯಣಾ ಕೃಷ್ಣ ಹರಿ ನಿನ್ನ ನಾಮ ೭

ಹೊಂದಿದ್ದ ಭಕ್ತವೃಂದವ ಸಲಹಿದಾ ನಾಮ
ತಂದು ಅಮೃತವ ಸುರರಿಗೆರೆದ ನಾಮ
ಅಂದಂಬರೀಷನನು ಕಾಯ್ದ ಶ್ರೀಹರಿನಾಮ
ತಂದೆ ಪುರಂದರವಿಠಲ ಹರಿ ನಿನ್ನ ನಾಮ ೮

---

ಈ ಹಾಡಿನಲ್ಲಿ ಶ್ರೀಹರಿಯ ಬಹುತೇಕವಾಗಿ ಎಲ್ಲ ಭಕ್ತರ ನಾಮ ನಿರ್ದೇಶನವಿದೆ. ಧಾರಿಣಿ, ನಾರದ, ಅಜಾಮಿಳ, ಬ್ರಹ್ಮ-ಶಿವ, ಗಜೇಂದ್ರ, ದ್ರೌಪದಿ, ಧ್ರುವ, ಅಹಲ್ಯೆ, ಪ್ರಹ್ಲಾದ, ಅಕ್ರೂರ, ವಿಭೀಷಣ, ಮುಚುಕುಂದ, ಅಂಬರೀಷ ಇತ್ಯಾದಿ. (ಇವರುಗಳ ವಿವರ ಚರಿತ್ರೆಗಾಗಿ 'ಪುರಾಣನಾಮ ಚೂಡಾಮಣಿ'ಯನ್ನು ನೋಡಬಹುದು.) ಶ್ರೀಹರಿಯ ನಾಮದ ಮಹಾತ್ಮ್ಯೆಯನ್ನು ಈಶ್ವರನು ಗಿರಿಜೆಗೆ ಹೇಳಿದುದಂತೆ. ಕಾವೇರಿ ಮಧ್ಯ-ಎಂದರೆ ಶ್ರೀರಂಗಮ್ ಕ್ಷೇತ್ರ ಅಥವಾ ಶ್ರೀರಂಗಪಟ್ಟಣ.

## ೨೦೦. ಭಾಗ್ಯದ ಲಕ್ಷ್ಮಿ ಬಾರಮ್ಮ

[ ಮಹಾಲಕ್ಷ್ಮಿ ]

ರಾಗ: ಮಧ್ಯಮಾವತಿ — ತಾಳ: ಆದಿ

ಭಾಗ್ಯದ ಲಕ್ಷ್ಮಿ ಬಾರಮ್ಮ ನಮ್ಮಮ್ಮ ನೀ
ಸೌಭಾಗ್ಯದ ಲಕ್ಷ್ಮಿ ಬಾರಮ್ಮ ಪ.

ಹೆಜ್ಜೆಯ ಮೇಲೆ ಹೆಜ್ಜೆಯನಿಕ್ಕುತ
ಗೆಜ್ಜೆಯ ಕಾಲಿನ ನಾದವ ತೋರುತ
ಸಜ್ಜನ ಸಾಧು ಪೂಜೆಯ ವೇಳೆಗೆ
ಮಜ್ಜಿಗೆಯೊಳಗಿನ ಬೆಣ್ಣೆಯಂತೆ ೧

ಕನಕವೃಷ್ಟಿಯ ಕರೆಯುತ ಬಾರೆ
ಮನಕೆ ಮಾನವ ಸಿದ್ಧಿಯ ತೋರೆ
ದಿನಕರ ಕೋಟಿ ತೇಜದಿ ಹೊಳೆಯುವ
ಜನಕರಾಯನ ಕುಮಾರಿ ಬೇಗ ೨

ಶಂಕೆಯಿಲ್ಲದ ಭಾಗ್ಯವ ಕೊಟ್ಟು
ಕಂಕಣ ಕೈಯ ತಿರುಹುತ ಬಾರೆ
ಕುಂಕುಮಾಂಕಿತೆ ಪಂಕಜಲೋಚನೆ
ವೆಂಕಟರಮಣನ ಬಿಂಕದ ರಾಣಿ ೩

ಅತ್ತಿತ್ತಗಲದೆ ಭಕ್ತರ ಮನೆಯೊಳು
ನಿತ್ಯ ಮಹೋತ್ಸವ ನಿತ್ಯ ಸುಮಂಗಳ
ಸತ್ಯವ ತೋರುತ ಸಾಧು ಸಜ್ಜನರ
ಚಿತ್ತದಿ ಹೊಳೆಯುವ ಪುತ್ಥಳಿ ಬೊಂಬೆ ೪

ಸಕ್ಕರೆ ತುಪ್ಪ ಕಾಲುವೆ ಹರಿಸಿ
ಶುಕ್ಕರವಾರದ ಪೂಜೆಯ ವೇಳೆಗೆ
ಅಕ್ಕರೆಯುಳ್ಳ ಅಳಗಿರಿರಂಗನ
ಚೊಕ್ಕ ಪುರಂದರವಿಠಲನ ರಾಣಿ ೫

## ೨೦೧. ಭಾರತಿದೇವಿಯ ನೆನೆ ನೆನೆ

[ ಭಾರತಿದೇವಿ ]

ರಾಗ: ಖರಹರಪ್ರಿಯ ತಾಳ: ಆದಿ

ಭಾರತಿದೇವಿಯ ನೆನೆ ನೆನೆ
ನಿರುತ ಭಕುತಿಗಿದು ಮನೆ ಮನೆ ಪ

ಮಾರುತನರ್ಧಾಂಗಿ ಸುಚರಿತ ಕೋಮಲಾಂಗಿ
ಸಾರಸಾಕ್ಷಿ ಕೃಪಾಂಗಿ ಅಪಾಂಗಿ ೧

ಕಿಂಕಿಣಿ ಕಿಣಿಪಾದ ಪಂಕಜನೂಪುರ
ಕಂಕಣ ಕುಂಡಲಾಲಂಕೃತ ದೇಹ ೨

ಶಂಕರ ಸುರವರ ವಂದಿತ ಚರಣೆ
ಕಿಂಕರಿ ಪುರಂದರವಿಟ್ಠಲ ಕರುಣೆ ೩

## ೨೦೨. ಭಾಷೆ ಹೀನರ ಸಂಗವಭಿಮಾನ ಭಂಗ

[ ಲೋಕನೀತಿ-ಚತುರೋಕ್ತಿ ]

ರಾಗ: ಕಾಂಬೋದಿ ತಾಳ: ಝಂಪೆ

ಭಾಷೆ ಹೀನರ ಸಂಗವಭಿಮಾನ ಭಂಗ ಪ.

ಬೇಸತ್ತು ಬೇಲಿಯ ಮೇಲೊರಗಿದಂತೆ ಅ.ಪ

ಹಸಿವೆಗಾರದೆ ಬೆಕ್ಕು ಹತ್ತಿಯನು ಮೆದ್ದಂತೆ
ತೃಷೆಗಾರದೆ ಜೋಗಿ ತೆವರ ತೋಡಿದಂತೆ
ಬಿಸಿಲಿಗಾರದೆ ಕೋತಿ ಬಂಡೆಮೇಲ್ಕುಳಿತಂತೆ
ಕುಸುಮೆಯ ಹೊಲದಲ್ಲಿ ಕಳ್ಳ ಹೊಕ್ಕಂತೆ ೧

ಮಳೆಯ ರಭಸಕೆ ಅಂಜಿ ಮರವೇರಿ ಕುಳಿತಂತೆ
ಛಳಿಯ ತಾಳದೆ ಜಲದಿ ಮುಳುಗಿದಂತೆ
ಹುಳುವಿನಂಜಿಕೆಗೆ ಹೋಗಿ ಹುತ್ತದಲಿ ಕುಳಿತಂತೆ
ಎಳೆನರಿಯು ಒಂಟೆಯ ತುಟಿಗೆ ಜೋತಂತೆ ೨

ಭಾಷೆ ಹೀನರ ಆಸೆ ಪುರುಷ ನಾರಿಯ ವೇಷ
ಬಿಸಿಲು ಹಣ್ಣನು ಮೆದ್ದು ಬಳಲುತಿಹರು
ವಸುಧೆಯೊಳು ಪುರಂದರವಿಠಲನ ನೆರೆ ನಂಬಿ
ಕುಶಲದಲಿ ಸುಖಿಯಾಗಿ ಬಾಳೆಲವೊ ಮನುಜ ೩

---

ಮಾರ್ಮಿಕ ವಿಚಾರಗಳ ಸರಮಾಲೆಯೇ ಈ ಕೀರ್ತನೆಯಲ್ಲಿದೆ. ಮಾತುಕೊಟ್ಟು ತಪ್ಪಿದವರನ್ನು ನಂಬಬಾರದು ಎನ್ನುವುದಕ್ಕೆ ಹಲವಾರು ಲೌಕಿಕ ದೃಷ್ಟಾಂತಗಳನ್ನು ಕೊಟ್ಟಿದ್ದಾರೆ. ಹಸಿವೆ ತಾಳದೆ ಬೆಕ್ಕು ಹತ್ತಿಯನ್ನು ಮೆದ್ದಂತೆ; ಭಾಷೆಹೀನರ ಮಾತು ಹೆಣ್ಣುವೇಷದ ಪುರುಷನಂತೆ, ಇತ್ಯಾದಿ.

## ೨೦೩. ಭ್ರಷ್ಟರಾದರು ಮನುಜರು

**[ ಲೋಕನೀತಿ-ಬೋಧೆ ]**

**ರಾಗ: ಕಾಂಬೋದಿ** **ತಾಳ: ಝಂಪೆ**

ಭ್ರಷ್ಟರಾದರು ಮನುಜರು ಪ.

ಅಷ್ಟ ಮದ ಗರ್ವದಲಿ ಹರಿಸ್ಮರಣೆಯನು ಮರೆತು ಅ.ಪ.

ಮಡದಿ ಮಾತನು ಕೇಳಿ ನಡೆದುಕೊಂಬನು ಭ್ರಷ್ಟ
ಪಡೆದ ಜನನಿಯನು ಬೈಯುವನು ಭ್ರಷ್ಟ
ಕಡವ ಕೊಟ್ಟವರೊಡನೆ ಧಡಿತನ ಮಾಡುವ ಭ್ರಷ್ಟ
ಬಡವರಿಗೆ ಕೊಟ್ಟ ನುಡಿ ನಡೆಸದವ ಭ್ರಷ್ಟ ೧

ಬಾರದೊಡವೆಗಳನ್ನು ಬಯಸುವನು ತಾ ಭ್ರಷ್ಟ
ಸೇರದವರೊಡನೆ ಸ್ನೇಹಿಸುವ ಭ್ರಷ್ಟ
ಶೌರಿದಿನ ವ್ರತವನಾಚರಿಸದವನತಿ ಭ್ರಷ್ಟ
ನಾರಿಯರ ನೆಚ್ಚಿದಾ ನರನು ಕಡು ಭ್ರಷ್ಟ ೨

ತಂತ್ರವನು ಅರಿಯದೆ ಮಂತ್ರ ಮಾಡುವ ಭ್ರಷ್ಟ
ಮಂತ್ರವಿಲ್ಲದ ವಿಪ್ರನತಿ ಭ್ರಷ್ಟನು
ಅಂತರವನರಿಯದೆ ನುಡಿದವನು ಭ್ರಷ್ಟ ಸ್ವ-
ತಂತ್ರವಿಲ್ಲದೆ ಕಾರ್ಯ ನಡೆಸುವನು ಭ್ರಷ್ಟ ೩

ಹರಿಚರಿತ್ರೆಗಳನ್ನು ಜರಿದಾಡುವವ ಭ್ರಷ್ಟ
ಹರಿಯ ಶರಣರ ನೋಡಿ ನಿಂದಿಸುವ ಭ್ರಷ್ಟ
ಗುರುಹಿರಿಯರ ಪಾದಕ್ಕೆರಗದವ ಭ್ರಷ್ಟ
ನೆರೆಹೊರೆಯರನು ನೋಡಿ ಕರುಬುವನು ಭ್ರಷ್ಟ ೪

ಹರಿನಾಮವನು ದಿನದಿ ಸ್ಮರಿಸದಾತನು ಭ್ರಷ್ಟ
ಕರುಣವಿಲ್ಲದ ವಿಪ್ರನವ ಭ್ರಷ್ಟನು
ಕರುಣಾಳು ನಮ್ಮ ಸಿರಿ ಪುರಂದರವಿಠಲನ
ಚರಣಕಮಲವ ಸ್ಮರಿಸದವ ಭ್ರಷ್ಟನಯ್ಯ ೫

## ೨೦೪. ಮಂಗಳಂ ಜಯ ಮಂಗಳಂ

[ದಶಾವತಾರದ ಮಂಗಳಪದ]

ರಾಗ: ಪೂರ್ವಿ ತಾಳ: ಆದಿ

ಮಂಗಳಂ ಜಯ ಮಂಗಳಂ ಪ.

ನಿಗಮವ ತಂದಾ ಮತ್ಸ್ಯಾವತಾರಗೆ
ನಗವ ಬೆನ್ನಿಲಿ ಪೊತ್ತ ಕೂರ್ಮನಿಗೆ
ಜಗವನುದ್ಧರಿಸಿದ ವರಾಹಾವತಾರಗೆ
ಮಗುವಿನ ಕಾಯ್ದ ಮುದ್ದು ನರಸಿಂಹಗೆ ೧

ಭೂಮಿಯ ದಾನವ ಬೇಡಿದಗೆ
ಆ ಮಹಾ ಅರಸರ ಗೆಲಿದವಗೆ
ರಾಮಚಂದ್ರನೆಂಬ ಸ್ವಾಮಿಗೆ ಸತ್ಯ-
ಭಾಮೆಯ ಅರಸ ಗೋಪಾಲಕೃಷ್ಣಗೆ ೨

ಬತ್ತಲೆ ನಿಂತಿಹ ಬುದ್ಧನಿಗೆ
ಉತ್ತಮ ಹಯವನೇರಿದ ಕಲ್ಕಿಗೆ
ಹತ್ತವತಾರದಿ ಭಕ್ತರ ಸಲಹಿದ
ನಿತ್ಯ ಶ್ರೀ ಪುರಂದರವಿಠಲನಿಗೆ ೩

## ೨೦೫. ಮಂಗಳ ಮಾರಮಣನಿಗೆ

[ ದಶಾವತಾರದ-ಮಂಗಳಪದ ]

ರಾಗ: ಸೌರಾಷ್ಟ್ರ ತಾಳ: ಆದಿ

ಮಂಗಳ ಮಾರಮಣನಿಗೆ ಜಯಮಂಗಳ ಭೂರಮಣನಿಗೆ
ಜಯ ಮಂಗಳಂ ನಿತ್ಯ ಶುಭಮಂಗಳಂ ಪ

ಮಕುಟಕ್ಕೆ ಮಂಗಳ ಮತ್ಸ್ಯಾವತಾರಗೆ
ಮುಖಕೆ ಮಂಗಳ ಮುದ್ದು ಕೂರ್ಮನಿಗೆ
ಸುಕಂಠಕ್ಕೆ ಮಂಗಳ ಸೂಕರ ರೂಪಗೆ
ನಖಕೆ ಮಂಗಳ ಮುದ್ದು ನರಸಿಂಹಗೆ ೧

ವಕ್ಷಕೆ ಮಂಗಳ ವಟುವಾಮನಗೆ
ಪಕ್ಷಕೆ ಮಂಗಳ ಭಾರ್ಗವಗೆ
ಕಕ್ಷೆಗೆ ಮಂಗಳ ಕಾಕುತ್ಸ್ಥ ರಾಮನಿಗೆ
ಕುಕ್ಷಿಗೆ ಮಂಗಳ ಸಿರಿಕೃಷ್ಣಗೆ ೨

ಊರುಗಳಿಗೆ ಮಂಗಳ ಉತ್ತಮ ಬೌದ್ಧಗೆ
ಚರಣಕ್ಕೆ ಮಂಗಳ ಚಲುವ ಶ್ರೀಕಲ್ಕಿಗೆ
ಪರಿಪರಿರೂಪಗೆ ಪರಮ ಮಂಗಳ ನಮ್ಮ
ಪುರಂದರವಿಠಲಗೆ ಶುಭಮಂಗಳ ೩

## ೨೦೬. ಮಂಗಳ ಶ್ರೀತುಳಸಿದೇವಿಗೆ

[ ತುಳಸಿದೇವಿ ]

ರಾಗ: ನಾದನಾಮಕ್ರಿಯೆ ತಾಳ: ಛಾಪು

ಮಂಗಳ ಶ್ರೀತುಳಸಿದೇವಿಗೆ
ಜಯ ಮಂಗಳ ವೃಂದಾವನದೇವಿಗೆ ಪ.

ನೋಡಿದ ಮಾತ್ರಕೆ ದೋಷ ಸಂಹಾರಿಗೆ
ಬೇಡಿದ ವರಗಳ ಕೊಡುವಳಿಗೆ
ಮಾಡೆ ವಂದನೆಯನು ಮನುಜರ ಪಾಪದ
ಗೂಡ ನೀಡಾಡುವ ಗುಣವಂತೆಗೆ ೧

ಮುಟ್ಟಿದ ಮಾತ್ರಕೆ ಮುಕ್ತರ ಮಾಡುವ
ಮುದದಿಂದುದ್ಧರಿಸುವ ಮುನಿವಂದ್ಯೆಗೆ
ಕೊಟ್ಟರೆ ನೀರನು ಬೇರಿಗೆ ಕಾಲನ
ಮುಟ್ಟಲೀಸದ ಹಾಗೆ ಮಾಳ್ಪಳಿಗೆ ೨

ಬಿತ್ತಿ ಬೆಳಸಿ ತನ್ನ ಹೆಚ್ಚಿಸಿದವರಿಗೆ
ಚಿತ್ತವಲ್ಲಭ ಕೃಷ್ಣನ್ನರುಷದಲಿ
ಅತ್ಯಂತವಾಗಿ ತಾ ತೋರಿ ಭವದ ಬೇರ
ಕಿತ್ತು ಬಿಸಾಡುವ ಕೋಮಲೆಗೆ ೩

ಕೋಮಲವಾಗಿದ್ದ ದಳಮಂಜರಿಗಳ
ಪ್ರೇಮದಿಂದಲಿ ತಂದು ಶ್ರೀಹರಿಗೆ
ನೇಮದಿಂದರ್ಚಿಸೆ ಪರಮಾತ್ಮನೊಳು ಜೀವ
ಕಾಮಿತಾರ್ಥವನೀವ ಸದ್ಗುಣೆಗೆ ೪

ಕಾಷ್ಠವ ತಂದು ಗಂಧವ ಮಾಡಿ ಕೃಷ್ಣಗೆ
ನಿಷ್ಠೆಯಿಂದಲಿ ಲೇಪನ ಮಾಳ್ಪರ
ಜ್ಯೇಷ್ಠರೆನಿಸಿ ವೈಕುಂಠದಿ ನಿಲಿಸಿ ಸಂ
ತುಷ್ಟರ ಮಾಡುವ ಸೌಭಾಗ್ಯಗೆ ೫

ಅನ್ನವನುಂಡರು ನೀಚರ ಮನೆಯಲ್ಲಿ
ಉನ್ನತ ಪಾಪವ ಮಾಡಿದ್ದರೂ
ತನ್ನ ದಳವನೊಂದ ಕರ್ಣದಲ್ಲಿಟ್ಟರೆ
ಧನ್ಯರ ಮಾಡುವ ದಯವಂತೆಗೆ ೬

ಸರಸಿಜನಾಭನ ಸಲಿಗೆಯ ರಾಣಿಗೆ
ಶರಣಜನರ ಪೊರೆವ ಸದ್ಗುಣೆಗೆ
ತಿರುಪತಿ ನಿಲಯ ಶ್ರೀಪುರಂದರವಿಠಲನ
ಚರಣಸೇವಕಳಾದ ಚಿನ್ಮಯೆಗೆ ೭

## ೨೦೭. ಮಂದಗಮನೆ ಇವನಾರೆ ಪೇಳಮ್ಮ

[ ಶ್ರೀಕೃಷ್ಣಲೀಲೆ ]

ರಾಗ: ಮೋಹನ ತಾಳ: ಅಟ್ಟ

ಮಂದಗಮನೆ ಇವನಾರೆ ಪೇಳಮ್ಮ
ಮಂದರಧರ ಗೋವಿಂದ ಕಾಣಮ್ಮ ಪ.

ಕೆಂದಳಿರು ನಖ ಶಶಿಬಿಂಬ ಪದಪದ್ಮ
ಅಂದುಗೆ ಇಟ್ಟವನಾರೆ ಪೇಳಮ್ಮ
ಅಂದು ಕಾಳಿಂಗನ ಹೆಡೆಯ ತುಳಿದ ದಿಟ್ಟ
ನಂದನ ಕಂದ ಮುಕುಂದ ಕಾಣಮ್ಮ ೧

ಉಡುಗೆ ಪೀತಾಂಬರ ನಡುಗೆ ಹೊನ್ನುಡುದಾರ
ಕಡಗ ಕಂಕಣವಿಟ್ಟವನಾರಮ್ಮ
ಮಡದಿ ಕೇಳ್ ಸಕಲ ಲೋಕಂಗಳ ಕುಕ್ಷಿಯೊ-
ಳೊಡನೆ ತೋರಿದ ಜಗದೊಡೆಯ ಕಾಣಮ್ಮ ೨

ನೀರದ ನೀಲದಂತೆಸೆವ ವಕ್ಷದಿ ಕೇ-
ಯೂರ ಹಾರನಿಟ್ಟವನಾರಮ್ಮ
ನೀರೆ ಕೇಳು ನಿರ್ಜರರಾದವರಿಗೆ
ಪ್ರೇರಿಸಿ ಫಲವಿತ್ತುದಾರಿ ಕಾಣಮ್ಮ ೩

ಶಂಖ ಚಕ್ರವು ಗದೆ ಪದ್ಮ ಕೈಯೊಳಗಿಟ್ಟ-
ಲಂಕರಿಸುವನೀತನಾರಮ್ಮ
ಪಂಕಜಮುಖಿ ಶ್ರೀ ಭೂದೇವಿಯರಸನು
ಶಂಕೆಯಿಲ್ಲದೆ ಗೋಪಿತನಯ ಕಾಣಮ್ಮ ೪

ಕಂಬುಕಂಧರ ಕರ್ಣಾಲಂಬಿತಕುಂಡಲ
ಅಂಬುಜ ಮುಖದವನಾರೆ ಪೇಳಮ್ಮ
ರಂಭೆ ಕೇಳೀತ ಪುರಂದರವಿಟ್ಠಲ
ನಂಬಿದ ಭಕ್ತಕುಟುಂಬಿ ಕಾಣಮ್ಮ ೫

## ೨೦೪. ಮಂದಮತಿಯೋ ನಾನು

[ ಶ್ರೀಹರಿ ಸ್ತುತಿ-ಶರಣಾಗತಿ ]

ರಾಗ: ಕಾಂಬೋದಿ ತಾಳ: ಝಂಪೆ

ಮಂದಮತಿಯೋ ನಾನು ಮದನಜನಕನು ನೀನು
ಕುಂದುಗಳನೆಣಿಸದೆ ದಯಮಾಡಿ ಸಲಹೋ ಪ.

ಪಾಪಕರ್ತನು ನಾನು ಪಾಪನಾಶನ ನೀನು
ಕೋಪ ಮದ ಮತ್ಸರದಿ ಸುಳಿವೆ ನಾನು
ತಾಪವನು ತರಿದು ನಿರ್ಭಯವ ಮಾಡುವೆ ನೀನು
ರೂಪ ಛಾಯಕೆ ಮರುಳುಗೊಂಬೆನೊ ನಾನು ೧

ಶರಣರಕ್ಷಕ ನೀನು ಪರಮಪಾತಕಿ ನಾನು
ದುರಿತ ಪರ್ವತವ ಪರಿಹರಿಪೆ ನೀನು
ಮರುಳುಗೊಂಬೆಯು ನಾನು ಅರಿತು ರಕ್ಷಿಪೆ ನೀನು
ಗರುವಾಹಂಕಾರಿ ನಾನು ಅಗಮ್ಯ ನೀನು ೨

ಮಂದಭಾಗ್ಯನು ನಾನು ಇಂದಿರಾಪತಿ ನೀನು
ಹಿಂದು ಮುಂದಿನ ಸುದ್ದಿ ಅರಿಯದವ ನಾನು
ತಂದೆ ಶ್ರೀಪುರಂದರವಿಟ್ಠಲರಾಯನೆ
ಎಂದೆಂದು ಭಕ್ತರನು ಸಲಹುವೆಯೊ ನೀನು ೩

## ೨೦೯. ಮಡಿ ಮಡಿ ಮಡಿಯೆಂದು ಮೂರ್ಮಾರು ಹಾರುತಿ

[ ಲೋಕನೀತಿ ]

ರಾಗ: ನಾದನಾಮಕ್ರಿಯೆ ತಾಳ: ಆದಿ

ಮಡಿ ಮಡಿ ಮಡಿಯೆಂದು ಮೂರ್ಮಾರು ಹಾರುತಿ
ಮಡಿಯೆಲ್ಲಿ ಬಂತೊ ಬಿಕನಾಶಿ ಪ.

ಮಡಿಯು ನೀನೆ ಮೈಲಿಗೆ ನೀನೆ
ಸುಡಲಿ ನಿನ್ನ ಮಡಿ ಬಿಕನಾಶಿ ಅ.ಪ.

ಎಲುವು ಚರ್ಮ ಮಲ ಮೂತ್ರ ಗುಂಡಿಯಲಿ
ನಲಿಯುತ ನಿಂತೆಯೊ ಬಿಕನಾಶಿ
ನೆಲೆಗೊಂಡ ನವದ್ವಾರದ ಹೊಲೆಯೊಳು
ಅಳಲುತ ನೀ ಬಿದ್ದೆ ಬಿಕನಾಶಿ ೧

ಹುಟ್ಟಲು ಸೂತಕ ಸಾಯಲು ಸೂತಕ
ನಟ್ಟನಡುವೆ ಬಂತೆ ಬಿಕನಾಶಿ
ಬಿಟ್ಟುಬಿಡದೆ ಕಾವೇರಿಯ ಮುಳುಗಲು
ಮುಟ್ಟು ಹೋಹುದೆ ಬಿಕನಾಶಿ ೨

ಚರ್ಮವ ತೊಳೆದರೆ ಕರ್ಮವು ಹೋಹುದೆ
ಮರ್ಮವ ತಿಳಿಯದೆ ಬಿಕನಾಶಿ
ಬೊಮ್ಮನಯ್ಯ ಪುರಂದರವಿಠಲನ ಪಾಡಿ
ನಿರ್ಮಲದಿ ಬಾಳೆಲೊ ಬಿಕನಾಶಿ ೩

## ೨೧೦. ಮಣ್ಣಿಂದ ಕಾಯ ಮಣ್ಣಿಂದ

[ ಲೋಕನೀತಿ ]

ರಾಗ: ಶಂಕರಾಭರಣ ತಾಳ: ಅಟ್ಟ

ಮಣ್ಣಿಂದ ಕಾಯ ಮಣ್ಣಿಂದ ಪ.

ಮಣ್ಣಿಂದ ಸಕಲ ದೇಶಗಳೆಲ್ಲ
ಮಣ್ಣಿಂದ ಸಕಲ ವಸ್ತುಗಳೆಲ್ಲ
ಮಣ್ಣ ಬಿಟ್ಟವರಿಗೆ ಆಧಾರವಿಲ್ಲ
ಅಣ್ಣಗಳಿರೆಲ್ಲರು ಕೇಳಿರಯ್ಯ ಅ.ಪ.

ಅನ್ನ ಉದಕ ಊಟವೀಯೋದು ಮಣ್ಣು
ಬಣ್ಣ ಬಂಗಾರ ಬೊಕ್ಕಸವೆಲ್ಲ ಮಣ್ಣು
ಉನ್ನತವಾದ ಪರ್ವತವೆಲ್ಲ ಮಣ್ಣು
ಕಣ್ಣು ಮೂರುಳ್ಳನ ಕೈಲಾಸ ಮಣ್ಣು ೧

ದೇವರ ಗುಡಿ ಮಠ ಮನೆಯೆಲ್ಲ ಮಣ್ಣು
ಆವಾಗ ಆಡುವ ಮಡಕೆಯು ತಾ ಮಣ್ಣು
ಕೋವಿದರರಸರ ಕೋಟೆಗಳೆಲ್ಲ ಮಣ್ಣು
ಪಾವನ ಗಂಗೆಯ ತಡಿಯೆಲ್ಲ ಮಣ್ಣು ೨

ಭತ್ತಭರಣ ಧಾನ್ಯ ಬೆಳೆಯುವುದೆ ಮಣ್ಣು
ಸತ್ತವರನು ಹೂಳಿಸಿಡುವದೆ ಮಣ್ಣು
ಉತ್ತಮವಾದ ವೈಕುಂಠವೇ ಮಣ್ಣು
ಪುರಂದರವಿಠಲನ್ನ ಪುರವೆಲ್ಲ ಮಣ್ಣು ೩

---

ಮಣ್ಣು ಎಂದರೆ ಮೂಲ ಪ್ರಕೃತಿ. ಈ ಅರ್ಥದಲ್ಲಿ ವೈಕುಂಠವೂ ಮೂಲ ಪ್ರಕೃತಿಯೇ.

## ೨೧೧. ಮಧುಕರ ವೃತ್ತಿ ಎನ್ನದು

**[ ಶ್ರೀಹರಿ ಸ್ತುತಿ ]**

ರಾಗ: ಭೈರವಿ ತಾಳ: ಆದಿ

ಮಧುಕರ ವೃತ್ತಿ ಎನ್ನದು ಅದು ಬಲು ಚೆನ್ನದು ಪ.
ಪದುಮನಾಭನ ಪಾದಪದುಮ ಮಧುಪವೆಂಬ ಅ.ಪ.

ಕಾಲಿಗೆ ಗೆಜ್ಜೆ ಕಟ್ಟಿ ನೀಲವರ್ಣನ ಗುಣ
ಆಲಾಪಿಸುತ್ತ ಬಲು ಓಲಗ ಮಾಡುವಂಥ ೧

ರಂಗನಾಥನ ಗುಣ ಹಿಂಗದೆ ಪಾಡುತ್ತ
ಶೃಂಗಾರ ನೋಡುತ್ತ ಕಂಗಳಾನಂದವೆಂಬ ೨

ಇಂದಿರಾಪತಿ ಪುರಂದರವಿಠಲನಲ್ಲಿ
ಚೆಂದದ ಭಕ್ತಿಯಿಂದಾನಂದವ ಪಡುವಂಥ ೩

## ೨೧೨. ಮಧ್ವರಾಯರ ನೆನೆದು ಶುದ್ಧರಾಗಿರೊ

[ ವಾಯುದೇವರು-ಅವತಾರತ್ರಯ ]

ರಾಗ: ಭೂಪಾಳಿ ತಾಳ: ಆದಿ

ಮಧ್ವರಾಯರ ನೆನೆದು ಶುದ್ಧರಾಗಿರೊ
ಹೊದ್ದಿ ವೈಷ್ಣವಮತ ಭವಾಬ್ಧಿ ದಾಟಿರೊ ಪ.

ಉದಯದಲ್ಲಿ ಏಳುವಾಗ ನದಿಯ ಸ್ನಾನ ಮಾಡುವಾಗ
ಒದಗಿ ನಿತ್ಯಕರ್ಮಗಳನು ನಡೆಸುವಾಗ
ಹೃದಯದಲ್ಲಿ ಬೀಜಾಕ್ಷರ ಮಂತ್ರಗಳನು ಜಪಿಸುವಾಗ
ಸದಮಲಾನಂದ ಹನುಮನನ್ನು ನೆನೆಯಿರೊ ೧

ಕಾಮವಿಲ್ಲದ ಹರಿಯ ಪೂಜೆ ವೈಶ್ವದೇವ ಮಾಡುವಾಗ
ಪ್ರೇಮದಿಂದ ವೈಷ್ಣವೋತ್ತಮನರ್ಚಿಸುವಾಗ
ಆ ಮಹಾ ಭಕ್ಷ್ಯಭೋಜ್ಯ ಆರೋಗಣೆ ಮಾಡುವಾಗ
ನೇಮದಿಂದ ಕೌರವಾಂತಕ ಭೀಮಸೇನನ ನೆನೆಯಿರೊ ೨

ಕರಗಳನ್ನು ತೊಳೆದು ತೀರ್ಥ ತುಳಸಿದಳವ ಮೆಲ್ಲುವಾಗ
ಪರಿಪರಿಯ ಪುಷ್ಪ ವೀಳ್ಯ ಅರ್ಪಿಸುವಾಗ
ಸರುವಂತರ್ಯಾಮಿ ನಮ್ಮ ಪರಮಗುರು ಮಧ್ವಾಂತರಾತ್ಮಕ
ಸಿರಿ ಪುರಂದರವಿಠಲಗೆ ಸಮರ್ಪಣೆ ಮಾಡಿರೊ ೩

---

ಶ್ರೀ ವಾಯುದೇವರ ಅವತಾರತ್ರಯವನ್ನು (ಹನುಮ, ಭೀಮ, ಮಧ್ವಾಚಾರ್ಯ) ಒಂದೊಂದು ನುಡಿಯಲ್ಲಿ ಪ್ರಸ್ತಾಪಿಸಲಾಗಿದೆ. ಬೀಜಾಕ್ಷರ-ಜಪಮಂತ್ರದ ಮೊದಲ ಅಕ್ಷರ. ತೀರ್ಥ ತುಳಸಿದಳ ಮೆಲ್ಲುವಾಗ-ಇವು ಊಟವಾದ ಮೇಲೆ ಸ್ವೀಕರಿಸುವುದು ಮಾಧ್ವಸಂಪ್ರದಾಯ.

## ೨೧೩. ಮನವ ನಿಲಿಸುವುದು ಬಹು ಕಷ್ಟ

[ ಲೋಕನೀತಿ ]

ರಾಗ: ನಾದನಾಮಕ್ರಿಯೆ ತಾಳ: ಆದಿ

ಮನವ ನಿಲಿಸುವುದು ಬಹು ಕಷ್ಟ ಹರಿದಾಡುವಂಥ ಪ.

ಕಾಶಿಗ್ಹೋಗಲುಬಹುದು ದೇಶ ತಿರುಗಲುಬಹುದು
ಆಸೆ ಸುಟ್ಟಂತೆ ಇರಬಹುದು
ಹರಿದಾಡುವಂಥ- ೧

ಜಪವ ಮಾಡಲುಬಹುದು ತಪವ ಮಾಡಲುಬಹುದು
ಉಪವಾಸ ವ್ರತದಲ್ಲಿರಬಹುದು
ಹರಿದಾಡುವಂಥ- ೨

ಸ್ನಾನ ಮಾಡಲುಬಹುದು ಮೌನ ಮಾಡಲುಬಹುದು
ಧ್ಯಾನದಿ ಪುರಂದರವಿಠಲನ ಚರಣದಲಿ
ಹರಿದಾಡುವಂಥ- ೩

## ೨೧೪. ಮನವ ಶೋಧಿಸಬೇಕು ನಿಚ್ಚ

[ಲೋಕನೀತಿ]

ರಾಗ: ನಾದನಾಮಕ್ರಿಯೆ ತಾಳ: ಛಾಪು

ಮನವ ಶೋಧಿಸಬೇಕು ನಿಚ್ಚ ದಿನ
ದಿನ ಮಾಡುವ ಪಾಪ ಪುಣ್ಯದ ವೆಚ್ಚ ಪ.

ಧರ್ಮ ಅಧರ್ಮ ವಿಂಗಡಿಸಿ ಅ-
ಧರ್ಮದ ನರಗಳ ಬೇರ ಕತ್ತರಿಸಿ
ನಿರ್ಮಲಾಚಾರದಿ ಚರಿಸಿ ಪರ
ಬೊಮ್ಮ ಮೂರುತಿ ಪಾದಕಮಲವ ಭಜಿಸಿ ೧

ತನುವ ಖಂಡಿಸಿ ಒಮ್ಮೆ ಮಾಣೋ ನಿನ್ನ
ಮನವ ದಂಡಿಸಿ ಪರಮಾತ್ಮನ್ನ ಕಾಣೋ
ಕೊನೆಗೆ ನಿನ್ನೊಳು ನೀ ಜಾಣೊ ಮುಕ್ತಿ
ನಿನಗೆ ದೂರಿಲ್ಲವು ಒಂದೇ ಗೇಣೊ ೨

ಆತನ ಭಕುತರಿಗೆ ಕೇಡಿಲ್ಲ ಅವ
ಪಾತಕ ಪತಿತ ಸಂಗವ ಮಾಡುವನಲ್ಲ
ನೀತಿವಂತರು ಕೇಳಿರೆಲ್ಲ ನಮ-
ಗಾತನೆ ಗತಿ ಈವ ಪುರಂದರವಿಠಲ ೩

## ೨೧೫. ಮನ ಶುದ್ಧಿಯಿಲ್ಲದವಗೆ ಮಂತ್ರದ ಫಲವೇನು

[ ಲೋಕನೀತಿ ]

ಮನ ಶುದ್ಧಿಯಿಲ್ಲದವಗೆ ಮಂತ್ರದ ಫಲವೇನು
ತನು ಶುದ್ಧಿಯಿಲ್ಲದವಗೆ ತೀರ್ಥದ ಫಲವೇನು
ಮಿಂದಲ್ಲಿ ಫಲವೇನು ಮೀನುಮೊಸಳೆಯಂತೆ
ನಿಂದಲ್ಲಿ ಫಲವೇನು ಶ್ರೀಶೈಲದ ಕಾಗೆಯಂತೆ
ಹೊರಗೆ ಮಿಂದು ಒಳಗೆ ಮೀಯದವರ ಕಂಡು
ಬೆರಗಾಗಿ ನಗುತಿದ್ದ ಪುರಂದರವಿಠಲ

---

ಶ್ರೀಶೈಲದ ಕಾಗೆಯಂತೆ-ಇದೊಂದು ಬಳಕೆಯಲ್ಲಿರುವ ನಾಣ್ಣುಡಿಯೆಂದು ಕಾಣುತ್ತದೆ. ಶ್ರೀಶೈಲದ ಗುಡಿಯ ಮೇಲ ಕಾಗೆಯೊಂದು ನಿಂತಿದೆ. ಭಕ್ತಿಯಿಂದಲ್ಲ. ಆಹಾರವೇನಾದರೂ ಸಿಕ್ಕೀತೆ-ಎಂದು.

## ೨೧೬. ಮನುಜ ಶರೀರವಿದೇನು ಸುಖ

[ ಲೋಕನೀತಿ ]

ರಾಗ: ಶಂಕರಾಭರಣ — ತಾಳ: ಆದಿ

ಮನುಜ ಶರೀರವಿದೇನು ಸುಖ ಇದ
ನೆನೆದರೆ ಘೋರವಿದೇನು ಸುಖ ಪ.

ಜನನ ಮರಣ ಮಲದ ಕೂಪದಲ್ಲಿದ್ದು
ಅನುಭವಿಸುವುದು ಇದೇನು ಸುಖ
ತನುವಿದ್ದಾಗಲೆ ಹೃದಯದ ಶೌಚದ
ಸ್ತನಗಳನುಂಬುವುದೇನು ಸುಖ ೧

ದಿನ ದಿನ ಹಸಿವು ತೃಷೆ ಘನ ಘನ ರೋಗದೊ-
ಳನುಭವಿಸುವುದೇನು ಸುಖ
ನೆನೆಯಲನಿತ್ಯ ನೀರ್ಗುಳ್ಳೆಯಂತಿರುತಿಪ್ಪ
ತನು ಮಲ ಭಾಂಡವಿದೇನು ಸುಖ ೨

ಪರಿ ಪರಿ ವಿಧದಲಿ ಪಾಪವ ಗಳಿಸುತ
ನರಕಕೆ ಬೀಳುವದೇನು ಸುಖ
ಪುರಂದರವಿಠಲನ ಮನದಿ ನೆನೆದು ಸ-
ದ್ಧರ್ಮದಿ ನಡೆದರೆ ಆಗ ಸುಖ ೩

## ೨೧೭. ಮನೆಯೊಳಗಾಡೊ ಗೋವಿಂದ

[ ಶ್ರೀಕೃಷ್ಣಲೀಲೆ ]

ರಾಗ: ಪಂತುವರಾಳಿ ತಾಳ: ಅಟ್ಟ

ಮನೆಯೊಳಗಾಡೊ ಗೋವಿಂದ ನೆರೆ-
ಮನೆಗಳಿಗೇಕೆ ಪೋಗುವೆಯೊ ಮುಕುಂದ ಪ.

ನೊಸಲಿಗೆ ತಿಲಕವನಿಡುವೆ ಅಚ್ಚ
ಹೊಸ ಬೆಣ್ಣೆಯನಿಟ್ಟು ಕಜ್ಜಾಯ ಕೊಡುವೆ
ಹೊಸತಾಭರಣವನಿಡುವೆ ಹೊನ್ನ
ಮಿಸುಣಿ ನಿನ್ನನು ನೋಡಿ ಸಂತೋಷಪಡುವೆ ೧

ಅಣ್ಣಯ್ಯ ಬಲರಾಮ ಸಹಿತ ನೀ-
ನಲ್ಲಲ್ಲಿ ತಿರುಗಾಡಿ ಬಾಹೋದೆ ವಿಹಿತ
ಹೆಣ್ಣುಗಳ್ಯಾಕೋ ಸಂಗಾತ ಎನ್ನ
ಬಿನ್ನಪವನು ಪರಿಪಾಲಿಸೊ ದಾತ ೨

ಚೋರನೆನಿಸಿಕೊಳಲೇಕೆ ಶ್ರೀಮ-
ನ್ನಾರಾಯಣನಿಗೆ ದೂರುಗಳೇಕೆ
ವಾರಿಜಾಕ್ಷೇರ ಕೂಟವೇಕೆ ಪುರಂ-
ದರವಿಠಲ ವಾಕು ಕೇಳೆಚ್ಚರಿಕೆ ೩

## ೨೧೮. ಮಲವ ತೊಳೆಯಬಲ್ಲರಲ್ಲದೆ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಕಾಪಿ [ಸುವ್ವಿಮಟ್ಟು] ತಾಳ: ಏಕ

ಮಲವ ತೊಳೆಯಬಲ್ಲರಲ್ಲದೆ
ಮನವ ತೊಳೆಯಬಲ್ಲರೆ ಪ.

ಹಲವು ತೀರ್ಥಂಗಳಲಿ ಮುಳುಗಿ
ಹಲುಬಿದರೆ ಫಲವೇನು ಅ.ಪ.

ಭೋಗ ವಿಷಯ ಫಲವನುಂಡು ರಾಗ ಲೋಭದಿಂದ ಮತ್ತ-
ನಾಗಿ ಮೆರೆಯುತಿರೆ ಅವನ ಭಾಗ್ಯವಂತನೆಂಬರೆ

ಯೋಗಿಯಂತೆ ಜನರು ಮೆಚ್ಚುವಂತೆ ಹೋಗಿ ನೀರಿನಲ್ಲಿ
ಕಾಗೆಯಂತೆ ಮುಳುಗೆ ಮಾಘಸ್ನಾನ ಫಲವು ಬಾಹೋದೆ ೧

ಪರರ ಕೇಡು ಬಯಸಿ ಗುರುಹಿರಿಯರನ್ನು ನಿಂದಿಸುತ್ತ
ಪರಮಸೌಖ್ಯವೆಂದು ಪರಸ್ತ್ರೀಯರನ್ನು ಬಯಸುತ್ತ
ಪರಮನಿಷ್ಠ ಮೌನಿಯಂತೆ ಧರೆಯ ಮೇಲೆ ಡಂಭ ತೋರಿ
ಹರಿವ ನೀರಿನ ತೀರದಿ ಕುಳಿತರೇನು ಬಕ ಧ್ಯಾನದಿ ೨

ಕಾಸುವೀಸಕ್ಕಾಗಿ ಹರಿಯದಾಸನೆಂದು ತಿರುಗಿ ತಿರುಗಿ
ದೇಶದೇಶಗಳಲಿ ತೊಳಲಿ ಕಾಶಿಯಾತ್ರೆ ಪೋಗಲು
ಆಶಾಪಾಶ ಬಿಡದೆ ಮನಸು ಹೇಸಿ ವಿಷಯ ಬಯಸುವಂಥ
ವೇಷಧಾರಿಗಳಿಗೆ ಕಾಶಿಯಾತ್ರೆ ಫಲವು ಬಾಹೋದೆ ೩

ತಂದೆತಾಯಿ ತಿರಿದು ತಿನಲು ಒಂದು ದಿನ ಕೇಳಲಿಲ್ಲ
ಮಂದಗಮನೆರೊಡನೆ ಆನಂದದಿಂದಲಿರುವನು
ತಂದೆ ಸತ್ತಮೇಲೆ ನೂರುಮಂದಿ ವಿಪ್ರರಿಗುಣಿಸಿ ತಮ್ಮ
ತಂದೆ ತೃಪ್ತನಾದನೆಂಬರು ಮಂದಮತಿಯ ಜನಗಳು ೪

ಏನು ಓದಲೇನು ಫಲ ಏನು ಕೇಳಲೇನು ಫಲ
ಜ್ಞಾನದಿಂದ ಅಚ್ಯುತನ ಧ್ಯಾನವಿಲ್ಲದವರಿಗೆ
ಮೌನ ನೇಮ ನಿಷ್ಠ ಯಾಕೆ ಹೀನಚಿತ್ತನಾದ ಮೇಲೆ
ಶ್ರೀನಿವಾಸ ಪುರಂದರವಿಠಲನು ಮೆಚ್ಚುವನೆ ಮರುಳೆ ೫

## ೨೧೯. ಮಾಡು ಸಿಕ್ಕದಲ್ಲಾ

[ ಲೋಕನೀತಿ-ಆಧ್ಯಾತ್ಮಿಕ ]

**ರಾಗ: ಪಂತುವರಾಳಿ** **ತಾಳ: ಆದಿ**

ಮಾಡು ಸಿಕ್ಕದಲ್ಲಾ
ಮಾಡಿನ ಗೂಡು ಸಿಕ್ಕದಲ್ಲಾ
ಜೋಡು ಹೆಂಡಿರಂಜಿ
ಓಡಿಹೋಗುವಾಗ
ಗೋಡೆ ಬಿದ್ದು ಬಯಲಾಯಿತಲ್ಲ ಪ.

ಎಚ್ಚರಗೊಳಲಿಲ್ಲಾ ಮನವೇ
ಹುಚ್ಚನಾದೆನಲ್ಲಾ
ಅಚ್ಚಿನೊಳಗೆ ಮೆಚ್ಚು
ಮೆಚ್ಚಿನೊಳಗೆ ಅಚ್ಚು
ಕಿಚ್ಚೆದ್ದು ಹೋಯಿತಲ್ಲಾ ೧

ಮುಪ್ಪು ಬಂದಿತಲ್ಲಾ ಪಾಯಸ
ತಪ್ಪದೆ ಉಣಲಿಲ್ಲಾ
ತುಪ್ಪದ ಬಿಂದಿಗೆ
ತಿಪ್ಪೆಯ ಮೇಲೆ
ಧೊಪ್ಪನೆ ಬಿತ್ತಲ್ಲಾ ೨

ಯೋಗವು ಬಂತಲ್ಲಾ ಬದುಕು ವಿ-
ಭಾಗವಾಯಿತಲ್ಲಾ
ಭೋಗಿಶಯನ ಶ್ರೀ
ಪುರಂದರವಿಠಲನ
ಆಗ ನೆನೆಯಲಿಲ್ಲಾ

---

ಮಾಡಿನ ಗೂಡು-ಭಕ್ತಿಸಾಧನೆಯ ಗೂಡು-ಎಂದರೆ ಭಗವಂತ. ಜೋಡು ಹೆಂಡಿರು-ಅನ್ಯಥಾಜ್ಞಾನ ಮತ್ತು ವಿಸ್ಮರಣೆ. ಹುಚ್ಚ-ಸಾದಾಶಬ್ದವಾದರೂ, ಅದರಲ್ಲಿ ಸ್ವಾತಂತ್ರ್ಯ, ಐಕ್ಯ, ಕರ್ತೃತ್ವ ಮತ್ತು ಭೋಕ್ತೃತ್ವ ಎಂಬ ಭ್ರಮೆಗಳು ಅಡಕವಾಗಿದೆ. ಅಚ್ಚಿನೊಳಗೆ ಮೆಚ್ಚು-ಸಂಸಾರದಲ್ಲಿ ಮೋಹ. ತುಪ್ಪದ ಬಿಂದಿಗೆ-ಸಾಧನ ಶರೀರ.

## ೨೨೦. ಮಾತಿಗೆ ಬಾರದ ವಸ್ತು ಬಹಳಿದ್ದರೇನು

[ ಲೋಕನೀತಿ ]

ರಾಗ: ಕಾಂಬೋದಿ                ತಾಳ: ಝಂಪೆ

ಮಾತಿಗೆ ಬಾರದ ವಸ್ತು ಬಹಳಿದ್ದರೇನು
ಹೋತಿನ ಕೊರಳೊಳಗೆ ಮೊಲೆ ಇದ್ದರೇನು ಪ.

ತಾನು ಉಣ್ಣದ ದ್ರವ್ಯ ತಾಳ್ಯುದ್ದ ಇದ್ದರೇನು
ದಾನವಿಲ್ಲದ ಮನೆಯು ದೊಡ್ಡದಾದರೇನು
ಹೀನ ಗುಣವುಳ್ಳವಗೆ ಹಿರಿಯತನ ಬಂದರೇನು
ಶ್ವಾನನ ಮೊಲೆಯೊಳಗೆ ಹಾಲಿದ್ದರೇನು ೧

ಆದರಿಲ್ಲದ ಊಟ ಅಮೃತಾನ್ನವಿದ್ದೇನು
ವಾದಿಸುವ ಸತಿಸುತರು ಇದ್ದು ಫಲವೇನು
ಕ್ರೋಧವನು ಮಾಡುವ ಸಹೋದರರು ಇದ್ದರೇನು
ಮಾದಿಗರ ಮನೆಯಲ್ಲಿ ಮದುವ್ಯಾದರೇನು ೨

ಹೋಗದೂರಿನ ದಾರಿ ಕೇಳಿ ಮಾಡುವುದೇನು
ಯೋಗಿಯ ಕೂಡ ಪರಿಹಾಸ್ಯವೇನು
ರಾಗದಲಿ ಪುರಂದರವಿಠಲನ್ನ ನೆನೆಯದವ
ಯೋಗಿಯಾದರೇನವನು ಭೋಗಿಯಾದರೇನು ೩

## ೨೨೧. ಮಾನಭಂಗವ ಮಾಡಿ

[ ಲೋಕನೀತಿ ]

ರಾಗ: ಕಾಂಬೋದಿ ತಾಳ: ಝಂಪೆ

ಮಾನಭಂಗವ ಮಾಡಿ ಮತ್ತೆ ಉಪಚಾರಗಳ
ಏನು ಮಾಡಿದರಲ್ಲಿ ಇರಬಾರದಯ್ಯ ಪ.

ಕುಂದುಗಳನೆತ್ತಿ ಕುಚೋದ್ಯ ಕುಮಂತ್ರಗಳ-
ನೊಂದೊಂದು ವರ್ಣಗಳನೆತ್ತಿ ಜರೆದು
ಮುಂದೆ ಭಂಗಿಸಿ ಹಿಂದೆ ಉಂಬಳಿಯ ನೀಡುವುದು
ಮುಂದಲೆಯ ಕೊಯ್ದು ಮುಡಿಗೆ ಹುವ್ವ ಮುಡಿಸಿದಂತೆ ೧

ನಗೆಗೇಡು ಮಾಡಿ ನಾಲ್ವರ ಮುಂದೆ ಮೊಗಗೆಡಿಸಿ
ಮಗುಳೆ ಬಾರೆಂದು ಮನ್ನಿಸಿ ಲಾಲಿಸಿ
ಮಿಗಿಲಾದ ವಸ್ತ್ರಗಳ ಭೂಷಣಂಗಳನೀಯೆ
ತೊಗಲ ಮೂಗು ಹರಿದು ಚಿನ್ನದ ಮೂಗನಿತ್ತಂತೆ ೨

ಅರ್ಥ ಹೋದರೆ ಪ್ರಾಣ, ಪ್ರಾಣ ಹೋದರೆ ಮಾನ
ವ್ಯರ್ಥವಾಗದ ಹಾಗೆ ಕಾಯಬೇಕು
ಕರ್ತ ಶ್ರೀ ಪುರಂದರವಿಟ್ಠಲರಾಯನ
ಚಿತ್ತದಲಿ ನೆನೆನೆನೆದು ಸುಖಿಯಾಗಬೇಕು ೩

---

ತೀರ ಲೌಕಿಕ ವಿಚಾರವುಳ್ಳ ಕೀರ್ತನೆ. ಅಪಮಾನವಾದರೂ ಆತ್ಮಗೌರವವನ್ನೂ ಎಂತಿದ್ದರೂ ಕಾಯ್ದುಕೊಳ್ಳಬೇಕೆಂಬ ಸೂಚನೆ ಇಲ್ಲಿದೆ. ಹಣ ಹೋಗುವ ಪ್ರಸಂಗ ಬಂದರೆ ಪ್ರಾಣ ಉಳಿಯಬೇಕು. ಪ್ರಾಣವನ್ನೇ ಕಳೆದುಕೊಳ್ಳುವ ಪರಿಸ್ಥಿತಿಯೊದಗಿದರೆ ಮಾನ ಉಳಿಯಬೇಕು, ಎನ್ನುತ್ತಾರೆ ದಾಸರು.

## ೨೨೨. ಮಾನವಜನ್ಮ ದೊಡ್ಡದು

[ಲೋಕನೀತಿ]

ರಾಗ: ಪಂತುವರಾಳಿ ತಾಳ: ಅಟ್ಟ

ಮಾನವಜನ್ಮ ದೊಡ್ಡದು ಇದ
ಹಾನಿ ಮಾಡಲಿಬೇಡಿ ಹುಚ್ಚಪ್ಪಗಳಿರಾ ಪ.

ಕಣ್ಣು ಕೈ ಕಾಲ್ ಕಿವಿ ನಾಲಿಗೆ ಇರಲಿಕ್ಕೆ
ಮಣ್ಣು ಮುಕ್ಕಿ ಮರುಳಾಗುವರೆ
ಹೆಣ್ಣು ಮಣ್ಣಿಗಾಗಿ ಹರಿಯ ನಾಮಾಮೃತ
ಉಣ್ಣದೆ ಉಪವಾಸ ಇರುವರೆ ಖೋಡಿ ೧

ಕಾಲನ ದೂತರು ಕಾಲ್‌ಪಿಡಿದೆಳೆವಾಗ
ತಾಳು ತಾಳೆಂದರೆ ತಾಳುವರೆ
ದಾಳಿ ಬಾರದ ಮುನ್ನ ಧರ್ಮವ ಗಳಿಸಿರೊ
ಸುಳ್ಳಿನ ಸಂಸಾರ ಸುಳಿಗೆ ಸಿಕ್ಕಲುಬೇಡಿ ೨

ಏನು ಕಾರಣ ಯದುಪತಿಯನು ಮರೆತಿರಿ
ಧನ ಧಾನ್ಯ ಸತಿಸುತರು ಕಾಯುವರೆ
ಇನ್ನಾದರು ಏಕೋಭಾವದಿ ಭಜಿಸಿರೊ
ಚೆನ್ನ ಶ್ರೀ ಪುರಂದರವಿಟ್ಠಲರಾಯನ ೩

## ೨೨೩. ಮಾನಹೀನನಿಗೆ ಅಭಿಮಾನವೇಕೆ

[ ಲೋಕನೀತಿ ]

ರಾಗ: ಕಾಂಬೋದಿ ತಾಳ: ಅಟ್ಟ

ಮಾನಹೀನನಿಗೆ ಅಭಿಮಾನವೇಕೆ ಪ.

ಜ್ಞಾನವಿಲ್ಲದವಂಗೆ ಗುರುಬೋಧೆಯೇಕೆ ಅ.ಪ.

ಕಾಡೊಳಗೆ ತಿರುಗುವಗೆ ಕನಕಭೂಷಣವೇಕೆ
ಓಡೊಳಗೆ ತಿಂಬುವಗೆ ಹರಿವಾಣವೇಕೆ
ಬೇಡಿದರೆ ಕೊಡದಿಹಗೆ ಕಡು ಬಿಂಕತನವೇಕೆ
ಪಾಡಲರಿಯದವಂಗೆ ಪ್ರೌಢತನವೇಕೆ ೧

ಅಂಬಲಿಯನುಂಬುವಗೆ ಅಮೃತಾನ್ನ ತಾನೇಕೆ
ಕಂಬಳಿಯ ಹೊದೆವವಗೆ ಮಡಿಯೇತಕೆ
ಡೊಂಬಾಟವಿಕ್ಕುವಗೆ ಗಂಭೀರತನವೇಕೆ
ಹಂಬಲನು ಬಿಡದವಗೆ ಹರಿನಾಮವೇಕೆ ೨

ಭೂಸುರರ ಕೊಲುವವಗೆ ಭೂರಿ ಧರ್ಮಗಳೇಕೆ
ಭಾಷೆಗೆಟ್ಟವನಿಗೆ ನಂಬುಗೆಯದೇತಕೆ
ಕ್ಲೇಶ ಒಡಲೊಳಗಿರಲು ತೀರ್ಥಯಾತ್ರೆಗಳೇಕೆ
ಆಸೆ ಬಿಡದಿದ್ದವಗೆ ಸನ್ಯಾಸವೇಕೆ ೩

ಮಿತಿ ಮೀರಿ ನಡೆವವಗೆ ವ್ರತ ನೇಮಗಳು ಏಕೆ
ಸತಿಗೆ ಅಳುಕುವನ ಸಾಹಸವು ಏಕೆ
ಮತಿ ಶುದ್ಧಿಯಿಲ್ಲದ ಮಂತ್ರ ತಂತ್ರಗಳೇಕೆ
ಗತಿಯ ಚಿಂತಿಸದವನ ವಿಪ್ರತ್ವವೇಕೆ ೪

ಸಾಮಾನ್ಯನಿಗೆ ಸಾರ್ವಭೌಮ ಪದವಿಯದೇಕೆ
ಪ್ರೇಮವಿಲ್ಲದ ಬಂಧುಜನವೇತಕೆ
ಸ್ವಾಮಿ ಶ್ರೀ ಪುರಂದರವಿಟ್ಠಲನ ನೆನೆಯದಿಹ
ತಾಮಸಾಧಮನಿಗೆ ಕೈವಲ್ಯವೇಕೆ ೫

## ೨೨೪. ಮುತ್ತು ಕೊಳ್ಳಿರೋ ಜನರು

[ ಲೋಕನೀತಿ-ಚತುರೋಕ್ತಿ ]

ರಾಗ: ಪಂತುವರಾಳಿ ತಾಳ: ಆದಿ

ಮುತ್ತು ಕೊಳ್ಳಿರೋ ಜನರು
ಮುತ್ತು ಕೊಳ್ಳಿರೋ ಪ.

ಮುತ್ತು ಬಂದಿದೆ ಕೊಳ್ಳಿ
ಸಚ್ಚಿದಾನಂದ ದಿವ್ಯ ಅ.ಪ.

ಜ್ಞಾನವೆಂಬೋ ದಾರದಲಿ
ಪೋಣಿಸಿದ ದಿವ್ಯ ಮುತ್ತು
ಜ್ಞಾನದಿಂದ ಕೊಂಬುದಿದನು
ದೀನರಾದ ಭಕ್ತ ಜನರು ೧

ಕಟ್ಟಲಾಗದು ಮೂಗಿನಲಿ
ಇಟ್ಟು ಮೆರೆಯಲಾಗದಿದು
ಭ್ರಷ್ಟ ಜನಕೆ ಕಾಣಿಸದಂಥ
ಕೃಷ್ಣನೆಂಬೊ ಅಣಿಮುತ್ತು ೨

ಹಿಡಿಯಲಿಕ್ಕೆ ನಿಲುಕದದು
ಕಡೆ ಕಾಣದೆಂದು ಬೆಲೆಯು
ಪೊಡವಿಗೆಲ್ಲ ಪುರಂದರವಿಠಲ
ಒಡೆಯನೆಂಬೊ ದಿವ್ಯ ಮುತ್ತು ೩

## ೨೨೫. ಮುತ್ತೈದೆಯಾಗಿರಬೇಕು ಮುದದಿಂದಲಿ

[ ಲೋಕನೀತಿ-ಚತುರೋಕ್ತಿ ]

**ರಾಗ: ಕಾಂಬೋದಿ** **ತಾಳ: ಅಟ್ಟ**

ಮುತ್ತೈದೆಯಾಗಿರಬೇಕು ಮುದದಿಂದಲಿ ಪ.

ಹತ್ತುನೂರು ನಾಮದೊಡೆಯ ಹರಿ ನಮ್ಮ ಪತಿಯೆಂದು ಅ.ಪ.

ಗುರುವಿಂದ ಶಾಸ್ತ್ರವನು ಓದುವುದೆ ಮಾಂಗಲ್ಯ
ವೈರಾಗ್ಯವೆಂಬುದೆ ಒಪ್ಪುವ ಮೂಗುತಿ
ತಾರತಮ್ಯಜ್ಞಾನ ತಾಯಿತ್ತು ಮುತ್ತು ಸರ
ಕರುಣಾರಸವೆಂಬಂಥ ಕಟ್ಟಾಣಿ ಕಟ್ಟಿಕೊಂಡು ೧

ಹರಿಕಥೆಯ ಕೇಳುವುದು ಕಿವಿಗೆ ಮುತ್ತಿನ ಓಲೆ
ನಿರುತ ಸತ್ಕರ್ಮವು ನಿಜ ಕಾಂತಿಯು
ಪರಮ ಭಕ್ತರ ಪಾದರಜ ಹೆರಳು ಭಂಗಾರ
ಗುರು ಭಕುತಿಯೆಂಬಂಥ ಗಂಧ ಕುಂಕುಮ ಧರಿಸಿ ೨

ಪೊಡವಿಯೊಳು ಪರಹಿತದ ಪಟ್ಟವಾಳಿಯನುಟ್ಟು
ಕೊಡುವ ಧರ್ಮವೆಂಬ ಕುಬುಸ ತೊಟ್ಟು
ಬಿಡದೆ ಎನ್ನೊಡೆಯ ಶ್ರೀ ಪುರಂದರವಿಟ್ಠಲನ
ದೃಢ ಭಕುತಿ ಎಂಬಂಥ ಕಡಗ ಬಳೆ ಇಟ್ಟುಕೊಂಡು ೩

---

ಹತ್ತುನೂರು ನಾಮ-ವಿಷ್ಣುಸಹಸ್ರನಾಮ. ತಾಯಿತ್ತು-ತಾಯಿತ. ಕಟ್ಟಾಣಿ-ಮುತ್ತಿನ ಸರ. ಪಟ್ಟವಾಳಿ-ರೇಷ್ಮೆ ಸೀರೆ.

## ೨೨೬. ಮುಪ್ಪಿನ ಗಂಡನ ಒಲ್ಲೆನೆ

[ ಲೋಕನೀತಿ-ವಿಡಂಬನೆ ]

ರಾಗ: ಆನಂದಭೈರವಿ ತಾಳ: ಅಟ್ಟ

ಮುಪ್ಪಿನ ಗಂಡನ ಒಲ್ಲೆನೆ
ತಪ್ಪದೆ ಪಡಿಪಾಟ ಪಡಲಾರೆನವ್ವ ಪ.

ಉದಯದಲೇಳಬೇಕು ಉದಕ ಕಾಸಲು ಬೇಕು
ಹದನಾಗಿ ಬಜೆಯನು ಅರೆದಿಡಬೇಕು
ಬದಿಯಲಿ ಎಲೆಅಡಿಕೆ ಕುಟ್ಟಿಡಬೇಕು
ಬಿದಿರಕೋಲು ತಂದು ಮುಂದಿಡಬೇಕು ೧

ಪಿತ್ತವ್ರೋಕರಿಕೆ ಮುದುಕರಿಗೆ ವಿಶೇಷವು
ಹೊತ್ತುಹೊತ್ತಿಗೆ ಜೊಲ್ಲ ಚೆಲ್ಲಬೇಕು
ಮೆತ್ತನವೆರಡು ಮುದ್ದಿಯ ಮಾಡಲು ಬೇಕು
ಒತ್ತೊತ್ತಿ ಕೂಗಿ ಕರೆಯಲುಬೇಕು ೨

ಜಾಡಿ ಹಾಸಬೇಕು ನೋಡಿ ಬಾಡಬೇಕು
ಅಡಿಗಡಿಗೆ ಕಣ್ಣೀರ ಸುರಿಸಬೇಕು
ಒಡೆಯ ಶ್ರೀಪುರಂದರವಿಠಲನ ನೆನೆಯುತ
ಮಿಡಿಗೊಂಡು ಮೂಲೆಗೆ ಒರಗಬೇಕು ೩

## ೨೨೭. ಮುಯ್ಯಕ್ಕೆ ಮುಯ್ಯ ತೀರಿತು

ರಾಗ: ಪಂತುವರಾಳಿ ತಾಳ: ಛಾಪು

ಮುಯ್ಯಕ್ಕೆ ಮುಯ್ಯ ತೀರಿತು ಜಗ-
ದಯ್ಯ ವಿಜಯ ಸಹಾಯ ಪಂಢರಿರಾಯ ಪ.

ಸಣ್ಣವನೆಂದು ನಾ ನೀರು ತಾರೆಂದರೆ
ಬೆಣ್ಣೆಗಳ್ಳ ಕೃಷ್ಣ ಮರುಳು ಮಾಡಿ
ಚೆನ್ನದ ಗಿಂಡಿಲಿ ನೀರು ತಂದಿತ್ತರೆ
ಕಣ್ಣು ಕಾಣದೆ ನಾ ಕೊಣೆದೆ ಪಂಢರಿರಾಯ ೧

ಎನ್ನ ಹೆಸರ ಹೇಳಿ ಸೂಳೆಗೆ ಕಂಕಣ-
ವನ್ನು ನೀನೆ ಕೊಟ್ಟು ನಿಜವ ಮಾಡಿ
ಎನ್ನ ಹಿಡಿಸಿ ಪರಮ ಭಂಡನ್ನ ಮಾಡಿ
ನಿನ್ನ ಮುಯ್ಯಕ್ಕೆ ಮುಯ್ಯ ತೋರಿದೆ ಪಂಢರಿರಾಯ ೨

ಭಕ್ತವತ್ಸಲನೆಂಬ ಬಿರುದು ಬೇಕಾದರೆ
ಭಕ್ತರಾಧೀನರಾಗಿರಬೇಡವೆ
ಯುಕ್ತಿಯಲಿ ನಿನ್ನಂಥ ದೇವರ ನಾ ಕಾಣೆ
ಮುಕ್ತೀಶ ಪುರಂದರವಿಠಲ ಪಂಢರಿರಾಯ ೩

## ೨೨೮. ಮುಸುರೆ ತೊಳೆಯಬೇಕು

[ ಲೋಕನೀತಿ-ಚತುರೋಕ್ತಿ ]

ರಾಗ: ಧನ್ಯಾಸಿ ತಾಳ: ಮಟ್ಟ

ಮುಸುರೆ ತೊಳೆಯಬೇಕು ಈ ಮನಸಿನ
ಮುಸುರೆ ತೊಳೆಯಬೇಕು ಪ

ಮುಸುರೆ ತೊಳೆಯಬೇಕು ಗುಸುಗುಸು ಬಿಡಬೇಕು
ಈಶ ಪ್ರೇರಣೆಯೆಂಬೊ ಹಸಿಯ ಹುಲ್ಲನು ಹಾಕಿ ಅ.ಪ.

ಅಷ್ಟ ಮದದಿಂದ ಸುಟ್ಟ ಈ ಪಾತ್ರೆಯ
ವಿಷ್ಣುನಾಮವೆಂಬೊ ಕೃಷ್ಣಾನದಿಯಲ್ಲಿ ೧

ಕಾಮಕ್ರೋಧದಿಂದ ಬೆಂದ ಈ ಪಾತ್ರೆಯ
ರಾಮಕೃಷ್ಣರೆಂಬೊ ಹೇಮಾನದಿಯಲ್ಲಿ ೨

ವಿಷವೆಂಬೊ ಪಾತ್ರೆಯ ಮುಸುರೆ ತೊಳೆದಿಟ್ಟು
ಬಿಸಜಾಕ್ಷ ಪುರಂದರವಿಠಲಗರ್ಪಿಸೊ ನಿತ್ಯ ೩

## ೨೨೯. ಮೂಢ ಬಲ್ಲನೆ ಜ್ಞಾನ ದೃಢಭಕ್ತಿಯ

[ ಲೋಕನೀತಿ ]

ರಾಗ: ಮುಖಾರಿ ತಾಳ: ಝಂಪೆ

ಮೂಢ ಬಲ್ಲನೆ ಜ್ಞಾನ ದೃಢಭಕ್ತಿಯ
ಕಾಡ ಕಪಿ ಬಲ್ಲುದೇ ಮಾಣಿಕದ ಬೆಲೆಯ ಪ

ಕೋಣ ಬಲ್ಲುದೆ ವೀಣೆ ನುಡಿಯುವ ಸುನಾದವನು
ಗೋಣಿ ಬಲ್ಲುದೆ ಎತ್ತಿನ ದುಃಖವ
ಪ್ರಾಣ ತೊಲಗಿದ ದೇಹ ಕಿಚ್ಚಿಂದು ಬಲ್ಲುದೆ
ಕ್ಷೋಣಿಯೊಳು ಕುರುಡ ಬಲ್ಲನೆ ಹಗಲು ಇರುಳ ೧

ಬಧಿರ ಬಲ್ಲನೆ ಸುಸಂಗೀತ ಸ್ವಾರಸ್ಯವನು
ಚದುರನುಡಿಯಾಡಬಲ್ಲನೆ ಮೂಕನು
ಕ್ಷುಧೆ ಇಲ್ಲದಾ ಮನುಜ ಅಮೃತಾನ್ನ ಸವಿದಪನೆ
ಮಧುರ ವಚನವ ಬಲ್ಲನೆ ದುಷ್ಟ ಮನುಜ ೨

ಅಜ ಬರೆದ ಬರಹವನು ತೊಳೆಯಬಲ್ಲನೆ ಜಾಣ
ನಿಜಭಕ್ತಿ ಮುಕ್ತಿ ಸುಖವನು ಕೊಡುವ
ಭುಜಗೇಂದ್ರಶಯನ ಸಿರಿಪುರಂದರವಿಟ್ಠಲನ
ಭಜಿಸಲರಿಯದವ ಬಲ್ಲನೆ ಮುಕ್ತಿ ಸುಖವ ೩

---

ಗೋಣಿ-ಭಾರ ಬಧಿರ-ಕಿವುಡ

## ೨೩೦. ಮೂರುತಿಯನು ನಿಲ್ಲಿಸೊ

[ ಶ್ರೀಹರಿ ಸ್ತುತಿ ]

ರಾಗ: ಕಮಾಚು ತಾಳ: ಆದಿ

ಮೂರುತಿಯನು ನಿಲ್ಲಿಸೊ ಮಾಧವ ನಿನ್ನ ಪ.

ಎಳೆ ತುಳಸಿಯ ವನಮಾಲೆಯು ಕೊರಳೊಳು
ಪೊಳೆವ ಪೀತಾಂಬರದಿಂದಲೊಪ್ಪುವ ನಿನ್ನ ೧

ಮುತ್ತಿನ ಸರ ನವರತ್ನದುಂಗುರವಿಟ್ಟು
ಮತ್ತೆ ಶ್ರೀ ಲಕ್ಷ್ಮಿಯು ಉರದೊಳೊಪ್ಪುವ ನಿನ್ನ ೨

ಭಕ್ತ ಕಲ್ಪತರು ಭಾಗ್ಯದ ಸುರಧೇನು
ಮುಕ್ತಿದಾಯಕ ಪುರಂದರವಿಠಲ ನಿನ್ನ ೩

## ೨೩೧. ಮೂರ್ಖರಾದರು ಜನರು ಲೋಕದೊಳಗೆ

[ ಲೋಕನೀತಿ-ಬೋಧೆ ]

ರಾಗ: ಮುಖಾರಿ ತಾಳ: ಝಂಪೆ

ಮೂರ್ಖರಾದರು ಜನರು ಲೋಕದೊಳಗೆ ಪ.

ಏಕ ದೈವವ ಬಿಟ್ಟು ಕಾಕು ದೈವವ ಭಜಿಸಿ ಅ.ಪ.

ಒಂಟಿಯಲಿ ಹೆಂಡತಿಯ ಬಿಡುವಾತನೇ ಮೂರ್ಖ
ನೆಂಟರಿಗೆ ಸಾಲವನು ಕೊಡುವಾತ ಮೂರ್ಖ
ಗಂಟನೊಬ್ಬರ ಕೈಯಲಿಡುವಾತ ಮೂರ್ಖ ಜನ-
ಕಂಟಕನಾದವನು ಕಡು ಮೂರ್ಖನಯ್ಯ ೧

ಹಡೆದ ಮಕ್ಕಳ ಮಾರಿ ಒಡಲ ಹೊರೆವವ ಮೂರ್ಖ
ಮಡದಿ ಹುಟ್ಟಿದ ಮನೆಯೊಳಿರುವವನು ಮೂರ್ಖ
ಬಡತನವು ಬಂದಾಗ ಬೈದುಕೊಂಬುವ ಮೂರ್ಖ
ದೃಢಭಕ್ತಿಯಿಲ್ಲದವ ಕಡು ಮೂರ್ಖನಯ್ಯ ೨

ಮುಪ್ಪಿನಲಿ ಮದುವೆ ಮಾಡಿಕೊಂಬುವವ ಮೂರ್ಖ
ಸರ್ಪನಲಿ ಸರಸವಾಡುವನೆ ಮೂರ್ಖ
ಇಪ್ಪತ್ತು ಒಂದು ಕುಲ ಉದ್ಧರಿಸದವ ಮೂರ್ಖ
ಅಪ್ಪ ರಂಗಯ್ಯನ ಭಜಿಸದವ ಮೂರ್ಖನಯ್ಯ ೩

ಸತ್ತ ಕರುವಿನ ತಾಯ ಹಾಲ ಕರೆವವ ಮೂರ್ಖ
ಒತ್ತೆಯಿಲ್ಲದೆ ಸಾಲ ಕೊಡುವವನು ಮೂರ್ಖ
ಹತ್ತೆಂಟು ಬಗೆಯಲ್ಲಿ ಹಂಬಲಿಸುವವ ಮೂರ್ಖ
ಹೆತ್ತ ತಾಯಿಯ ಬೈವ ಕಡು ಮೂರ್ಖನಯ್ಯ ೪

ರಾಮನಾಮವ ನಂಬಿ ಭಜಿಸದಿದ್ದವ ಮೂರ್ಖ
ಹೇಮವನು ಗಳಿಸಿ ಉಣದವನು ಮೂರ್ಖ
ಕಾಮದಲಿ ಹಿರಿಯಳ ಕೂಡಿಕೊಂಡವ ಮೂರ್ಖ
ಭೂಮಿ ದಾನವ ತೆಗೆವ ಭೂಪತಿಯು ಮೂರ್ಖ ೫

ಕಾಶಿಯಲಿ ದೇಹವನು ತೊಳೆಯದಿದ್ದವ ಮೂರ್ಖ
ಭೂಸುರರಿಗನ್ನವನು ಕೊಡದವನು ಮೂರ್ಖ
ಶೇಷಗಿರಿ ಕೃಷ್ಣನ್ನ ಭಜಿಸದಿದ್ದವ ಮೂರ್ಖ
ದಾಸನಾಗದ ಮನುಜ ಕಡುಮೂರ್ಖನಯ್ಯ ೬

ಉಂಡ ಮನೆಗೆರಡನ್ನು ಬಗೆವಾತನೇ ಮೂರ್ಖ
ಕೊಂಡೆ ಮಾತನು ಕೇಳಿ ಕುಣಿವವನು ಮೂರ್ಖ
ಪುಂಡರೀಕಾಕ್ಷ ಶ್ರೀ ಪುರಂದರವಿಠಲನ
ಕಂಡು ಕಂಡು ಭಜಿಸದವ ಕಡು ಮೂರ್ಖನಯ್ಯ ೭

---

ಈ ಕೀರ್ತನೆಯು ತುಂಬಾ ಪಸ್ತಕ್ಷೇಪಕ್ಕೆ ಒಳಗಾಗಿದೆ. ಬೆಸಸಂಖ್ಯೆಯಲ್ಲಿ ಸಾಮಾನ್ಯವಾಗಿ ನುಡಿಗಳಿರುತ್ತವೆಯಷ್ಟೆ. ನಾವಿಲ್ಲಿ ಸ್ವೀಕರಿಸಿದ್ದು, ೭ ನುಡಿಯ ಪುರಂದರದಾಸರ ಸಾಹಿತ್ಯದ ಪಾಠವನ್ನು. ಆದರೆ ಪು.ಸಾ.ದರ್ಶನದಲ್ಲಿ ೬ ನುಡಿಗಳಿವೆ. ಅಪರಂತೆ ಪು.ಕೀರ್ತನೆ ಹಾಗೂ ಕೃತಿಗಳು ರಲ್ಲಿ ೮ ನುಡಿಗಳಿವೆ. ಈ ಹೆಚ್ಚಿನ ನುಡಿ ಇಂತಿದೆ:

ಸ್ವಾಮಿ (ರಾಮ) ನಾಮವ ಬಿಡದೆ ಭಜಿಸದಿದ್ದವ ಮೂರ್ಖ
ಸ್ವಾಮಿ ಗುರುಹಿರಿಯರಿಗೆ ಎರಗದವ ಮೂರ್ಖ
ನೇಮದಲಿ ಹರಿಕಥೆಯ ಕೇಳದವ ತಾ ಮೂರ್ಖ
ತಾಮಸರ ಕೂಡಿಕೊಂಬವನೆ ಮೂರ್ಖ

## ೨೩೨. ಮೆಲ್ಲಮೆಲ್ಲನೆ ಬಂದನೆ ಗೋಪ್ಯಮ್ಮ

[ ಶ್ರೀಕೃಷ್ಣಲೀಲೆ ]

ರಾಗ: ಮೋಹನ ತಾಳ: ಆದಿ

ಮೆಲ್ಲಮೆಲ್ಲನೆ ಬಂದನೆ ಗೋಪ್ಯಮ್ಮ ಕೇಳೆ
ಮೆಲ್ಲಮೆಲ್ಲನೆ ಬಂದನೆ ಪ.

ಮೆಲ್ಲಮೆಲ್ಲನೆ ಬಂದು ಗಲ್ಲಕೆ ಮುದ್ದು ಕೊಟ್ಟು
ನಿಲ್ಲದೆ ಓಡಿ ಪೋದ ಕಳ್ಳಗೆ ಬುದ್ಧಿ ಪೇಳೆ ಅ.ಪ.

ಹಾಲು ಮಾರಲು ಪೋದರೆ ನಿನ್ನಯ ಕಂದ
ಕಾಲಿಗಡ್ಡವ ಕಟ್ಟಿದ
ಹಾಲ ಸುಂಕವ ಬೇಡಿ ಕೋಲನ್ನೆ ಅಡ್ಡಗಟ್ಟಿ
ಶಾಲೆಯ ಸೆಳಕೊಂಡು ಪೇಳದೋಡಿದ ಕೃಷ್ಣ ೧

ಮೊಸರು ಮಾರಲು ಪೋದರೆ ನಿನ್ನಯ ಕಂದ
ಹೆಸರೇನೆಂದೆಲೆ ಕೇಳಿದ
ಹಸನಾದ ಹೆಣ್ಣಿನ ಮೇಲೆ ಕುಸುಮವ ತಂದಿಕ್ಕಿ
ಶಶಿಮುಖಿಯರಿಗೆಲ್ಲ ಬಸಿರು ಮಾಡಿದನೀತ ೨

ಹೋಗಿರೆ ರಂಗಯ್ಯನ ಮೇಲೆ ನೀವು
ದೂರೇನು ಕೊಂಡು ಬಂದಿರೆ
ಯೋಗೀಶ ಪುರಂದರವಿಠಲರಾಯನ
ತೂಗಿ ಪಾಡಿರೆ ಬೇಗ ನಾಗವೇಣಿಯರೆಲ್ಲ ೩

## ೨೩೩. ಮೋಸ ಹೋದೆನಲ್ಲಾ ತಿಳಿಯದೆ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಧನ್ಯಾಸಿ ತಾಳ: ಆದಿ

ಮೋಸ ಹೋದೆನಲ್ಲಾ ತಿಳಿಯದೆ ಮೋಸ ಹೋದೆನಲ್ಲಾ ಪ.

ಕ್ಲೇಶಪಾಶವನು ನಾಶಮಾಡುವ
ಶ್ರೀಶನಂಘ್ರಿಗಳ ಲೇಸಾಗಿ ಸ್ಮರಿಸದೆ ಅ.ಪ.

ಕಾಯದಾಶೆಯಿಂದ ಕಂಡದ್ದು ಬೇಡಿ ಶ್ವಾನನಂತೆ
ಮಾಯಪಾಶದಲಿ ಸಿಲುಕಿ ನಾನು ಮಾರಮಣನೆ ನಿನ್ನ
ಧ್ಯಾನಮಾಡದೇ ೧

ಪುಷ್ಪ ಜಾಜಿಗಳನು ಮಲ್ಲಿಗೆ ಭಕ್ತಿಭಾವದಿಂದ ತಂದು
ಕೃಷ್ಣಾವತಾರನ ಪೂಜೆಯ ಮಾಡಿ ವಿಷ್ಣುಲೋಕವನು ಸೂರೆಗೊಳ್ಳದೆ ೨

ಸತಿಸುತಾದಿ ಬಂಧುಬಳಗ ಹಿತವ ನುಡಿವರ್ಯಾರೋ
ಗತಿ ನೀನೆ ತಂದೆತಾಯಿ ನೀನೆ ಸದ್ಗತಿ ಈಯೋ ಪುರಂದರವಿಟ್ಠಲ ೩

## ೨೩೪. ಯಮನೆಲ್ಲೊ ಕಾಣೆನೆಂದ್ವೇಳಬೇಡ

[ ಶ್ರೀಹರಿ ಸ್ತುತಿ-ಚತುರೋಕ್ತಿ ]

ರಾಗ: ಶಂಕರಾಭರಣ ತಾಳ: ಆದಿ

ಯಮನೆಲ್ಲೊ ಕಾಣೆನೆಂದ್ವೇಳಬೇಡ ಪ.

ಯಮನೆ ಶ್ರೀರಾಮನು ಸಂದೇಹ ಬೇಡ ಅ.ಪ.

ನಂಬಿದ ವಿಭೀಷಣಗೆ ರಾಮನಾದ
ನಂಬದಿದ್ದ ರಾವಣಗೆ ಯಮನಾದ ೧

ನಂಬಿದ ಅರ್ಜುನನಿಗೆ ಭೃತ್ಯನಾದ
ನಂಬದ ದುರ್ಯೋಧನನಿಗೆ ಮೃತ್ಯುವಾದ ೨

ನಂಬಿದ ಪ್ರಹ್ಲಾದನಿಗೆ ಹರಿಯಾದ
ನಂಬದ ಹಿರಣ್ಯಕನಿಗೆ ಉರಿಯಾದ ೩

ನಂಬಿದ ಉಗ್ರಸೇನಗೆ ಮಿತ್ರನಾದ
ನಂಬದಿದ್ದ ಕಂಸನಿಗೆ ಶತ್ರುವಾದ ೪

ನಂಬಿಕೊಳ್ಳಿ ಬೇಗ ಶ್ರೀಕೃಷ್ಣದೇವನ
ಕಂಬು ಚಕ್ರಧಾರಿ ಪುರಂದರವಿಠಲನ ೫

## ೨೩೫. ಯಾಕೆ ಚಿಂತಿಸುತಿದ್ದಿ ಕೋತಿಮನವೆ

[ ಲೋಕನೀತಿ ]

ರಾಗ: ಭೈರವಿ ತಾಳ: ಝಂಪೆ

ಯಾಕೆ ಚಿಂತಿಸುತಿದ್ದಿ ಕೋತಿಮನವೆ ಪ.

ಲೋಕನಾಥನ ನೆನೆದು ಸುಖಿಯಾಗು ಮನವೆ ಅ.ಪ.

ಹುಟ್ಟುವಾಗಾಪತ್ತಿಗಾರು ಚಿಂತಿಸಿದವರು
ಕಟ್ಟಕಡೆಯಲಿ ಲಯಕೆ ಯಾರ ಚಿಂತೆ
ನಟ್ಟನಡುವಿನ ಬಾಳಿಗೇಕೆ ಚಿಂತಿಸುತಿರುವೆ
ಹುಟ್ಟಿದವರಿಗೆ ಮೂರು ಬಟ್ಟೆಲ್ಲವೆ ಮರುಳೆ ೧

ನವಿಲಿಗೆ ಚಿತ್ರಪತ್ರವನಾರು ಬರೆದವರು
ಪವಳದ ಲತೆಗೆ ಕೆಂಪಿಟ್ಟವರು ಯಾರು
ಸವಿಮಾತಿನರಗಿಣಿಗೆ ಹಸುರು ಬಳಿದವರಾರು
ಅವ ಮಾಡಿದವ ನಮ್ಮ ಮರೆತಿಹನೆ ಮರುಳೆ ೨

ಬಸುರೊಳಗೆ ಶಿಶುವನು ಅದಾರು ಸಲಹಿದವರು
ವಸುಧೆಯನು ಬಸುರೊಳಗೆ ಇಟ್ಟವರು ಯಾರು
ಹಸಗೆಡದೆ ನಮ್ಮ ಶ್ರೀ ಪುರಂದರವಿಠಲನ
ಬಿಸಜಪಾದವ ನಂಬಿ ಸುಖಿಯಾಗು ಮರುಳೆ ೩

## ೨೩೬. ಯಾಕೆ ನಿರ್ದಯನಾದೆ ಎಲೊ ದೇವನೆ

[ ಶ್ರೀಹರಿ-ನಿಂದಾಸ್ತುತಿ ]

ರಾಗ: ಕಾಂಬೋದಿ ತಾಳ: ಝಂಪೆ

ಯಾಕೆ ನಿರ್ದಯನಾದೆ ಎಲೊ ದೇವನೆ ಪ.

ಶ್ರೀಕಾಂತ ಎನಮೇಲೆ ಎಳ್ಳಷ್ಟು ದಯವಿಲ್ಲ ಅ.ಪ.

ಕಂಗೆಟ್ಟು ಕಂಭದಲಿ ಒಡೆದು ಬಳಲಿ ಬಂದು
ಹಿಂಗದೆ ಪ್ರಹ್ಲಾದನಪ್ಪಿಕೊಂಡೆ
ಮಂಗಳ ಪದವಿತ್ತು ಮನ್ನಿಸಿದೆ ಅವ ನಿನಗೆ
ಭಂಗಾರವೆಷ್ಟು ಕೊಟ್ಟನು ಪೇಳೊ ಹರಿಯೆ ೧

ಸಿರಿದೇವಿಗೆ ಹೇಳದೆ ಸೆರಗು ಸಂವರಿಸದೆ
ಗರುಡನ ಮೇಲೆ ಗಮನವಾಗದೆ
ಭರದಿಂದ ನೀ ಬಂದು ಕರಿಯನುದ್ಧರಿಸಿದೆ
ಕರಿರಾಜ ಎಷ್ಟು ಕನಕವ ಕೊಟ್ಟ ಹರಿಯೆ ೨

ಅಜಮಿಳನು ಅಣ್ಣನೆ ವಿಭೀಷಣನು ತಮ್ಮನೆ
ನಿಜದಿ ರುಕ್ಮಾಂಗದನು ನಿನ್ನ ಮೊಮ್ಮಗನೇ
ಭಜನೆಗವರೇ ಹಿತರೆ ನಾ ನಿನಗೆ ಅನ್ಯನೆ
ತ್ರಿಜಗಪತಿ ಸಲಹೆನ್ನ ಪುರಂದರವಿಠಲ ೩

---

ಈ ಮುಂಚೆ ರುಕ್ಮಾಂಗದ ಮುಂತಾದವರನ್ನು ರಕ್ಷಿಸಿದ ಶ್ರೀಹರಿ. ತನ್ನ ಮೇಲೇಕೆ ನಿರ್ದಯನಾದನು? ಅವರು ಭಂಗಾರವನ್ನೇನಾದರೂ ನಿನಗೆ ಕೊಟ್ಟರೊ? ಇಲ್ಲವೆ ನೆಂಟರೊ? ಈ ಪಕ್ಷಪಾತವೇಕೆ? ಎಂದು ಕೇಳುತ್ತಾರೆ. ಕರಿರಾಜ-ಶಾಪದಿಂದ ಆನೆಯಾದ ಇಂದ್ರದ್ಯುಮ್ನ

## ೨೩೭. ಯಾಕೆ ಮೂರ್ಖನಾದ್ಯೋ ಮನುಜ

[ ಲೋಕನೀತಿ ]

ರಾಗ: ನಾದನಾಮಕ್ರಿಯೆ | ತಾಳ: ಆದಿ

ಯಾಕೆ ಮೂರ್ಖನಾದ್ಯೋ ಮನುಜ
ಯಾಕೆ ಮೂರ್ಖನಾದ್ಯೋ ಪ.

ಯಾಕೆ ಮೂರ್ಖನಾದ್ಯೋ ನೀನು
ಕಾಕುಬುದ್ಧಿಯನ್ನು ಬಿಟ್ಟು
ಲೋಕನಾಥನನ್ನು ನೆನೆ ಕಂಡ್ಯ ಮನುಜ ಅ.ಪ.

ಸಾಧು ಸಜ್ಜನ ಸಂಗ ಮಾಡು
ಭೇದಾಭೇದ ತಿಳಿದು ನೋಡು
ವಾದ ಬುದ್ಧಿ ಮಾಡುವರೇನೋ ಮನುಜ ೧

ದಾನ ಧರ್ಮವನ್ನು ಮಾಡು
ಜ್ಞಾನದಿಂದ ತಿಳಿದು ನೋಡು
ಹೀನಬುದ್ಧಿ ಮಾಡುವರೇನೋ ಮನುಜ ೨

ಮಕ್ಕಳು ಹೆಂಡಿರು ತನ್ನವರೆಂದು
ರೊಕ್ಕವನ್ನು ಗಳಿಸಿಕೊಂಡು
ಸೊಕ್ಕಿನಿಂದ ತಿರುಗುವರೇನೋ ಮನುಜ ೩

ಅಂತಕನ ದೂತರು ಬಂದು
ಕಂತೆ ಕಟ್ಟು ಹೊರಡು ಎಂದು
ನಿಂತರೆಲ್ಲರು ಬಿಡಿಸುವರೇನೋ ಮನುಜ ೪

ಅರಿಷಡ್ವರ್ಗದ ಆಟವ ಬಿಟ್ಟು
ಪುರಂದರವಿಠಲನ ಧ್ಯಾನದೊಳಿಟ್ಟು
ಪರಗತಿ ದಾರಿಯ ನೋಡೋ ಮನುಜ ೫

---

ಕಾಕು ಬುದ್ಧಿ-ಕೆಟ್ಟ ವಿಚಾರ. ಭೇದಾಭೇದ-ಮಾಧ್ವತತ್ವಜ್ಞಾನದ ಪ್ರಕಾರ ಪಂಚಭೇದಗಳಿವೆ: ಜೀವ-ಜೀವ ಭೇದ, ಜೀವ-ಜಡ, ಜಡ-ಜಡ, ಜೀವ-ಈಶ ಮತ್ತು ಜಡ-ಈಶ-ಎಂಬೀ ಭೇದಗಳು. ಶ್ರೀಹರಿಯಲ್ಲಿ ಮಾತ್ರ ಅಭೇದ.

## ೨೩೮. ಯಾಕೆನ್ನೊಳಿನಿತು ಕೃಪೆಯಿಲ್ಲ ಹರಿಯೆ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಮುಖಾರಿ ತಾಳ: ಅಟ್ಟ

ಯಾಕೆನ್ನೊಳಿನಿತು ಕೃಪೆಯಿಲ್ಲ ಹರಿಯೆ ಪ.

ಕಾಕುಮಾಡದೆ ಕಾಯೊ ಭವದೊಳಗೆ ಬಳಲಿದೆನು ಅ.ಪ.

ಕಂದರ್ಪ ಬಾಧೆಯಿಂ ಮಾನಿನಿಯ ವಶನಾಗಿ
ಮಂದಮತಿಯಿಂದ ಬಲು ಮರುಳಾದೆನೊ
ಸಂದಿತ್ತೆ ಯೌವನವು ಬುದ್ಧಿ ಬಂದಿತು ಈಗ
ಸಂದೇಹಪಡದೆ ನೀ ಕರುಣಿಸೈ ಎನ್ನ ೧

ಹೆಂಡತಿಯು ಕಡೆಗಣ್ಣಿನಿಂದ ನೋಡುವಳೀಗ
ಹಿಂಡು ಮಕ್ಕಳು ಎನ್ನ ಕಾಡುತಿಹರು
ಮುಂಡಮೋಚಿದೆ ನಾನು ಇನ್ನಾರು ಗತಿ ಎನಗೆ
ಪುಂಡರೀಕಾಕ್ಷ ನೀ ಕರುಣಿಸೈ ಎನ್ನ ೨

ಅಟ್ಟ ಮೇಲೆ ಒಲೆಯು ಉರಿವಂತೆ ಎನಗೀಗ
ಕೆಟ್ಟ ಮೇಲೆ ಅರಿವು ಬಂದಿತಯ್ಯ
ನೆಟ್ಟನೆ ಪುರಂದರವಿಠಲನೆ ಕೈ ಬಿಡದೆ
ದೃಷ್ಟಿಯಿಂದಲಿ ನೋಡಿ ಪರಿಪಾಲಿಸಯ್ಯ ೩

## ೨೩೯. ಯಾದವ ನೀ ಬಾ ಯದುಕುಲ ನಂದನ

[ ಶ್ರೀಕೃಷ್ಣಲೀಲೆ ]

ರಾಗ: ಜುಲಾಪ್ ತಾಳ: ಅಟ್ಟ

ಯಾದವ ನೀ ಬಾ ಯದುಕುಲ ನಂದನ
ಮಾಧವ ಮಧುಸೂದನ ಬಾರೊ ಪ.

ಸೋದರಮಾವನ ಮಧುರೆಲಿ ಮಡುಹಿದ ಯ-
ಶೋದೆ ನಂದನ ನೀ ಬಾರೊ ಅ.ಪ.

ಕಣಕಾಲಂದುಗೆ ಘಲುಘಲುರೆನುತಲಿ
ಝುಣಝುಣ ವೇಣುನಾದದಲಿ
ಚಿಣಿಕೋಲ್ ಚೆಂಡು ಬುಗುರಿಯನಾಡುತ
ಸಣ್ಣ ಸಣ್ಣ ಗೋವಳರೊಡಗೂಡಿ ೧

ಶಂಖ ಚಕ್ರವು ಕೈಯಲಿ ಹೊಳೆಯುತ
ಬಿಂಕದ ಗೋವಳ ನೀ ಬಾರೊ
ಅಕಳಂಕ ಚರಿತನೆ ಆದಿನಾರಾಯಣ
ಬೇಕೆಂಬ ಭಕ್ತರಿಗೊಲಿ ಬಾರೊ ೨

ಖಗವಾಹನನೆ ಬಗೆಬಗೆಯಿಂದಲಿ
ನಗೆಮೊಗದರಸನೆ ನೀ ಬಾರೊ
ಜಗದೊಳು ನಿನ್ನಯ ಮಹಿಮೆಯ ಪೊಗಳುವೆ
ಪುರಂದರವಿಟ್ಠಲ ನೀ ಬಾರೊ ೩

## ೨೪೦. ಯಾರಿಗೆ ಯಾರುಂಟು ಎರವಿನ ಸಂಸಾರ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಬಿಲಹರಿ ತಾಳ: ಅಟ್ಟ

ಯಾರಿಗೆ ಯಾರುಂಟು ಎರವಿನ ಸಂಸಾರ
ನೀರ ಮೇಲಣ ಗುಳ್ಳೆ ನಿಜವಲ್ಲ ಹರಿಯೇ ಪ.

ಬಾಯಾರಿತು ಎಂದು ಬಾವಿನೀರಿಗೆ ಪೋದೆ
ಬಾವಿಲಿ ಜಲ ಬತ್ತಿ ಬರಿದಾಯ್ತು ಹರಿಯೆ ೧

ಬಿಸಿಲು ಗಾಳಿಗಾಗಿ ಮರದ ನೆರಳಿಗೆ ಪೋದೆ
ಮರ ಬಗ್ಗಿ ಶಿರದ ಮೇಲೊರಗಿತೋ ಹರಿಯೆ ೨

ಅಡವಿಯೊಳ್ಮನೆಮಾಡಿ ಗಿಡಕೆ ತೊಟ್ಟಿಲು ಕಟ್ಟಿ
ತೊಟ್ಟಿಲಿನ ಶಿಶು ಮಾಯವಾಯಿತು ಹರಿಯೆ ೩

ತಂದೆ ಶ್ರೀ ಪುರಂದರವಿಠಲ ನಾರಾಯಣ
ನಾ ಸಾಯೊ ಹೊತ್ತಿಗೆ ನೀ ಕಾಯೊ ಹರಿಯೆ ೪

## ೨೪೧. ಯಾರು ಒಲಿದರೇನು

[ ಹರಿದಾಸರು ]

ರಾಗ: ಆನಂದಭೈರವಿ ತಾಳ: ಆದಿ

ಯಾರು ಒಲಿದರೇನು ನಮಗಿ-
ನ್ನಾರು ಮುನಿದರೇನು ಪ.

ಕ್ಷೀರಸಾಗರಶಾಯಿಯಾದವನ
ಸೇರಿದಂಥ ಹರಿದಾಸರಿಗೆ ಅ.ಪ.

ಊರನಾಳುವ ದೊರೆಗಳು ನಮ್ಮನು ದೂರ ಅಟ್ಟಿದರೇನು
ಘೋರಾರಣ್ಯದಿ ತಿರುಗುವ ಮೃಗಗಳು ಅಡ್ಡಗಟ್ಟಿದರೇನು
ಮಾರಿಹಿಂಡು ಮತ್ತೆ ಮುಸುಕಿನ ದಂಡು ಮೈಗೆ ಮುತ್ತಿದರೇನು
ವಾರಿಜನಾಭನ ವಸುದೇವಸುತನ ಸಾರುವಂಥ ಹರಿದಾಸರಿಗೆ ೧

ಪಡೆದ ತಾಯಿ ತಂದೆ ನಮ್ಮೊಳು ಅಹಿತ ಮಾಡಿದರೇನು
ಮಡದಿ ಮಕ್ಕಳು ಮನೆಯ ನೆಂಟರು ಮುನಿಸುಗುಟ್ಟಿದರೇನು
ಒಡನಾಡುವ ಗೆಳೆಯರು ನಮ್ಮೊಳು ವೈರವ ಬೆಳೆಸಿದರೇನು
ಕಡಲಶಯನ ಕರುಣಾನಿಧಿ ನಾಮವು ಒಡಲೊಳಗಿಹ ಹರಿದಾಸರಿಗೆ ೨

ಕಾನನದೊಳ್ಹರಿದಾಡುವ ಸರ್ಪವು ಕಾಲಿಗೆ ಸುತ್ತಿದರೇನು
ಜೇನಿನಂದದಿ ಕೀಟ ಕ್ರಿಮಿಗಳು ಚರ್ಮಕೆ ಮುತ್ತಿದರೇನು
ಭಾನುನಂದನ ಬುಧ ಮಂಗಳರಾ ಬಲವು ತಪ್ಪಿದರೇನು
ದೀನನಾಥ ಶ್ರೀ ಪುರಂದರವಿಠಲನ ಧ್ಯಾನವುಳ್ಳ ಹರಿದಾಸರಿಗೆ ೩

---

ಮುಸುಕಿನ ದಂಡು-ಕರಿಮೋರೆಯ 'ಮುಶ್ಯಾ'ಗಳ ಸಮೂಹ. ಭಾನುನಂದನ-ಶನೈಶ್ಚರ

## ೨೪೨. ಯಾರು ಬಿಟ್ಟರು ಕೈಯ ನೀ ಬಿಡದಿರು

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ನಾದನಾಮಕ್ರಿಯೆ ತಾಳ: ಆದಿ

ಯಾರು ಬಿಟ್ಟರು ಕೈಯ ನೀ ಬಿಡದಿರು ಕಂಡ್ಯ ನಾರಾಯಣ ಸ್ವಾಮಿ ಪ.

ನೀ ಬಿಟ್ಟರೆ ಮುಂದಿನ್ನಾರು ಕಾಯ್ವರ ಕಾಣೆ ನಾರಾಯಣ ಅ.ಪ.

ಮುಂದೆ ನೋಡಿದರೆ ಹೆಬ್ಬುಲಿ ಬಾಯ್ಬಿಡುತಿದೆ ನಾರಾಯಣ ಸ್ವಾಮಿ
ಹಿಂದೆ ನೋಡಿದರೆ ಹೆಬ್ಬಾವು ನುಂಗುತಲಿದೆ ನಾರಾಯಣ
ಕಂಡು ಮಡುವ ಬೀಳಲು ಅಲ್ಲಿ ನೆಗಳಿಗೆ ನಾರಾಯಣ ಬಹು
ಬಂಧನದೊಳು ಸಿಕ್ಕಿ ಬಳಲಿ ನೊಂದೆನಯ್ಯ ನಾರಾಯಣ ೧

ನಂಬಿ ನಾ ಪಿಡಿದರೆ ಕೊಂಬೆಲ್ಲ ಮುರಿದಾವು ನಾರಾಯಣ ಸ್ವಾಮಿ
ಹಂಬಲಿಸಿದರಂಜಬೇಡವೆಂಬುವರಿಲ್ಲ ನಾರಾಯಣ
ತುಂಬಿದ ಹೊಳೆಯಲ್ಲಿ ಹರಿಗೋಲನೇರಿದೆ ನಾರಾಯಣ ಸ್ವಾಮಿ
ಅಂಬಿಗನಂತೆನ್ನ ದಡವ ಸೇರಿಸೊ ಮುನ್ನ ನಾರಾಯಣ ೨

ಶಿಶು ಅವತಾರದಿ ಪಶುಗಳ ನೀ ಕಾಯ್ದೆ ನಾರಾಯಣ ಸ್ವಾಮಿ
ದಶ ಅವತಾರದಿ ಚಕ್ರವ ತಾಳಿದೆ ನಾರಾಯಣ
ವಿಷದ ಕಾಳಿಂಗನ ಮಡುವ ಕಲಕಿ ಬಂದೆ ನಾರಾಯಣ ಸ್ವಾಮಿ
ವಸುಧೆಯೊಳಧಿಕ ಪುರಂದರವಿಠಲನೆ ನಾರಾಯಣ ೩

## ೨೪೩. ಯಾರೂ ಸಂಗಡ ಬಾಹೋರಿಲ್ಲ

**[ ಲೋಕನೀತಿ-ಪ್ರಾಪಂಚಿಕ ]**

**ರಾಗ: ಮೋಹನ** **ತಾಳ: ಅಟ್ಟ**

ಯಾರೂ ಸಂಗಡ ಬಾಹೋರಿಲ್ಲ ಪ.

ನಾರಾಯಣ ನಿಮ್ಮ ನಾಮ ಒಂದಲ್ಲದೆ ಅ.ಪ.

ಹೊತ್ತು ನವಮಾಸ ಪರಿಯಂತರವು ಗರ್ಭದಲಿ
ಹೆತ್ತು ಬಲು ನೋವು ಬೇನೆಗಳಿಂದಲಿ
ತುತ್ತು ಬುತ್ತಿಯ ಕೊಟ್ಟು ಸಲಹಿದಂಥ ತಾಯಿ
ಅತ್ತು ಕಳುಹುವಳಲ್ಲದೆ ನೆರೆ ಬಾಹಳೆ ೧

ದೇವವಿಪ್ರರು ಅಗ್ನಿ ಸಾಕ್ಷಿಯಿಂದಲಿ ತನ್ನ
ಭಾವಶುದ್ಧಿಯಲಿ ಧಾರೆಯೆರೆಸಿಕೊಂಡ
ದೇವಿ ತನ್ನ ತಲೆಗೆ ಕೈಯಿಟ್ಟುಕೊಂಡು ಇ-
ನ್ನಾವ ಗತಿಯಿಂದೆನುತ ಗೋಳಿಡುವಳಲ್ಲದೆ ೨

ಮತ್ತೆ ಪ್ರಾಣನು ತನುವ ಬಿಟ್ಟು ಹೋಗುವಾಗ
ಎತ್ತಿವನ ಹೊರಗೊಯ್ದು ಹಾಕೆಂಬರು
ಎತ್ತಿದ ಕಸಕ್ಕಿಂತ ಕಡೆಯಾಯಿತೀ ದೇಹ
ವಿತ್ತವೆಷ್ಟಿದ್ದರೂ ಫಲವಿಲ್ಲ ಹರಿಯೆ ೩

ಪುತ್ರ ಮಿತ್ರರು ಸಕಲ ಬಂಧು ಬಳಗಗಳೆಲ್ಲ
ಹತ್ತಿರ ನಿಂತು ನೋಡುವರಲ್ಲದೆ
ಮೃತ್ಯುದೇವಿಯು ಬಂದು ಅಸುಗಳನು ಸೆಳೆವಾಗ
ಮತ್ತೆ ತನ್ನವರಿದ್ದು ಏನು ಮಾಡುವರು ೪

ಯಮನ ದೂತರು ಬಂದು ಪಾಶಂಗಳನೆ ಎಸೆದು
ಮಮತೆಯಿಲ್ಲದೆ ಪ್ರಾಣ ಎಳೆಯುತಿರಲು
ವಿಮುಖನಾಗಿ ತಾನು ವ್ಯಥೆಯಿಂದ ಪೋಪಾಗ
ಕಮಲಾಕ್ಷ ಪುರಂದರವಿಠಲ ನೀನಲ್ಲದೆ ೫

## ೨೪೪. ಯಾರೆ ಬಂದವರು ಮನೆಗೆ

[ ಶ್ರೀಕೃಷ್ಣಲೀಲೆ ]

ರಾಗ: ಸೌರಾಷ್ಟ್ರ ತಾಳ: ಅಟ್ಟ

ಯಾರೆ ಬಂದವರು ಮನೆಗೆ ಮತ್ಯಾರೆ ಬಂದವರು ಪ.

ನಾರಾಯಣ ಕೃಷ್ಣ ನಾಥನಲ್ಲದೆ ಬೇರೆ ಅ.ಪ.

ವಜ್ರರೇಖೆಗಳಿವೆ ಮನೆಯಲ್ಲಿ ಕಾಲ
ಗೆಜ್ಜೆ ಧ್ವನಿ ಕೇಳಿ ಬರುತಿದೆ
ವಜ್ರಮಾಣಿಕ್ಯವೆಲ್ಲ ಹರಿದು ಬಿದ್ದಿವ
ಮಜ್ಜಿಗೆಯೊಳಗೆ ಕಾಣ್ವ ಬೆಣ್ಣೆಯ ಕಾಣೆ ೧

ಕೊಂಬು ಕೊಳಲು ರಭಸಗಳಿವೆ
ಕದಂಬ ಕಸ್ತೂರಿ ಪೆಂಪೆಸೆದಿವೆ
ಪೊಂಬಟ್ಟೆ ಚಲ್ಲಣ ಚಲ್ಲಿದೆ ಹಾಲು
ಕುಂಭ ಒಡೆದು ಮನೆತುಂಬ ಬೆಳ್ಳಗಾಯಿತು ೨

ಮಿಂಚು ಹುಳದಂತೆ ಹೊಳೆವುತ ತಮ್ಮ
ಸಂಚರರೊಡಗೂಡಿ ಚಲಿಸುತ್ತ
ವಂಚಿಸಿ ಬೆಣ್ಣೆಯ ಮೆಲ್ಲುತ ನಮ್ಮ
ಲಂಚದ ಪುರಂದರವಿಠಲನಲ್ಲದೆ ಬೇರೆ ೩

## ೨೪೫. ಯಾರೆ ರಂಗನ ಯಾರೆ ಕೃಷ್ಣನ

[ ಶ್ರೀಕೃಷ್ಣಲೀಲೆ ]

ರಾಗ: ಶಂಕರಾಭರಣ ತಾಳ: ಆದಿ

ಯಾರೆ ರಂಗನ ಯಾರೆ ಕೃಷ್ಣನ
ಯಾರೆ ರಂಗನ ಕರೆಯ ಬಂದವರು ಪ.

ಗೋಪಾಲಕೃಷ್ಣನ ಪಾಪವಿನಾಶನ
ಈ ಪರಿಯಿಂದಲಿ ಕರೆಯ ಬಂದವರು ೧

ವೇಣುವಿನೋದನ ಪ್ರಾಣಪ್ರಿಯನ
ಜಾಣೆಯರರಸನ ಕರೆಯ ಬಂದವರು ೨

ಕರಿರಾಜವರದನ ಪರಮಪುರುಷನ
ಪುರಂದರವಿಠಲನ ಕರೆಯ ಬಂದವರು ೩

## ೨೪೬. ರಂಗ ಬಾರೋ ರಂಗ ಬಾರೋ

[ ಶ್ರೀಹರಿ ಸ್ತುತಿ ]

ರಾಗ: ಮೋಹನ ತಾಳ: ಅಟ್ಟ

ರಂಗ ಬಾರೋ ರಂಗ ಬಾರೋ ರಂಗಯ್ಯ ಬಾರೋ ಪ
ಪೊನ್ನುಂಗುರ ನಿನಗೀವೆ ಪನ್ನಗಶಯನನೆ ಬಾರೋ ಅ.ಪ.

ವೆಂಕಟರಮಣನೆ ಬಾರೋ ಪಂಕಜ ಚರಣವ ತೋರೋ
ಮುಕುಂದ ಮುಂದೆ ನಿಂದಾಡೋ ಕಿಂಕಿಣಿಕಿಣಿ ರವದಿಂದ ೧

ಕರ್ಣದೊಳಿಟ್ಟ ಮಾಗಾಯಿ ಹೊನ್ನ ಕದಪಿಲಿ ಧುಮುಕಾಡುತ್ತ
ಪನ್ನಗಶಯನನೆ ನಿನ್ನ ಚಿನ್ನದ ಸರ ಹೊಳೆವುತ್ತ ಬಾರೋ ೨

ಬಡನಡುವಿನ ಘಂಟೆ ಬಳುಕಿ ಥಣಥಣಿಸುತ್ತ
ಕಡಗ ಕಾಲಂದುಗೆ ಗೆಜ್ಜೆ ಅಡಿಗಡಿಗೆ ನುಡಿಸುತ್ತ ಬಾರೋ ೩

ಮುಂಗುರುಳಿನ ಸೊಬಗಿನಿಂದ ರಂಗ ನಿನ್ನ ಫಣೆಯೊಳಿಟ್ಟ
ರಂಗು ಮಾಣಿಕ್ಯದರಳೆಲೆ ತೂಗಿ ತೂಗಿ ಓಲಾಡುತ್ತ ಬಾರೋ ೪

ಕೊರಳಿಗ್ಹಾಕಿದ ಹುಲಿಯುಗುರು ತೋರಮುತ್ತಿನ ಹಾರಂಗಳ್ಹೊಳೆಯುತ್ತ
ಪರಿಪರಿ ವಿಧಗಳಿಂದ ಪುರಂದರವಿಠಲ ಬಾರೋ ೫

## ೨೪೭. ರಂಗನಾಯಕ ರಾಜೀವಲೋಚನ

**[ ಶ್ರೀಹರಿ ಸ್ತುತಿ-ಉದಯರಾಗ ]**

**ರಾಗ: ಮೋಹನ** **ತಾಳ: ಅಟ್ಟ**

ರಂಗನಾಯಕ ರಾಜೀವಲೋಚನ
ರಮಣನೆ ಬೆಳಗಾಯಿತೇಳೆನ್ನುತ
ಅಂಗನೆ ಲಕುಮಿ ತಾ ಪತಿಯನೆಬ್ಬಿಸಿದಳು
ಶೃಂಗಾರದ ನಿದ್ರೆ ಸಾಕೆನ್ನುತ ಪ.

ಪಕ್ಷಿರಾಜನು ಬಂದು ಬಾಗಿಲೊಳಗೆ ನಿಂದು
ಅಕ್ಷಿ ತೆರೆದು ಬೇಗ ಈಕ್ಷಿಸೆಂದು
ಪಕ್ಷಿಜಾತಿಗಳೆಲ್ಲ ಚಿಲಿಪಿಲಿಗುಟ್ಟುತ್ತ
ಸೂಕ್ಷ್ಮದಲಿ ನಿನ್ನನು ಸ್ಮರಿಸುವವೊ ಕೃಷ್ಣ ೧

ಸನಕ ಸನಂದನ ಸನತ್ಸುಜಾತರು ಬಂದು
ವಿನಯದಿ ಕೈಮುಗಿದು ಓಲೈಪರು
ಘನ ಶುಕ ಶೌನಕ ವ್ಯಾಸ ವಾಲ್ಮೀಕರು
ನೆನೆದು ಕೊಂಡಾಡುವರೊ ಹರಿಯೆ ೨

ಸುರರು ಕಿನ್ನರರು ಕಿಂಪುರುಷರು ಉರಗರು
ಪರಿಪರಿಯಲಿ ನಿನ್ನ ಸ್ಮರಿಸುವರು
ಅರುಣನು ಬಂದುದಯಾಚಲದಲಿ ನಿಂದ
ಕಿರಣ ತೋರುವ ಭಾಸ್ಕರನು ಶ್ರೀಹರಿಯೆ ೩

ಪದುಮನಾಭನೆ ನಿನ್ನ ನಾಮಾಮೃತವನ್ನು
ಪದುಮಾಕ್ಷಿಯರು ತಮ್ಮ ಮನೆಯೊಳಗೆ
ಉದಯದೊಳೆದ್ದು ಸವಿದಾಡುತ್ತ ಪಾಡುತ್ತ
ದಧಿಯ ಕಡೆವರೇಳು ಮಧುಸೂದನನೆ ಕೃಷ್ಣ ೪

ಮುರಮಥನನೆ ನಿನ್ನ ಚರಣದ ಸೇವೆಯ
ಕರುಣಿಸಬೇಕೆಂದು ತರುಣಿಯರು
ಪರಿಪರಿಯಿಂದಲಿ ಸ್ಮರಿಸಿ ಹಾರೈಪರು
ಪುರಂದರವಿಠಲ ನೀನೇಳೊ ಹರಿಯೆ ೫

---

ಇದೊಂದು ಸೊಗಸಾದ ಉದಯರಾಗ. ಶ್ರೀಹರಿಯನ್ನು ಮಹಾಲಕ್ಷ್ಮಿ ಎಚ್ಚರಿಸುತ್ತಾಳೆ. ಗರುಡ ಸನಕಾದಿಗಳು, ಸುರರು; ಸೂರ್ಯದೇವರು ದನಿಗೂಡಿಸುತ್ತಾರೆ. ಉದಯಕಾಲದಲ್ಲಿ ಪಕ್ಷಿಗಳು ಚಿಲಿಪಿಲಿಗುಟ್ಟುವುವೆಂದರೆ ಸೂಕ್ಷ್ಮದಲ್ಲಿ ಶ್ರೀಹರಿಯನ್ನು ಎಳಿಸಿವಂತೆ. ಪದುಮಾಕ್ಷಿಯರು ಉದಯದೊಳೆದ್ದು ತಮ್ಮ ಮನೆಯೊಳಗೆ ಪದಮನಾಭನ ನಾಮವನ್ನು ಹೇಳುತ್ತ ಮೊಸರು ಕಡೆಯುವರು.

## ೨೪೮. ರಕ್ಷಿಸು ಲೋಕನಾಯಕನೆ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ರಾಗ: ಶಂಕರಾಭರಣ ತಾಳ: ಅಟ್ಟ

ರಕ್ಷಿಸು ಲೋಕನಾಯಕನೆ ರಕ್ಷಿಸು ಪ.

ಎಷ್ಟೆಷ್ಟು ಜನ್ಮವ ಕಳೆದೆನೊ ಇ-
ನ್ನೆಷ್ಟು ಜನ್ಮವ ಕಳೆವೆನೊ
ಕಷ್ಟವ ಪಡಲಾರೆ ಕೃಷ್ಣ ಕೃಪೆಯನಿಟ್ಟು
ಇಷ್ಟವ ಪಾಲಿಸೊ ಇಭರಾಜವರದನೆ ೧

ಬಾಲತನದಿ ಬಹು ನೊಂದೆನೊ ನಾನಾ
ಲೀಲೆಯಿಂದಲಿ ಕಾಲಕಳೆದೆನೊ
ಲೋಲಲೋಚನ ಎನ್ನ ಮೊರೆ ಕೇಳುತ ಬೇಗ
ಜಾಲವ ಮಾಡದೆ ಪಾಲಿಸೊ ನರಹರಿ ೨

ಮುದುಕನಾಗಿ ಚಿಂತೆಪಡುವೆನೊ ನಾ
ಕದಡು ದುಃಖ ಪಡಲಾರೆನೊ
ಉದಧಿಶಯನ ಶ್ರೀ ಪುರಂದರವಿಠಲ
ಮುದದಿಂದ ರಕ್ಷಿಸೊ ಖಗರಾಜ ಗಮನ ೩

## ೨೪೯. ರಾಗಿ ತಂದೀರಾ ಭಿಕ್ಷಕೆ ರಾಗಿ ತಂದೀರಾ

[ ಲೋಕನೀತಿ-ಚತುರೋಕ್ತಿ ]

ರಾಗ: ನಾದನಾಮಕ್ರಿಯೆ ತಾಳ: ಛಾಪು

ರಾಗಿ ತಂದೀರಾ ಭಿಕ್ಷಕೆ ರಾಗಿ ತಂದೀರಾ ಪ.

ಯೋಗ್ಯರಾಗಿ ಭೋಗ್ಯರಾಗಿ ಭಾಗ್ಯವಂತರಾಗಿ ನೀವು ಅ.ಪ.

ಅನ್ನದಾನವ ಮಾಡುವರಾಗಿ
ಅನ್ನ ಛತ್ರವನ್ನಿಟ್ಟವರಾಗಿ
ಅನ್ಯ ವಾರ್ತೆಯ ಬಿಟ್ಟವರಾಗಿ
ಅನುದಿನ ಭಜನೆಯ ಮಾಡುವರಾಗಿ ೧

ಮಾತಾಪಿತೃಗಳ ಸೇವಿಪರಾಗಿ
ಪಾಪ ಕಾರ್ಯವ ಬಿಟ್ಟವರಾಗಿ
ಜಾತಿಯಲಿ ಮಿಗಿಲಾದವರಾಗಿ
ನೀತಿ ಮಾರ್ಗದಲಿ ಖ್ಯಾತರಾಗಿ ೨

ಗುರು ಕಾರುಣ್ಯವ ಪಡೆದವರಾಗಿ
ಗುರುವಿನ ಮರ್ಮವ ತಿಳಿದವರಾಗಿ
ಗುರುವಿನ ಪಾದವ ಸ್ಮರಿಸುವರಾಗಿ
ಪರಮ ಪುಣ್ಯವ ಮಾಡುವರಾಗಿ ೩

ಶ್ರೀನಿವಾಸನ ಸ್ಮರಿಸುವರಾಗಿ
ಪ್ರಾಣರಾಯನ ದಾಸರಾಗಿ
ದಾನಕೆಂದು ಬಲು ಹೆದರಿ ಇಂಥ
ದೀನವೃತ್ತಿಯಲಿ ಹೀನರಾಗಿ ೪

ಪಕ್ಷಮಾಸ ವ್ರತ ಮಾಡುವರಾಗಿ
ಪಕ್ಷಿವಾಹನಗೆ ಪ್ರಿಯರಾಗಿ
ಕುಕ್ಷಿಲಿ ಕಲ್ಮಷ ಇಲ್ಲದವರಾಗಿ
ಭಿಕ್ಷುಕರು ಅತಿ ತುಚ್ಛರಾಗಿ ೫

ವೇದ ಪುರಾಣವ ತಿಳಿದವರಾಗಿ
ಮೇದಿನಿಯಾಳುವಂಥವರಾಗಿ
ಸಾಧು ಧರ್ಮವಾಚರಿಸುವರಾಗಿ
ಓದಿ ಗ್ರಂಥಗಳ ಪಂಡಿತರಾಗಿ ೬

ಆರು ಮಾರ್ಗವ ಅರಿತವರಾಗಿ
ಮೂರು ಮಾರ್ಗವ ತಿಳಿದವರಾಗಿ
ಭೂರಿ ತತ್ತ್ವವ ಬೆರೆದವರಾಗಿ
ಕ್ರೂರರ ಸಂಗವ ಬಿಟ್ಟವರಾಗಿ ೭

ಕಾಮ ಕ್ರೋಧವ ಅಳಿದವರಾಗಿ
ನೇಮ ನಿಷ್ಠೆಗಳ ಮಾಡುವರಾಗಿ
ಆ ಮಹಾಪದವಿಲಿ ಸುಖಿಸುವರಾಗಿ
ಪ್ರೇಮದಿ ಕುಣಿ ಕುಣಿದಾಡುವರಾಗಿ ೮

ಸಿರಿ ರಮಣನ ಸದಾ ಸ್ಮರಿಸುವರಾಗಿ
ಗುರುತಿಗೆ ಬಾಹೋರಂಥವರಾಗಿ
ಕರೆಕರೆ ಸಂಸಾರ ನೀಗುವರಾಗಿ
ಪುರಂದರವಿಠಲನ ಸೇವಿಪರಾಗಿ ೯

---

ದಾಸರು ಭಿಕ್ಷೆಗೆ ಹೊರಟಾಗ, ಒಂದು ಮನೆಯವರು ರಾಗಿಯನ್ನು ತಂದರು. ರಾಗಿಯೂ ಶ್ರೇಷ್ಠವಾದದ್ದೇ. ಈ ನಿಮಿತ್ತ ಮಾಡಿಕೊಂಡು ಆ ಮನೆಯವರನ್ನು ಆಶೀರ್ವದಿಸುತ್ತಾರೆ. ಸದಾಚಾರದ ಬಗೆಯನ್ನು ಬೋಧಿಸುತ್ತಾರೆ. ಪ್ರಾಣರಾಯ-ವಾಯುದೇವರು. ಕುಕ್ಷಿಲಿ ಕಲ್ಮಷ-ಎಂದರೆ ಮನಸ್ಸಿನಲ್ಲಿ ತಾಮಸ ವಿಚಾರಗಳನ್ನು ತಾಳುವುದು.

## ೨೫೦. ರಾಮ ಎಂಬೊ ಎರಡಕ್ಷರದ ಮಹಿಮೆಯನು

[ ಶ್ರೀರಾಮ-ನಾಮ ]

ರಾಗ: ಕಾಂಬೋದಿ ತಾಳ: ಝಂಪೆ

ರಾಮ ಎಂಬೊ ಎರಡಕ್ಷರದ ಮಹಿಮೆಯನು
ಪಾಮರರು ತಾವೇನು ಬಲ್ಲರಯ್ಯ ಪ.

ರಾ ಎಂದ ಮಾತ್ರದೊಳು ರಕ್ತಮಾಂಸದೊಳಿದ್ದ
ಆಯಸ್ತವಾದ ಅತಿ ಪಾಪವನ್ನು
ಮಾಯವನು ಮಾಡಿ ಮಹರಾಯ ಮುಕ್ತಿಯ ಕೊಡುವ
ದಾಯವನು ವಾಲ್ಮೀಕಿ ಮುನಿರಾಯ ಬಲ್ಲ ೧

ಮತ್ತೆ ಮ ಎಂದೆನಲು ಹೊರಬಿದ್ದ ಪಾಪಗಳು
ಒತ್ತಿ ಒಳಪೊಗದಂತೆ ಕವಾಟವಾಗಿ
ಚಿತ್ತಕಾಯಗಳ ಪವಿತ್ರಮಾಡುವ ಪರಿಯ
ಭಕ್ತವರ ಹನುಮಂತನೊಬ್ಬ ತಾ ಬಲ್ಲ ೨

ಧರೆಯೊಳೀ ನಾಮಕ್ಕೆ ಸರಿಮಿಗಿಲು ಇಲ್ಲೆಂದು
ಪರಮ ವೇದಗಳೆಲ್ಲ ಪೊಗಳುತಿಹವು
ಸಿರಿಯರಸ ಪುರಂದರವಿಟ್ಠಲನ ನಾಮವನು
ಸಿರಿ ಕಾಶಿಯೊಳಗಿಪ್ಪ ಶಿವನು ತಾ ಬಲ್ಲ ೩

## ೨೫೧. ರಾಮ ಕೃಷ್ಣರು ಮನೆಗೆ ಬಂದರು

[ ಶ್ರೀಕೃಷ್ಣಲೀಲೆ ]

ರಾಗ: ಜಂಜೂಟಿ ತಾಳ: ಆದಿ

ರಾಮ ಕೃಷ್ಣರು ಮನೆಗೆ ಬಂದರು, ಬಾಗಿಲು ತೆರೆಯಿರೆ ಪ.

ಕಾಮಧೇನು ಬಂದಂತಾಯಿತು ವರವ ಬೇಡಿರೆ ಅ.ಪ.

ಚೆಂಡು ಬುಗುರಿ ಚಿಣ್ಣಿಕೋಲು ಗಜ್ಜುಗವಾಡುತ
ದುಂಡು ಮಲ್ಲಿಗೆ ಮುಡಿದು ಕೊಳಲನೂದಿ ಪಾಡುತ
ಹಿಂಡುವೆಣ್ಗಳ ಮುದ್ದು ಮುಖದ ಸೊಬಗ ನೋಡುತ
ಭಂಡು ಮಾಡಿ ಬಾಲೆಯರೊಡನೆ ಸರಸವಾಡುತ ೧

ಮಕರ ಕುಂಡಲ ನೀಲಮುತ್ತಿನ ಬಾವುಲಿಡುತಲಿ
ಕಂಕಣ ಹಾರ ತೋಳಬಂದಿ ತೊಡಿಗೆ ತೊಡುತಲಿ
ಸುಕುಮಾರ ಸುಂದರವಾದ ಉಡಿಗೆ ಉಡುತಲಿ
ಮುಖದ ಕಮಲ ಮುಗುಳುನಗೆಯ ಸುಖವ ಕೊಡುತಲಿ ೨

ಪೊಕ್ಕುಳಲಿ ಅಜನ ಪಡೆದ ದೇವದೇವನು
ಚಿಕ್ಕ ಅಂಗುಷ್ಠದಲ್ಲಿ ಗಂಗೆಯ ಪಡೆದನು
ಮಕ್ಕಳ ಮಾಣಿಕ್ಯನವ ಪುರಂದರವಿಠಲನು
ಅಕ್ಕರೆಯಿಂದಲಿ ಮುಕುತಿ ಕೊಡುವ ರಂಗನಾಥನು ೩

---

ಬಲರಾಮ ಕೃಷ್ಣರು ಎಂದು ಹೇಳಿದಂತಿದೆ ಆದರೆ ಬಂದದ್ದು ಕೃಷ್ಣನೊಬ್ಬನೇಯೆ? ಏಕೆಂದರೆ ಮುಂದಿನ ವರ್ಣನೆ ಅವನೊಬ್ಬನದೇ ಆಗಿದೆ.

## ೨೫೨. ರಾಮನಾಮ ಪಾಯಸಕ್ಕೆ

**[ ಶ್ರೀಹರಿಸ್ತುತಿ-ಚತುರೋಕ್ತಿ ]**

**ರಾಗ: ಶಂಕರಾಭರಣ** **ತಾಳ: ಛಾಪು**

ರಾಮನಾಮ ಪಾಯಸಕ್ಕೆ ಕೃಷ್ಣನಾಮ ಸಕ್ಕರೆ ಪ

ವಿಠಲನಾಮ ತುಪ್ಪವ ಬೆರೆಸಿ ಬಾಯಿ ಚಪ್ಪರಿಸಿರೊ ಅ.ಪ.

ಒಮ್ಮನ ಗೋಧಿಯ ತಂದು ವೈರಾಗ್ಯ ಕಲ್ಲಲಿ ಬೀಸಿ
ಸುಮ್ಮನ ಸಜ್ಜಿಗೆ ತೆಗೆದು ಸಣ್ಣ ಸೇವಗೆ ಹೊಸೆದು ೧

ಹೃದಯವೆಂಬೊ ಪಾತ್ರೆಯೊಳಗೆ ಭಾವವೆಂಬೊ ಎಸರು ಇಟ್ಟು
ಬುದ್ಧಿಯಿಂದ ಪಕ್ವವ ಮಾಡಿ ಹರಿವಾಣದೊಳಗೆ ನೀಡಿ ೨

ಆನಂದ ಆನಂದವೆಂಬೊ ತೇಗು ಬಂದ ಪರಿಯಲಿ
ಆನಂದಮೂರುತಿ ನಮ್ಮ ಪುರಂದರವಿಠಲನ ನೆನೆಯಿರೊ ೩

---

'ರಾಮನಾಮ' ಎಂಬ ಪಾಯಸ ತಯಾರಿಸಲು, ಏಕಾಗ್ರತೆ (ಒಮ್ಮನ) ಎಂಬ ಗೋದಿಯನ್ನು ವೈರಾಗ್ಯವೆಂಬ ಕಲ್ಲಿನಲ್ಲಿ ಬೀಸಬೇಕು. ಸು-ಮನವೆಂಬ ಸಜ್ಜಿಗೆ ತೆಗೆದು ಅದನ್ನು ಹೃದಯವೆಂಬ ಪಾತ್ರೆಯಲ್ಲಿ ಭಾವವೆಂಬ ಎಸರಿಟ್ಟು ಅದನ್ನು ಬುದ್ಧಿಯಿಂದ ಹಣ್ಣಾಗಿ ಬೇಯಿಸಬೇಕು. ಕೃಷ್ಣನಾಮವೆಂಬ ಸಕ್ಕರೆ, ವಿಟ್ಠಲನಾಮದ ತುಪ್ಪ, ಸೇರಿಸಿ ಹರಿವಾಣದಲ್ಲಿ ಹಾಕಿ... ಎಷ್ಟೊಂದು ಅರ್ಥಪೂರ್ಣವಾದ ಹಾಡು!

## ೨೫೩. ರಾಮನಾಮವ ನುಡಿ ನುಡಿ

[ ಲೋಕನೀತಿ-ಚತುರೋಕ್ತಿ ]

ರಾಗ: ನಾದನಾಮಕ್ರಿಯೆ ತಾಳ: ಆದಿ

ರಾಮನಾಮವ ನುಡಿ ನುಡಿ ಕಾಮಕ್ರೋಧಗಳ ಬಿಡಿ ಬಿಡಿ
ಶ್ರೀರಾಮನಾಮವ ನುಡಿ ನುಡಿ ಪ

ಗುರುಗಳ ಚರಣವ ಹಿಡಿ ಹಿಡಿ
ಹರಿ ನಿರ್ಮಾಲ್ಯವ ಮುಡಿ ಮುಡಿ
ಕರಕರೆ ಭವಪಾಶವ ಕಡಿ ಕಡಿ ಬಂದ
ದುರಿತವನೆಲ್ಲ ಹೊಡಿ ಹೊಡಿ ೧

ಸಜ್ಜನರ ಸಂಗವ ಮಾಡೋ ಮಾಡೋ
ದುರ್ಜನರ ಸಂಗವ ಬಿಡೋ ಬಿಡೋ
ಅರ್ಜುನಸಾರಥಿ ರೂಪ ನೋಡೋ ನೋಡೋ ಹರಿ
ಭಜನೆಯಲಿ ಮನ ಇಡೋ ಇಡೋ ೨

ಕರಿರಾಜವರದನ ಸಾರೋ ಸಾರೋ ಶ್ರಮ
ಪರಿಹರಿಸೆಂದು ಹೋರೋ ಹೋರೋ
ವರದ ಭೀಮೇಶನ ದೂರದಿರೋ ನಮ್ಮ
ಪುರಂದರವಿಠಲನ ಸೇರೋ ಸೇರೋ ೩

## ೨೫೪. ರಾಮ ರಾಮ ರಾಮ ರಾಮ ರಾಮ ಎನ್ನಿರೋ

[ ಶ್ರೀಹರಿಯ ನಾಮಸ್ಮರಣೆ ]

ರಾಗ: ಬಿಲಹರಿ ತಾಳ: ಛಾಪು

ರಾಮ ರಾಮ ರಾಮ ರಾಮ ರಾಮನೆನ್ನಿರೋ
ರಾಮ ರಾಮವೆಂಬ ನಾಮ ಮನದಿ ನೆನೆಯಿರೊ ಪ.

ಇಂದ್ರಿಯಂಗಳೆಲ್ಲ ಕೂಡಿಬಂದು ತನ್ನ ಮುಸುಕಿದಾಗ
ಸಿಂಧುಸುತಾಪತಿಯ ಧ್ಯಾನ ಅಂದಿಗೆ ಒದಗಲರಿಯದು ೧

ಭರದಿ ಯಮನ ಭಟರು ಬಂದು ಹೊರಡು ಎಂದು ಮೆಟ್ಟಲು
ಕೊರಳಿಗಾತ್ಮ ಸೇರಿದಾಗ ಹರಿಯ ಧ್ಯಾನ ದೊರೆಯದಯ್ಯ ೨

ಕಾಸ ಶ್ವಾಸದಲ್ಲಿ ಸಿಲುಕಿ ದೋಷಬಲಿದು ಹೋಗುವಾಗ
ವಾಸುದೇವನೆಂಬ ನಾಮ ವದನದಲ್ಲಿ ಒದಗದಯ್ಯ ೩

ಸಿಂಗಾರವಾದ ದೇಹ ತಂಗಿ ಬಿಟ್ಟು ಪೋಗುವಾಗ
ಕಂಗಳಿಗಾತ್ಮ ಸೇರಿದಾಗ ರಂಗನ ಧ್ಯಾನ ದೊರಕದಯ್ಯ ೪

ಕಷ್ಟ ಜನ್ಮದಲ್ಲಿ ಬಂದು ದುಷ್ಟ ಕರ್ಮಗಳನು ಮಾಡಿ
ಬಿಟ್ಟು ಹೋಗುವಾಗ ಪುರಂದರವಿಟ್ಠಲನ ನೆನೆ ಮನವೆ ೫

---

ಈ ಹಾಡಿನ ಪಲ್ಲವಿ ಮಾತ್ರ ಇಟ್ಟುಕೊಂಡು ಉಳಿದದ್ದೆಲ್ಲ ಬೇರೆಯಾಗಿಯೇ ರಚಿಸಿದ ಪಠ್ಯವೊಂದಿದೆ. ನಾವು ಆಯ್ದುಕೊಂಡದ್ದು ಎರಡು ಸಂಗ್ರಹಗಳಲ್ಲಿ ಬಂದದ್ದನ್ನು.

## ೨೫೫. ರಾಮ ಮಂತ್ರವ ಜಪಿಸೊ

[ ಶ್ರೀರಾಮ-ನಾಮ ]

ರಾಗ: ಮಧ್ಯಮಾವತಿ ತಾಳ: ಆದಿ

ರಾಮ ಮಂತ್ರವ ಜಪಿಸೊ ಏ ಮನುಜಾ
ರಾಮ ಮಂತ್ರವ ಜಪಿಸೊ ಪ.

ಆ ಮಂತ್ರ ಈ ಮಂತ್ರ ನೆಚ್ಚಿ ನೀ ಕೆಡಬೇಡ
ಸೋಮಶೇಖರ ತನ್ನ ಸತಿಗೆ ಪೇಳಿದ ಮಂತ್ರ ಅ.ಪ.

ಕುಲಹೀನನಾದರು ಕೂಗಿ ಜಪಿಸುವ ಮಂತ್ರ
ಜಲಜಪಾಣಿ ನಿತ್ಯ ಜಪಿಪ ಮಂತ್ರ
ಕಲುಷಪರ್ವತಕಿದು ಕುಲಿಶವಾಗಿಹ ಮಂತ್ರ
ಸುಲಭದಿಂದಲಿ ಮೋಕ್ಷ ಸೂರೆಗೊಂಬುವ ಮಂತ್ರ ೧

ಸ್ನಾನ ಮೌನಂಗಳಿಗೆ ಸಾಧನದ ಮಂತ್ರ
ಜ್ಞಾನಿಗಳು ಮನದಿ ಧ್ಯಾನಿಪ ಮಂತ್ರ
ಹೀನಗುಣಂಗಳ ಹಿಂಗಿಸುವ ಮಂತ್ರ
ಏನೆಂಬೆ ವಿಭೀಷಣಗೆ ಪಟ್ಟಗಟ್ಟಿದ ಮಂತ್ರ ೨

ಸಕಲ ವೇದಂಗಳಿಗೆ ಸಾರವೆನಿಪ ಮಂತ್ರ
ಮುಕುತಿ ಮಾರ್ಗಕೆ ಇದೇ ಮೂಲಮಂತ್ರ
ಭಕುತಿರಸಕೆ ಬಟ್ಟೆ ಒಮ್ಮೆ ತೋರುವ ಮಂತ್ರ
ಸುಖನಿಧಿ ಪುರಂದರವಿಠಲನ ಮಹಾ ಮಂತ್ರ ೩

## ೨೫೬. ರೊಕ್ಕ ಎರಡಕ್ಕು ದುಃಖ ಕಾಣಕ್ಕ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಪಂತುವರಾಳಿ ತಾಳ: ಅಟ್ಟ

ರೊಕ್ಕ ಎರಡಕ್ಕು ದುಃಖ ಕಾಣಕ್ಕ ಪ.

ಮಕ್ಕಳ ಮರಿಗಳ ಮಾಡೋದು ರೊಕ್ಕ
ಸಕ್ಕರೆ ತುಪ್ಪವ ತಿನಿಸೋದು ರೊಕ್ಕ
ಕಕ್ಕುಲಾತಿಯನು ಬಿಡಿಸೋದು ರೊಕ್ಕ
ಘಕ್ಕನೆ ಹೋದರೆ ಘಾತ ಕಾಣಕ್ಕ ೧

ನೆಂಟರ ಇಷ್ಟರ ಮರೆಸೋದು ರೊಕ್ಕ
ಕಂಟಕಗಳ ಪರಿಹರಿಸೋದು ರೊಕ್ಕ
ಗಂಟು ಕಟ್ಟಲಿಕೆ ಕಲಿಸೋದು ರೊಕ್ಕ
ತುಂಟತನಗಳನು ಬಲಿಸೋದು ರೊಕ್ಕ ೨

ಇಲ್ಲದ ಗುಣಗಳ ತರಿಸೋದು ರೊಕ್ಕ
ಸಲ್ಲದ ನಾಣ್ಯವ ನಡಿಸೋದು ರೊಕ್ಕ
ಬೆಲ್ಲಕ್ಕಿಂತಲು ಬಹು ಸವಿ ರೊಕ್ಕ
ಇಲ್ಲದಿರಲು ಬಹು ದುಃಖ ಕಾಣಕ್ಕ ೩

ಉಂಟಾದ ಗುಣಗಳ ಮರೆಸೋದು ರೊಕ್ಕ
ಬಂಟರನೆಲ್ಲರ ಬರಿಸೋದು ರೊಕ್ಕ
ಕಂಠಿ ಸರಿಗೆಯನು ಗಳಿಸೋದು ರೊಕ್ಕ
ಒಂಟೆ ಕುದುರೆ ಆನೆ ತರಿಸೋದು ರೊಕ್ಕ ೪

ವಿದ್ಯದ ಮನುಜರ ಕರೆಸೋದು ರೊಕ್ಕ
ಹೊದ್ದಿದ ಜನರನು ಬಿಡಿಸೋದು ರೊಕ್ಕ
ಮುದ್ದು ಪುರಂದವಿಠಲನ ಮರೆಸುವ
ಬಿದ್ದು ಹೋಗೋ ರೊಕ್ಕವ ಸುಡು ನೀನಕ್ಕ ೫

## ೨೫೭. ಲಂಗೋಟಿ ಬಲು ಒಳ್ಳೆದಣ್ಣ

[ ಲೋಕನೀತಿ-ಚತುರೋಕ್ತಿ ]

ರಾಗ: ನಾದನಾಮಕ್ರಿಯ ತಾಳ: ಅಟ್ಟ

ಲಂಗೋಟಿ ಬಲು ಒಳ್ಳೆದಣ್ಣ ಒಬ್ಬರ
ಹಂಗಿಲ್ಲದಂತೆ ಆಚಾರಕ್ಕೆ ಒದಗುವ ಪ.

ಬಡವರಿಗಾಧಾರವಣ್ಣ ಈ ಲಂಗೋಟಿ
ಬೈರಾಗಿಗಳ ಭಾಗ್ಯವಣ್ಣ
ಕಡು ಕಳ್ಳರಿಗೆ ಗಂಡ, ಮಡಿ ಧೋತ್ರಗಳ ಮಿಂಡ
ನಡುಗುವ ಸಮಯಕ್ಕೆ ಮಡಿಗೆ ಒದಗುವಂಥ ೧

ಜಿತ ಮನ ಸನ್ಯಾಸಿಗಳಿಗಿದೆ ಕೌಪೀನ
ವ್ರತವುಳ್ಳ ಬ್ರಹ್ಮಚಾರಿಗೆ ಮುಖ್ಯವು
ಅತಿಶಯವಿದು ಆಂಜನೇಯ ನಾರದರಿಗೆ
ಗತಿಯಿಲ್ಲದವರಿಗೆ ಮಿತವಾಗಿ ಇರುವಂಥ ೨

ದುಡ್ಡು ಮುಟ್ಟದಂತೆ ದೊರಕುವ ವಸ್ತುವು
ದೊಡ್ಡ ಅರಣ್ಯದಿ ಭಯವಿಲ್ಲವು
ಹೆಡ್ಡರೆಂಬುವರೇನೊ ಲಂಗೋಟಿ ಜನರನ್ನು
ದೊಡ್ಡವರೆಂದು ವಂದಿಸುವರು ಯತಿಗಳ ೩

ಮೋಕ್ಷಮಾರ್ಗಕೆ ಕಲ್ಪವೃಕ್ಷವೀ ಲಂಗೋಟಿ
ಭಿಕ್ಷಗಾರರಿಗೆಲ್ಲ ಅನುಕೂಲವು
ತತ್‌ಕ್ಷಣದೊಳಗೆ ಕಾರ್ಯಗಳ ತೂಗಿಸಿ ಮಾನ
ರಕ್ಷಣೆಗೆ ಬಹು ರಮ್ಯವಾಗಿರುವಂಥ ೪

ಮಡಿವಾಳರಿಗೆ ಶತ್ರು ಮಠದಯ್ಯಗಳ ಮಿತ್ರ
ಪೊಡವಿಯೊಳ್ ಯಾಚಕರಿಗೆ ನೆರವು
ದೃಢಭಕ್ತ ಬಲಿಚಕ್ರವರ್ತಿಗೋಸ್ಕರ ನಮ್ಮ
ಒಡೆಯ ಶ್ರೀ ಪುರಂದರವಿಠಲ ಧರಿಸಿದಂಥ ೫

---

ಲಂಗೋಟಿಯು ಮನುಷ್ಯನ ಅತ್ಯಂತ ಕನಿಷ್ಠ ಬೇಕಾದ ವಸ್ತು. ಆದರೆ ಅದನ್ನು ಧರಿಸಿದವನನ್ನು ಕಂಡರೆ ಕೆಲವರಿಗೆ ಆಗದು. ವಾಮನ ರೂಪದ ಭಗವಂತನೂ ಇದನ್ನು ಧರಿಸಿದ್ದ.
ಮಠದಯ್ಯಗಳು-ಸ್ವಾಮಿಗಳು

## ೨೫೮. ಲಾಲಿಸಿದಳು ಮಗನ ಯಶೋದೆ

[ ಶ್ರೀಕೃಷ್ಣಲೀಲೆ ]

ರಾಗ: ಆರಭಿ ತಾಳ: ಆದಿ

ಲಾಲಿಸಿದಳು ಮಗನ ಯಶೋದೆ ಲಾಲಿಸಿದಳು ಮಗನ ಪ.

ಆರಳೆಲೆ ಮಾಗಾಯಿ ಬೆರಳಿಗುಂಗುರವಿಟ್ಟು
ತರಳನ ಮೈಸಿರಿ ತರುಣಿ ನೋಡುತ ಹಿಗ್ಗಿ ೧

ಬಾಲಕನೆ ಕೆನೆ ಹಾಲು ಮೊಸರನೀವೆ
ಲೀಲೆಯಿಂದಲಿ ಎನ್ನ ತೋಳ ಮೇಲ್ಮಲಗೆಂದು ೨

ಮುಗುಳು ನಗೆಯಿಂದ ಮುದ್ದು ತಾ ತಾರೆಂದು
ಜಗದೊಡೆಯನ ಶ್ರೀ ಪುರಂದರವಿಠಲನ ೩

## ೨೫೯. ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ

[ ಲೋಕನೀತಿ ]

ರಾಗ: ಪೂರ್ವಿಕಲ್ಯಾಣಿ ತಾಳ: ಅಟ್ಟ

ಲೊಳಲೊಟ್ಟೆ ಎಲ್ಲಾ ಲೊಳಲೊಟ್ಟೆ ಪ.

ಆನೆ ಕುದುರೆ ಒಂಟೆ ಲೊಳಲೊಟ್ಟೆ ಬಹು
ಸೇನೆ ಭಂಡಾರವು ಲೊಳಲೊಟ್ಟೆ
ಮಾನಿನಿಯರ ಸಂಗ ಲೊಳಲೊಟ್ಟೆ ದೊಡ್ಡ
ಕ್ಷೋಣೇಶನೆಂಬುದು ಲೊಳಲೊಟ್ಟೆ ೧

ಮುತ್ತು ಮಾಣಿಕ್ಯ ಲೊಳಲೊಟ್ಟೆ ಚಿನ್ನ
ಛತ್ರ ಚಾಮರ ಧ್ವಜ ಲೊಳಲೊಟ್ಟೆ
ಸುತ್ತಗಲಕೋಟೆ ಲೊಳಲೊಟ್ಟೆ
ಮತ್ತೆ ಉತ್ತಮ ಪ್ರಭುತ್ವ ಲೊಳಲೊಟ್ಟೆ ೨

ಕಂಟಕರೆಂಬೋರು ಲೊಳಲೊಟ್ಟೆ ನಿನ್ನ
ನೆಂಟರು ಇಷ್ಟರು ಲೊಳಲೊಟ್ಟೆ
ಉಂಟಾದ ಗುಣನಿಧಿ ಪುರಂದರವಿಠಲನ
ಬಂಟನಾಗದವ ಲೊಳಲೊಟ್ಟೆ ೩

---

ಲೊಳಲೊಟ್ಟೆ ಎಂದರೆ ಟೊಳ್ಳು, ವ್ಯರ್ಥವಾದದ್ದು. ವೈಭವದ ವಸ್ತುಗಳೇನೆ ಇರಲಿ; ಅದೆಲ್ಲ ವ್ಯರ್ಥ-ಎನ್ನುತ್ತಾರೆ ದಾಸರು.

## ೨೬೦. ವೃಂದಾವನದೊಳಗಾಡುವನ್ಯಾರೆ

[ ಶ್ರೀಕೃಷ್ಣಲೀಲೆ ]

ರಾಗ: ಮಧ್ಯಮಾವತಿ ತಾಳ: ಆದಿ

ವೃಂದಾವನದೊಳಗಾಡುವನ್ಯಾರೆ ಗೋಪಿ
ಚಂದಿರವದನೆ ನೋಡುವ ಬಾರೆ ಪ.

ಅರುಣಪಲ್ಲವ ಪಾದಯುಗಳನೆ ದಿವ್ಯ
ಮರಕತ ಮಂಜುಳಾಭರಣನೆ
ಸಿರಿವರ ಯದುಕುಲ ಸೋಮನೆ ಇಂಥ
ಪರಿಪೂರ್ಣ ಕಾಮ ನಿಸ್ಸೀಮನೆ ೧

ಹಾರಹೀರ ಗುಣಧಾರನೆ ದಿವ್ಯ
ಸಾರ ಶರೀರ ಶೃಂಗಾರನೆ
ಆರಿಗಾದರು ಮನದೂರನೆ ತನ್ನ
ಸೇರಿದವರ ಮಾತ ಮೀರನೆ ೨

ಮಕರಕುಂಡಲ ಕಾಂತಿಭರಿತನೆ ದಿವ್ಯ
ಅಕಳಂಕ ರೂಪ ಲಾವಣ್ಯನೆ
ಸಕಲರೊಳಗೆ ದೇವನೀತನೆ ನಮ್ಮ
ಮುಕುತೀಶ ಪುರಂದರವಿಠಲನೆ ೩

## ೨೬೧. ವೃಂದಾವನವೇ ಮಂದಿರವಾಗಿಹ ಇಂದಿರೆ ಶ್ರೀ ತುಳಸಿ

**[ ತುಳಸೀದೇವಿ ]**

**ರಾಗ: ಸೌರಾಷ್ಟ್ರ** **ತಾಳ: ಛಾಪು**

ವೃಂದಾವನವೇ ಮಂದಿರವಾಗಿಹ ಇಂದಿರೆ ಶ್ರೀ ತುಳಸಿ ಪ.

ನಂದನಂದನ ಮುಕುಂದಗೆ ಪ್ರಿಯಳಾದ ಚಂದದ ಶ್ರೀ ತುಳಸಿ ಅ.ಪ.

ತುಳಸಿವನದಲಿ ಹರಿ ಇಹನೆಂಬುದ ಶ್ರುತಿ ಸಾರುತಿದೆ ಕೇಳಿ
ತುಳಸಿ ದರ್ಶನದಿಂದ ದುರಿತಗಳೆಲ್ಲವು ದೂರವಾಗುವವು ಕೇಳಿ
ತುಳಸಿ ಸ್ಪರ್ಶವ ಮಾಡೆ ದೇಹ ಪಾವನವೆಂದು ತಿಳಿದುದಿಲ್ಲವೆ ಪೇಳಿ
ತುಳಸಿ ಸ್ಮರಣೆ ಮಾಡಿ ಸಕಲೇಷ್ಟವ ಪಡೆದು ಸುಖದಲಿ ನೀವು ಬಾಳಿ ೧

ಮೂಲಮೃತ್ತಿಕೆಯನು ಮುಖದಲಿ ಧರಿಸಲು ಮೂರ್ಲೋಕವಶವಹುದು
ಮಾಲೆ ಕೊರಳಲಿಟ್ಟ ಮನುಜಗೆ ಮುಕ್ತಿಯ ಮಾರ್ಗವು ತೋರುವುದು
ಕಾಲಕಾಲಗಳಲ್ಲಿ ಮಾಡುವ ದುಷ್ಕರ್ಮ ಕಳೆದು ಬಿಸಾಡುವುದು
ಕಾಲನ ದೂತರ ಕಳಚಿ ಕೈವಲ್ಯದ ಲೀಲೆಯ ತೋರುವುದು ೨

ಧರೆಯೊಳು ಸುಜನರ ಮರೆಯದೆ ಸಲಹುವ ವರಲಕ್ಷ್ಮಿ ಶ್ರೀ ತುಳಸಿ
ಪರಮಭಕ್ತರ ಘೋರ ಪಾಪಗಳನು ತರಿದು ಪಾವನಮಾಡುವ ತುಳಸಿ
ಸಿರಿ ಆಯು ಪುತ್ರಾದಿ ಸಂಪದಗಳನಿತ್ತು ಹರುಷಗೊಳಿಪ ತುಳಸಿ
ಪುರಂದರವಿಠಲನ ಚರಣ ಕಮಲಗಳ ಸ್ಮರಣೆ ಕೊಡುವ ತುಳಸಿ ೩

## ೨೬೨. ವೆಂಕಟರಮಣನೆ ಬಾರೊ

[ ತಿರುಪತಿಯ ಶ್ರೀನಿವಾಸ ]

ರಾಗ: ಶಂಕರಾಭರಣ ತಾಳ:ಅಟ್ಟ

ವೆಂಕಟರಮಣನೆ ಬಾರೊ ಶೇಷಾಚಲವಾಸನೆ ಬಾರೊ
ಪಂಕಜನಾಭ ಪರಮ ಪವಿತ್ರ ಶಂಕರಮಿತ್ರನೆ ಬಾರೊ ಪ.

ಮುದ್ದು ಮುಖದ ಮಗುವೆ ನಿನಗೆ ಮುದ್ದು ಕೊಡುವೆನು ಬಾರೊ
ನಿರ್ದಯವೇಕೋ ನಿನ್ನೊಳಗೆ ನಾನು ಪೊಂದಿದ್ದೇನು ಬಾರೊ ೧

ಮಂದರಗಿರಿಯನೆತ್ತಿದಾನಂದ ಮೂರ್ತಿಯೆ ಬಾರೊ
ನಂದನ ಕಂದ ಗೋವಿಂದ ಮುಕುಂದ ಇಂದಿರೆಯರಸನೆ ಬಾರೊ ೨

ಕಾಮನಯ್ಯ ಕರುಣಾಳೊ ಶ್ಯಾಮಲವರ್ಣನೆ ಬಾರೊ
ಕೋಮಲಾಂಗ ಶ್ರೀ ಪುರಂದರವಿಠಲನೆ ಸ್ವಾಮಿರಾಯನೆ ಬಾರೊ ೩

## ೨೬೩. ವೇಂಕಟಾಚಲನಿಲಯಂ ವೈಕುಂಠಪುರವಾಸಂ

[ ತಿರುಪತಿಯ ಶ್ರೀನಿವಾಸ-ಸಂಸ್ಕೃತ ]

ರಾಗ: ಸಿಂಧುಭೈರವಿ ತಾಳ: ಆದಿ

ವೇಂಕಟಾಚಲನಿಲಯಂ ವೈಕುಂಠಪುರವಾಸಂ
ಪಂಕಜನೇತ್ರಂ ಪರಮಪವಿತ್ರಂ
ಶಂಖಚಕ್ರಧರ ಚಿನ್ಮಯರೂಪಂ ಪ

ಅಂಬುಜೋದ್ಭವ ವಿನುತಂ ಅಗಣಿತಗುಣನಾಮಂ
ತುಂಬುರುನಾರದ ಗಾನವಿಲೋಲಂ
ಅಂಬುಧಿಶಯನಂ ಆತ್ಮಾಭಿರಾಮಂ ೧

ನೌಮಿ ಪಾಂಡವ ಪಕ್ಷಂ ಕೌರವಮದಹರಣಂ
ಬಾಹು ಪರಾಕ್ರಮಪೂರ್ಣಂ
ಅಹಲ್ಯಾಶಾಪ ಭಯನಿವಾರಣಂ ೨

ಸಕಲ ವೇದ ವಿಚಾರಂ ಸರ್ವಜೀವ ನಿಕರಂ
ಮಕರಕುಂಡಲಧರ ಮದನಗೋಪಾಲಂ
ಭಕ್ತ ಪೋಷಕ ಶ್ರೀಪುರಂದರವಿಠಲಂ ೩

## ೨೬೪. ವೇಣುನಾದ ಬಾರೋ

[ ಶ್ರೀಕೃಷ್ಣಲೀಲೆ ]

ರಾಗ: ಶಂಕರಾಭರಣ ತಾಳ: ಆದಿ

ವೇಣುನಾದ ಬಾರೋ ಶ್ರೀ ವೆಂಕಟರಮಣನೆ ಬಾರೊ
ಬಾಣನ ಭಂಗಿಸಿದಂಥ ಭಾವಜನಯ್ಯನೆ ಬಾರೋ ಪ.

ಪೂತನಿಯ ಮೊಲೆಯುಂಡ ನವನೀತ ಚೋರನೆ ಬಾರೋ
ಭೀತ ರಾವಣನ ಸಂಹರಿಸಿದ ಸೀತಾನಾಯಕ ಬಾರೋ ೧

ಬಿಲ್ಲ ಮುರಿದು ಮಲ್ಲರ ಗೆದ್ದ ಫುಲ್ಲನಾಭನೆ ಬಾರೋ
ಗೊಲ್ಲತೇರೊಡನೆ ನಲಿವ ಚೆಲುವ ಮೂರುತಿ ಬಾರೋ ೨

ಮಂದರಗಿರಿ ಎತ್ತಿದಂಥ ಇಂದಿರೆ ರಮಣನೆ ಬಾರೋ
ಕುಂದದೆ ಗೋವುಗಳ ಕಾಯಿದ ಪುಂಡರೀಕಾಕ್ಷನೆ ಬಾರೋ ೩

ನಾರಿಯರ ಮನೆಗೆ ಪೋಗುವ ವಾರಿಜನಾಭನೆ ಬಾರೋ
ಈರೇಳು ಭುವನವ ಕಾಯುವ ಮಾರನಯ್ಯನೆ ಬಾರೋ ೪

ಶೇಷಶಯನ ಮೂರುತಿಯಾದ ವಾಸುದೇವನೆ ಬಾರೋ
ದಾಸರೊಳು ದಾಸನಾದ ಪುರಂದರವಿಠಲ ಬಾರೋ ೫

## ೨೬೫. ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ

[ ಲೋಕನೀತಿ ]

ರಾಗ: ಪೂರ್ವಕಲ್ಯಾಣಿ ತಾಳ: ಆದಿ

ವ್ಯರ್ಥವಲ್ಲವೆ ಜನ್ಮ ವ್ಯರ್ಥವಲ್ಲವೆ ಪ.

ಅರ್ಥಿಯಿಂದ ಹರಿಯ ನಾಮ
ನಿತ್ಯ ಸ್ಮರಿಸದವನ ಜನ್ಮ ಅ.ಪ.

ಹರಿಯ ಸೇವೆ ಮಾಡದವನ
ಹರಿಯ ಗುಣಗಳೆಣಿಸದವನ
ಹರಿಯ ಕೊಂಡಾಡದವನ
ಹರಿಯ ತಿಳಿಯದವನ ಜನ್ಮ ೧

ದಾಸರೊಡನಾಡದವನ
ದಾಸರೊಡನೆ ಪಾಡದವನ
ದಾಸರ ಕೊಂಡಾಡದೆ ಹರಿ
ದಾಸನಾಗದವನ ಜನ್ಮ ೨

ಒಂದು ಶಂಖ ಉದಕ ತಂದು
ಚಂದದಿಂದ ಹರಿಗೆ ಅರ್ಪಿಸಿ
ತಂದೆ ಪುರಂದರವಿಟ್ಠಲನ್ನ
ಹೊಂದಿ ನೆನೆಯದವನ ಜನ್ಮ ೩

## ೨೬೬. ವ್ಯಾಸರಾಯರ ಚರಣಕಮಲ ದರುಶನವೆನಗೆ

[ಶ್ರೀ ವ್ಯಾಸರಾಯರು]

ಧ್ರುವ ಸುಳಾದಿ

ವ್ಯಾಸರಾಯರ ಚರಣಕಮಲ ದರುಶನವೆನಗೆ
ಯೇಸು ಜನ್ಮದ ಸುಕೃತ ಫಲದಿ ದೊರಕಿತೊ ಎನ್ನ
ಸಾಸಿರ ಕುಲಕೋಟಿಪಾವನ್ನವಾಯಿತು
ಶ್ರೀಶನ ಭಜಿಸುವದಧಿಕಾರಿ ನಾನಾದೆ
ದೋಷ ವಿರಹಿತನಾದ ಪುರಂದರವಿಠಲನ್ನ
ದಾಸರ ಕರುಣವು ಯೆನಮ್ಯಾಲೆ ಇರಲಾಗಿ ೧

ಮಟ್ಟೆ

ಗುರುವುಪದೇಶವಿಲ್ಲದಾ ಮಂತ್ರ
ಗುರುವುಪದೇಶವಿಲ್ಲದಾ ಭಕ್ತಿ
ಗುರುವುಪದೇಶವಿಲ್ಲದಾ ಕ್ರಿಯೆಗಳು
ಉರಗನ ಉಪವಾಸದಂತೆ ಕಾಣಿರೋ
ಗುರುವ್ಯಾಸರಾಯರ ವರವೆಂದೆನಿಸಿ
ವರಮಹಾಮಂತ್ರವುಪದೇಶವಾಗಿ
ಪುರಂದರವಿಠಲ ಪರನೆಂದೆನಿಸಿ
ದುರಿತ ಭಯಗಳೆಲ್ಲ ಪರಿಹರಿಸಿದನಾಗಿ ೨

ರೂಪಕ

ಅಂಕಿತವಿಲ್ಲದ ದೇಹ ನಿಷಿದ್ಧ
ಅಂಕಿತವಿಲ್ಲದ ಕಾಯ ಶೋಭಿಸದು
ಅಂಕಿತವಿಲ್ಲದೆ ಇರಬಾರದೆಂದು ಎನಗೆ ಚ-
ಕ್ರಾಂಕಿತವನು ಮಾಡಿಯೆನಗೆ
ಪಂಕಜನಾಭ ಪುರಂದರವಿಠಲನ್ನ
ಅಂಕಿತವೆನಗಿತ್ತ ಗುರುವ್ಯಾಸ ಮುನಿರಾಯ ೩

ಝಂಪೆ

ನ್ಯಾಯಾಮೃತ ತರ್ಕತಾಂಡವ ಚಂದ್ರಿಕೆ ಮೊದಲಾದ
ನ್ಯಾಯಗ್ರಂಥಗಳ ರಚಿಸಿ ತನ್ನಯ ಭಕ್ತರಿಗಿತ್ತೆ
ಮಾಯಾವಾದಿ ಮೊದಲಾದ ಇಪ್ಪತ್ತೊಂದು ಕುಭಾಷ್ಯದವರಾ
ಬಾಯ ಮುಚ್ಚಿಸಿದೆ ಮಧ್ವರಾಯರ ಕರುಣದಿಂದ ಸಿ-
ರಿಯರಸ ಪುರಂದರವಿಠಲನ್ನ ಭಕ್ತರೊಳು
ನಾಯಕನೆನಿಸಿಕೊಂಡೆ ರಾಯ ಗುರುವ್ಯಾಸಮುನಿಯೆ ೪

ತ್ರಿವಿಡೆ

ಶೇಷಾವೇಷ ಪ್ರಹ್ಲಾದನವತಾರನೆನಿಸಿದೆ
ವ್ಯಾಸರಾಯರೆಂಬೊ ಪೆಸರು ನೀನಾಂತೆ
ದೇಶಾಧಿಪಗೆ ಬಂದ ಕುಹುಯೋಗವನು ನೂಕಿ ನೀ ಸಿಂ
ಹಾಸನವೇರಿ ಮೆರೆದೆ ಜಗವರಿಯೆ
ವ್ಯಾಸಾಬ್ಧಿಯನೆ ಕಟ್ಟಿಸಿ ದೇಶದಾವೊಳಗೆಲ್ಲ
ಭೂಸುರ ಕೀರ್ತಿಯನು ಪಡೆದೆ ಗುರುರಾಯಾ
ವಾಸುದೇವ ಪುರಂದರ ವಿಠಲನ್ನ ದಾಸರೊಳು ಹೆಗ್ಗಳಯೆನಿಸಿಕೊಂಡೆ ೫

ಅಟ್ಟ

ಶ್ರೀನಾರಾಯಣ ಯೋಗಿಯಾದ ಶ್ರೀಪಾದರಾಯರೊಳು
ವಿಹಿತವಾದ ವಿದ್ಯಾಭ್ಯಾಸವ ಮಾಡಿದೆ
ನೀನು ಧರೆಯೊಳು ವಿಜಯೀಂದ್ರವಾದಿರಾಜರೆಂಬೊ
ಪರಮಶಿಷ್ಯರ ಪಡೆದು ಮೆರೆದೆ ಕೀರ್ತಿಯ
ಯೆಲ್ಲ ಸುರೇಂದ್ರ ಪುತ್ರಭಿಕ್ಷವಬೇಡಿ ವಿಜಯೀಂದ್ರನ
ಕರುಣಿಸಿದವನನುದ್ಧರಿಸಿದ ಕಾರಣ
ಗುರುವ್ಯಾಸರಾಯರು ಪರಮಗುರುಗಳು
ಪುರಂದರವಿಠಲನೆ ಪರದೈವ ಕಾಣರೊ ೬

ಆದಿ

ಮಾನಸಪೂಜೆಯ ಮಾಡಿ
ದಾನವಾಂತಕ ರಂಗನ್ನ ಮೆಚ್ಚಿ
ತಾನೆ ಬಂದು ಗೋಪಾಲಕೃಷ್ಣನ
ಯೇನೆಂದು ಧ್ಯಾನಿಪೆನೊ
ಯೇನೆಂದು ಪೇಳುವೆ ನಿಮ್ಮ ಮಹಿಮೆಯ
ಜ್ಞಾನಿಗಳರಸ ವ್ಯಾಸ ಮುನಿರಾಯಾ
ಹೀನ ಜನರು ನಿನ್ನ ಮಾನವನೆಂದು
ನಾನಾ ನರಕಕೆ ಉರುಳುವರು

ಶ್ರೀನಿವಾಸ ಪುರಂದರವಿಠಲನು
ಆನಂದದಿಂದಲಿ ನಿನ್ನ ಮುಂದೆ
ಗಾನವ ಮಾಡುತ್ತ ಆಡುತ್ತಲಿಪ್ಪನು
ಯೇನು ಮಹಿಮೆಯೋ ದಾವ ಬಲ್ಲನೊ ೭

ಏಕ

ಈಸು ಮುನಿಗಳಿದ್ದೇನು ಮಾಡಿದರು ನಮ್ಮ
ವ್ಯಾಸಮುನಿ ಮಧ್ವಮತವನುದ್ಧರಿಸಿ
ಕಾಶಿಗದಾಧರಮಿಶ್ರನ ಸೋಲಿಸಿ
ದಾಸನ ಮಾಡಿಕೊಂಡ ಧಾರುಣಿಯೊಳಗೆ
ಕಾಶಿಮಿಶ್ರ ಪಕ್ಷಧರ ವಾಸುದೇವಾ
ವಾಲಿಲೇಯ ನಾರಸಿಂಹ ಯೋಗಿ ಲಿಂಗಣ
ಮಿಶ್ರನೇ ಮೊದಲಾದ ವಿದ್ವಾಂಸರು
ನೂರೆಂಟು ಜಯ ಜಯ ಪತ್ರಿಕೆಯನ್ನು
ವಾಸುದೇವ ಗೋಪಾಲಕೃಷ್ಣನಿಗೆ
ಭೂಷಣವ ಮಾಡಿ ಹಾರಿಸಿದೆ
ಶ್ರೀಶಾ ಪುರಂದರವಿಟ್ಠಲನೆ
ಈಶಯೆಂದಾ ಬ್ರಹ್ಮಾದಿಗಳಿಗೆ
ಈಶನೆಂದು ಡಂಗುರ ಹೊಯ್ಸಿ ಮೆರೆದೆ ಜಗದೊಳಗೆ ೮

ಜತೆ

ಗುರುವ್ಯಾಸರಾಯರ ಕರುಣ ಕಟಾಕ್ಷದಿ
ಪುರಂದರ ವಿಟ್ಠಲನ್ನ ಚರಣವ ಕಂಡೆ ನಾ

## ೨೬೭. ಶರಣು ಶರಣು ನಿನಗೆಂಬೆನೊ ವಿಠಲ

[ ಶ್ರೀಹರಿ ಸ್ತುತಿ ]

ರಾಗ: ಮಧ್ಯಮಾವತಿ	ತಾಳ: ಆದಿ

ಶರಣು ಶರಣು ನಿನಗೆಂಬೆನೊ ವಿಠಲ ಪ.

ಕರುಣಾನಿಧಿಯೆಂಬೆ ಕಾಯಯ್ಯ ವಿಠಲ ಅ.ಪ.

ಶಿಶುವಾಗಿ ಜನಿಸಿದ್ಯೊ ಶ್ರೀರಾಮವಿಠಲ
ಶಶಿಧರನುತ ಗೋಪಿಕಂದನೆ ವಿಠಲ
ಅಸುರೆ ಪೂತನಿ ಕೊಂದ ಶ್ರೀಕೃಷ್ಣವಿಠಲ
ಕುಸುಮನಾಭ ಸಿರಿವರ ಮುದ್ದುವಿಠಲ ೧

ಅರಸಿ ರುಕ್ಮಿಣಿಗೆ ನೀ ಅರಸನೊ ವಿಠಲ
ಸರಸಿಜ ಸಂಭವ ಸನ್ನುತ ವಿಠಲ
ನಿರುತ ಇಟ್ಟಿಗೆ ಮೇಲೆ ನಿಂತ್ಯೊ ನೀ ವಿಠಲ
ಚರಣ ಸೇವೆಯನಿತ್ತು ಕಾಯಯ್ಯ ವಿಠಲ ೨

ಕಂಡೆ ಗೋಪುರ ವೆಂಕಟ ಪ್ರಭು ವಿಠಲ
ಅಂಡಜವಾಹನ ಹೌದೊ ನೀ ವಿಠಲ
ಪಾಂಡುನಂದನ ಪರಿಪಾಲನೆ ವಿಠಲ
ಪುಂಡರೀಕಾಕ್ಷ ಶ್ರೀ ಪುರಂದರ ವಿಠಲ ೩

---

ಪಂಢರಪುರದ ವಿಟ್ಠಲನ ನಿಮಿತ್ತದಿಂದ ಶ್ರೀಹರಿಯ ವಿವಿಧ ರೂಪಗಳನ್ನು ವರ್ಣಿಸಿದ್ದಾರೆ. 'ನಿರುತ' ಇಟ್ಟಿಗೆಯ ಮೇಲೆ ನಿಂತದ್ದು ಪಂಢರಪುರದಲ್ಲಿಯೇ.

## ೨೬೮. ಶರಣು ಸಿದ್ಧಿ ವಿನಾಯಕ

[ ಗಣೇಶ ಸ್ತುತಿ ]

ರಾಗ: ನಟ್ಟ	ತಾಳ: ತ್ರಿವಿಡೆ

ಶರಣು ಸಿದ್ಧಿ ವಿನಾಯಕ
ಶರಣು ವಿದ್ಯಾ ಪ್ರದಾಯಕ ಪ.

ಶರಣು ಪಾರ್ವತಿತನಯ ಮೂರುತಿ
ಶರಣು ಮೂಷಕವಾಹನ ಅ.ಪ.

ನಿಟಿಲನೇತ್ರನ ದೇವಿ ಸುತನೆ
ನಾಗಭೂಷಣ ಪ್ರೀಯನೆ
ಕಟಿಕಟಾಂಗದ ಕೋಮಲಾಂಗನೆ
ಕರ್ಣಕುಂಡಲಧಾರನೆ ೧

ಬಟುವ ಮುತ್ತಿನಹಾರ ಪದಕನೆ
ಬಾಹು ಹಸ್ತ ಚತುಷ್ಟನೇ
ಇಟ್ಟ ತೊಡುಗೆಯು ಹೇಮಕಂಕಣ
ಪಾಶದಂಕುಶಧಾರನೆ ೨

ಕುಕ್ಷಿ ಮಹಾಲಂಬೋದರನೆ
ಇಕ್ಷುಚಾಪನ ಗೆಲಿದನೆ
ಪಕ್ಷಿವಾಹನನಾದ ಪುರಂದರವಿಠಲನ ನಿಜದಾಸನೆ ೩

---

ನಿಟಲ ನೇತ್ರ-ಹಣೆಗಣ್ಣಿನವ-ಶಿವ. ಕಟಿಕಟಾಂಗ-ದೊಡ್ಡ ಹೊಟ್ಟೆಯವ. ಬಟುವ-ಮಂಡಗಿರುವ

## ೨೬೯. ಶರಣೆಂಬೆ ವಾಣಿ ಪೊರೆಯೆ ಕಲ್ಯಾಣಿ

[ ಸರಸ್ವತಿದೇವಿ ]

**ರಾಗ: ಕಲ್ಯಾಣಿ** **ತಾಳ: ಆದಿ**

ಶರಣೆಂಬೆ ವಾಣಿ ಪೊರೆಯೆ ಕಲ್ಯಾಣಿ ಪ.

ವಾಗಭಿಮಾನಿ ವರ ಬ್ರಹ್ಮಾಣಿ
ಸುಂದರವೇಣಿ ಸುಚರಿತ್ರಾಣಿ ೧

ಜಗದೊಳು ನಿಮ್ಮ ಪೊಗಳುವೆನಮ್ಮ
ಹರಿಯ ತೋರಿಸೆಂದು ಪ್ರಾರ್ಥಿಪೆನಮ್ಮ ೨

ಪಾಡುವೆ ಶ್ರುತಿಯ ಬೇಡುವೆ ಮತಿಯ
ಪುರಂದರವಿಠಲನ ಸೋದರಸೊಸೆಯ ೩

## ೨೭೦. ಶೃಂಗಾರವಾಗಿಹುದು ಶ್ರೀಹರಿಯ ಮಂಚ

[ಶೇಷದೇವರು]

ರಾಗ: ಶಂಕರಾಭರಣ	ತಾಳ: ತ್ರಿವಿಡೆ

ಶೃಂಗಾರವಾಗಿಹುದು ಶ್ರೀಹರಿಯ ಮಂಚ
ಅಂಗನೆ ಮಹಲಕುಮಿಯರಸ ಮಲಗುವ ಮಂಚ ಪ.

ಬಡಗಿ ಮುಟ್ಟದ ಮಂಚ ಕಡಲೊಳಿಹ ಮಂಚ
ಮೃಡನ ತೋಳಲಿ ಅಡಗಿರುವ ಮಂಚ
ಹೆಡೆಯುಳ್ಳ ಹೊಸಮಂಚ ಪೊಡವಿ ಪೊತ್ತಿಹ ಮಂಚ
ಕಡಲಶಯನ ಶ್ರೀರಂಗನ ಸಿರಿಮಂಚ ೧

ಕಾಲಿಲ್ಲದೋಡುವ ಮಂಚ ಗಾಳಿನುಂಗುವ ಮಂಚ
ತೋಳು ಬಿಳುಪಿನ ಮಂಚ ವಿಷಮಂಚ
ಕಾಳಗದೊಳರ್ಜುನನ ಮಕುಟ ಕೆಡಹಿದ ಮಂಚ
ಕೇಳು ಪರೀಕ್ಷಿತನ ಕೊಂದುದೀ ಮಂಚ ೨

ಕಣ್ಣು ಕಿವಿಯಾದ ಮಂಚ ಬೆನ್ನು ಬಾಗಿದ ಮಂಚ
ಹುಣ್ಣಿಮೆಯ ಚಂದ್ರಮನ ಅಡ್ಡಗಟ್ಟುವ ಮಂಚ
ಬಣ್ಣ ಬಿಳುಪಿನ ಮಂಚ ಹೊನ್ನ ಕಾದಿಹ ಮಂಚ
ಕನ್ನೆ ಮಹಾಲಕ್ಷ್ಮಿಯರಸನ ಮಂಚ ೩

ಹಕ್ಕಿಗೆ ಹಗೆಯಾದ ಮಂಚ ರೊಕ್ಕ ಮುಟ್ಟದ ಮಂಚ
ರಕ್ಕಸರೆದೆ ತಲ್ಲಣಗೊಳಿಸುವ ಮಂಚ
ಸೊಕ್ಕು ಪಿಡಿದ ಮಂಚ ಘಕ್ಕನೆ ನುಂಗುವ ಮಂಚ
ಲಕ್ಕುಮಿರಮಣ ಶ್ರೀಹರಿಯ ಮಂಚ ೪

ಅಂಕುಡೊಂಕಿನ ಮಂಚ ಅಕಲಂಕಮಹಿಮ ಮಂಚ
ಸಂಕರುಷಣನೆಂಬ ಸುಖದ ಮಂಚ
ಶಂಕರನ ಕೊರಳಿಗೆ ಪದಕವಾಗಿಹ ಮಂಚ
ವೆಂಕಟಪುರಂದರವಿಠಲರಾಯನ ಮಂಚ ೫

## ೨೭೧. ಶ್ರೀಕಾಂತ ಎನಗಿಷ್ಟು ದಯಮಾಡೊ ತಂದೆ

[ ಶ್ರೀಹರಿ ಸ್ತುತಿ ]

ರಾಗ: ಕಾನಡ

ತಾಳ: ಆದಿ

ಶ್ರೀಕಾಂತ ಎನಗಿಷ್ಟು ದಯಮಾಡೊ ತಂದೆ
ಏಕಾಂತದಲಿ ನಿನ್ನ ಭಜಿಸುವ ಭಾಗ್ಯ ಪ.

ಧನದಾಸೆಗಾಗಿ ನಾ ಧನಿಕರ ಮನೆಗಳ
ಕೊನೆ ಬಾಗಿಲಲಿ ನಿಂದು ತೊಳಲಿ ಬಳಲಿದೆನೊ ೧

ದೇಹಾಭಿಮಾನದಿಂದ ವಿಹಿತ ಧರ್ಮವ ತೊರೆದು
ಸ್ನೇಹಾನುಬದ್ಧನಾಗಿ ಸತಿಸುತರ ಪೊರೆದೆನೊ ೨

ಏನಾದರೇನೆನ್ನ ಹೀನ ಗುಣಗಳನೆಲ್ಲ
ಮನ್ನಿಸಿ ಸಲಹೊ ಶ್ರೀ ಪುರಂದರವಿಠಲ ೩

## ೨೭೨. ಶ್ರೀನಿವಾಸ ಎನ್ನ ಬಿಟ್ಟು ನೀನಗಲದೆ

[ ತಿರುಪತಿಯ ಶ್ರೀನಿವಾಸ ]

ರಾಗ: ಶ್ರೀರಂಜನಿ

ತಾಳ: ರೂಪಕ

ಶ್ರೀನಿವಾಸ ಎನ್ನ ಬಿಟ್ಟು ನೀನಗಲದೆ ಪ.

ಮನವೆಂಬೊ ಮಂಟಪ ತನುವೆಂಬೊ ಹಾಸುಮಂಚ
ಜ್ಞಾನವೆಂಬೊ ದಿವ್ಯ ದೀಪದ ಬೆಳಕಿಲಿ ಸನಕಾದಿ ವಂದ್ಯ
ನೀ ಬೇಗ ಬಾರೊ ೧

ಪಂಚದೈವರು ಯಾವಾಗಲು ಎನ್ನ ಹೊಂಚುಹಾಕಿ ನೋಡುತಾರೊ
ಕೊಂಚಗಾರರು ಆರು ಮಂದಿ ಅವರು ಹಿಂಚುಮುಂಚಿಲ್ಲದೆ
ಎಳೆಯುತಾರೆ ೨

ಮುನ್ನ ಮಾಡಿದ ದುಷ್ಕರ್ಮದಿ ಬಳಲಿದೆ ಇನ್ನಾದರು ಎನ್ನ ಕೈಪಿಡಿಯೊ
ಘನಮಹಿಮ ಶ್ರೀಪುರಂದರವಿಠಲ ಮನ್ನಿಸಿ ಎನ್ನನು ಕಾಯ ಬೇಕೊ ೩

## ೨೭೩. ಶ್ರೀನಿವಾಸ ನೀನೆ ಪಾಲಿಸೊ

[ ತಿರುಪತಿಯ ಶ್ರೀನಿವಾಸ ]

ರಾಗ: ಆನಂದಭೈರವಿ ಆದಿ

ಶ್ರೀನಿವಾಸ ನೀನೆ ಪಾಲಿಸೊ ಶ್ರಿತಜನಪಾಲ
ಗಾನಲೋಲ ಶ್ರೀ ಮುಕುಂದನೆ ಪ.

ಧ್ಯಾನಮಾಳ್ಪ ಸಜ್ಜನರ ಮಾನದಿಂದ ಪರಿಪಾಲಿಸುವ
ವೇಣುಗೋಪಾಲ ಗೋವಿಂದ ವೇದವೇದ್ಯ ನಿತ್ಯಾನಂದ ಅ.ಪ.

ಎಷ್ಟು ದಿನ ಕಷ್ಟಪಡುವುದೋ ಯಶೋದೆ ಕಂದ
ದೃಷ್ಟಿಯಿಂದ ನೋಡಲಾಗದೆ
ಮುಟ್ಟಿ ನಿನ್ನ ಭಜಿಸಲಾರೆ, ಕೆಟ್ಟ ನರಜನ್ಮದವ
ದುಷ್ಟ ಕಾರ್ಯ ಮಾಡಿದಾಗ್ಯೂ ಇಷ್ಟನಾಗಿ ಕೈಯ ಪಿಡಿಯೋ ೧

ಎಂದಿಗೆ ನಿನ್ನ ಪಾದಾಬ್ಜವ ಪೊಂದುವ ಸುಖ
ಎಂದಿಗೆ ಲಭ್ಯವೊ ಮಾಧವ
ಅಂಧಕಾರಣ್ಯದಲಿ ನಿಂದು ತತ್ತರಿಸುತಿಹೆನೊ
ಅಂದದಿಂ ಭವಾಬ್ಧಿಯೊಳು ನಿಂದು ನೊಂದೆನೊ ಗೋವಿಂದ ೨

ಅನುದಿನ ಅನೇಕ ರೋಗಗಳ ಅನುಭವಿಸಿದೆನು
ಘನ ಮಹಿಮನೆ ಕೇಳಯ್ಯ
ತನುವಿನಲಿ ಬಲವಿಲ್ಲ ನೆನೆದ ಮಾತ್ರದಿ ಸಲಹೊ ಯೆನ್ನ
ಹನುಮದೀಶ ಪುರಂದರವಿಟ್ಠಲನೆ ಕೈಯ ಪಿಡಿದು ೩

## ೨೭೪. ಸಂತತಿಯಪ್ಪುದು ರಾಮಾಯಣವ ಕೇಳಲು

[ ಲೋಕನೀತಿ ]

ಸಂತತಿಯಪ್ಪುದು ರಾಮಾಯಣವ ಕೇಳಲು
ಸಕಲ ಪಾಪಹರವು ಭಾರತ ಕೇಳಲು
ತಂತುಮಾತ್ರ ವಿಷ್ಣುಪುರಾಣವ ಕೇಳಲು
ತತ್ತ್ವವಿವೇಕವು ಬಾಹೋದು

ಅಂತರವರಿತು ಭಾಗವತವ ಕೇಳಲು
ಆಹೋದ್ವೆ ಜ್ಞಾನಭಕ್ತಿ ವೈರಾಗ್ಯವು
ಸಂತತ ಪುರಂದರವಿಠಲನ ಸಂಕೀರ್ತನೆ ಪಾಡಲು
ಸಕಲವು ಬಾಹೋದು ಸಾಯುಜ್ಯವು

## ೨೭೫. ಸಂದಿತಯ್ಯ ಪ್ರಾಯವು ಸಂದಿತಯ್ಯ

[ ಲೋಕನೀತಿ ]

ರಾಗ: ಕಲ್ಯಾಣಿ

ತಾಳ: ಅಟ್ಟ

ಸಂದಿತಯ್ಯ ಪ್ರಾಯವು ಸಂದಿತಯ್ಯ ಪ.

ಒಂದು ದಿನವು ಸುಖವು ಇಲ್ಲ ಕುಂದಿಹೋದೆ ಕಷ್ಟದಿಂದ
ಬಂಧನವನು ಬಿಡಿಸುತೆನ್ನ ತಂದೆ ನೀನೆ ರಕ್ಷಿಸಯ್ಯ ಅ.ಪ.

ತಂದೆಯುದರದಿ ಮೂರು ತಿಂಗಳು ಸಂದು ಹೋಯಿತು ತಿಳಿಯದೆ
ಬೆಂದೆ ನವಮಾಸದೊಳು ಗರ್ಭದಿ ನಿಂದು ತಾಯಿಯ ಗರ್ಭದೆ
ಕುಂದಿತಾಯುವು ಒಂದು ವರುಷ ಇಂದಿರೇಶನೆ ಕೇಳು ದುಃಖವ
ಬಂಧನದೊಳಗೆ ನಿಂದೆನನುದಿನ ಮುಂದೆ ಮೋಕ್ಷದ
ಮಾರ್ಗ ಕಾಣದೆ ೧

ಕತ್ತಲೆಯೊಳಿರಲಾರೆನೆನುತಲಿ ಹೊತ್ತೆ ಹರಕೆಯ ನಿನ್ನೊಳು
ನಿತ್ಯದಲಿ ಮಲಮೂತ್ರ ಬಾಲ್ಯದಿ ಹೊತ್ತುಗಳೆದೆನು ಎನ್ನೊಳು
ಮತ್ತೆ ಹದಿನಾರರ ಪ್ರಾಯದಿ ಉಕ್ಕಿ ನಡೆದೆನು ಧರೆಯೊಳು
ಹತ್ತಿ ಸಂಸಾರದ ಮಾಯೆಯು ಸಿಕ್ಕಿದೆನು ಭವಬಲೆಯೊಳು ೨

ಎಡೆಬಿಡದೆ ಅನುದಿನದಿ ಪಾಪದ ಕಡಲೊಳಗೆ ನಾ ಬಿದ್ದೆನೋ
ದಡವ ಕಾಣದೆ ದುಃಖದೊಳು ಬೆಂದೊಡಲೊಳಗೆ ನಾ ನೊಂದೆನೋ
ಬಿಡದೆ ನಿನ್ನಯ ಧ್ಯಾನವೆಂಬಾ ಹಡಗವೇರಿಸು ಎಂದೆನೋ
ದೃಢದಿ ನಿನ್ನಯ ಪಾದ ಸೇರಿಸೊ ಒಡೆಯ ಪುರಂದರವಿಟ್ಠಲ ೩

---

ತಂದೆಯುದರದಿ ಮೂರು ತಿಂಗಳು-ಯಾವುದೇ ಜೀವಾಂಶವು ಮೊದಲ ಮೂರು ತಿಂಗಳ ಕಾಲ ತಂದೆಯ ಉದರವಲ್ಲಿದ್ದು ಆಮೇಲೆ ತಾಯಿಗರ್ಭ ಸೇರುತ್ತದೆ-ಎಂದು ಭಾಗವತದಲ್ಲಿ ಹೇಳಿದೆ.

## ೨೭೬. ಸಂಸಾರವೆಂಬಂಥ ಭಾಗ್ಯವಿರಲಿ

[ ಶ್ರೀಹರಿ ಸ್ತುತಿ-ಚತುರೋಕ್ತಿ ]

ರಾಗ: ಕಾಂಬೋದಿ ತಾಳ: ಅಟ್ಟ

ಸಂಸಾರವೆಂಬಂಥ ಭಾಗ್ಯವಿರಲಿ ಪ.

ಕಂಸಾರಿ ನೆನೆವೆಂಬ ಸೌಭಾಗ್ಯವಿರಲಿ ಅ.ಪ.

ತಂದೆ ನೀನೆ ಕೃಷ್ಣ ತಾಯಿ ಇಂದಿರೆದೇವಿ
ಪೊಂದಿದ ಅಣ್ಣನು ವನಜಸಂಭವನು
ಇಂದುಮುಖಿ ಸರಸ್ವತೀದೇವಿಯೇ ಅತ್ತಿಗೆಯು
ಎಂದೆಂದಿಗೂ ವಾಯುದೇವರೇ ಗುರುವು ೧

ಭಾರತೀ ದೇವಿಯೇ ಗುರುಪತ್ನಿಯು ಎನಗೆ
ಗರುಡ ಶೇಷಾದಿಗಳೆ ಗುರುಪುತ್ರರು
ಹರಿದಾಸರೆಂಬುವರೆ ಇಷ್ಟ ಬಾಂಧವರೆನಗೆ
ಹರಿಭಜನೆ ನಡೆಯುತಿಹ ಸ್ಥಳವೆ ಮಂದಿರವು ೨

ಸರುವಾಭಿಮಾನವನು ತ್ಯಜಿಸುವುದೆ ಸುಸ್ನಾನ
ಹರಿಯ ನಾಮವೆ ಇನ್ನು ಅಮೃತಪಾನ
ವರದ ಪುರಂದರವಿಠಲ ನಿನ್ನ ಪಾದ ಧ್ಯಾನ
ಕರುಣಿಸಿ ಅನವರತ ಕರ ಪಿಡಿದು ಕಾಯೊ ೩

## ೨೭೭. ಸಕಲ ಗ್ರಹಬಲ ನೀನೆ ಸರಸಿಜಾಕ್ಷ

[ ಶ್ರೀಹರಿ ಸ್ತುತಿ-ಸಮರ್ಪಣಭಾವ ]

ಕಾಂಬೋದಿ

ಅಟ್ಟ

ಸಕಲ ಗ್ರಹಬಲ ನೀನೆ ಸರಸಿಜಾಕ್ಷ ಪ.

ನಿಖಿಳ ರಕ್ಷಕ ನೀನೆ ವಿಶ್ವವ್ಯಾಪಕನೆ ಅ.ಪ.

ರವಿ ಚಂದ್ರ ಬುಧ ನೀನೆ ರಾಹು ಕೇತುವು ನೀನೆ
ಕವಿ ಗುರು ಶನಿಯು ಮಂಗಳನು ನೀನೆ
ದಿವರಾತ್ರಿಯು ನೀನೆ ನವ ವಿಧಾನವು ನೀನೆ
ಭವರೋಗಹರ ನೀನೆ ಭೇಷಜನು ನೀನೆ ೧

ಪಕ್ಷಮಾಸವು ನೀನೆ ಪರ್ವಕಾಲವು ನೀನೆ
ನಕ್ಷತ್ರ ಯೋಗ ತಿಥಿಕರಣ ನೀನೆ
ಅಕ್ಷಯವೆಂದು ದ್ರೌಪದಿಯ ಮಾನವ ಕಾಯ್ದ
ಪಕ್ಷಿವಾಹನ ದೀನರಕ್ಷಕನು ನೀನೆ ೨

ಋತು ವತ್ಸರವು ನೀನೆ ಪೃಥಿವಿಗಾದಿಯು ನೀನೆ
ಕ್ರತು ಹೋಮ ಯಜ್ಞ ಸದ್ಗತಿಯು ನೀನೆ
ಜಿತವಾಗಿ ಎನ್ನೊಡೆಯ ಪುರಂದರವಿಟ್ಠಲನೆ
ಶ್ರುತಿಗೆ ಸಿಲುಕದ ಅಪ್ರತಿಮ ಮಹಿಮ ನೀನೆ ೩

## ೨೭೮. ಸಕಲವೆಲ್ಲವು ಹರಿಸೇವೆಯೆನ್ನಿ

[ ಶ್ರೀಹರಿ ಸ್ತುತಿ-ಚತುರೋಕ್ತಿ ]

ರಾಗ: ಬಿಲಹರಿ ತಾಳ: ಆದಿ

ಸಕಲವೆಲ್ಲವು ಹರಿಸೇವೆಯೆನ್ನಿ ಪ.

ರುಕುಮಿಣಿಯರಸ ವಿಟ್ಠಲನಲ್ಲದಿಲ್ಲವೆನ್ನಿ ಅ.ಪ.

ನುಡಿವುದೆಲ್ಲವು ನಾರಾಯಣನ ಕೀರ್ತನೆಯೆನ್ನಿ
ನಡೆವುದೆಲ್ಲವು ದೇವರ ಯಾತ್ರೆಯೆನ್ನಿ
ಕೊಡುವ ದಾನವು ಕಾಮಜನಕಗರ್ಪಿತವೆನ್ನಿ
ಎಡೆಯ ಅನ್ನವು ಹರಿಯ ಪ್ರಸಾದವೆನ್ನಿ ೧

ಹೊಸ ವಸ್ತ್ರ ಉಡುವಲ್ಲಿ ಹರಿಯ ಬೆಳ್ಪುಡೆಯೆನ್ನಿ
ಕುಸುಮ ಪರಿಮಳವು ಶ್ರೀಕೃಷ್ಣಗೆನ್ನಿ
ಎಸೆವ ಆಭರಣ ಯಶೋದೆನಂದನಗೆನ್ನಿ
ಶಶಿಮುಖಿಯರ ಕೂಟ ಸೊಬಗು ಗೋವಳಗೆನ್ನಿ ೨

ಆಟಪಾಟಗಳೆಲ್ಲ ಅಂತರ್ಯಾಮಿಗೆ ಎನ್ನಿ
ಊಟ ಸತ್ಕಾರ ಕಂಜನಾಭನಿಗೆನ್ನಿ
ನೀಟಾದ ವಸ್ತುಗಳು ಕೈಟಭಾಂತಕಗೆನ್ನಿ
ಕೋಟಲೆ ಸಂಸಾರ ನಾಟಕಧರಗೆನ್ನಿ ೩

ನಿದ್ರೆ ಜಾಗರವು ಸಮುದ್ರಶಯನಗೆನ್ನಿ
ಭದ್ರನಿಧಿ ಗಜವರದಗೆನ್ನಿ
ರೌದ್ರ ದಾರಿದ್ರ್ಯ ರಾಘವನ ಮಾಯವೆನ್ನಿ ಶ್ರೀ-
ಮುದ್ರೆಗಳ ಧರಿಸಿ ಹರಿದಾಸನೆನ್ನಿ ೪

ಅಣುರೇಣು ತೃಣಕಾಷ್ಠ ಪರಿಪೂರ್ಣನಹುದೆನ್ನಿ
ಎಣಿಸಲಾಗದ ಅನಂತಮಹಿಮನೆನ್ನಿ
ಸೆಣಸುವ ರಕ್ಕಸರ ಶಿರವ ಚೆಂಡಾಡುವ
ಪ್ರಣವ ಗೋಚರ ಪುರಂದರವಿಠಲನೆನ್ನಿ ೫

---

ನಮ್ಮ ಯಾವುದೇ ಚರ್ಯೆ ಇರಲಿ, ಅದು ಭಗವಂತನ ಸೇವೆಯೇ ಹೌದು, ಎಂಬ ಸರ್ವಸಮರ್ಪಣ ಭಾವ ಇಲ್ಲಿದೆ. ಕೈಟಭಾಂತಕ-ಕೈಟಭರಕ್ಕಸನನ್ನು ಕೊಂದವ. ಪ್ರಣವ-ಓಂಕಾರಮಂತ್ರ.

## ೨೭೯. ಸಜ್ಜನರ ಸಂಗ ನಮಗೆಂದಿಗಾಗುವುದೊ

**[ ಲೋಕನೀತಿ ]**

**ರಾಗ: ಕಾಂಬೋದಿ**

**ತಾಳ: ಅಟ್ಟ**

ಸಜ್ಜನರ ಸಂಗ ನಮಗೆಂದಿಗಾಗುವುದೊ
ದುರ್ಜನರ ಸಂಗದಿಂದಲಿ ನೊಂದೆ ಹರಿಯೆ ಪ.

ವಾಕು ವಾಕಿಗೆ ಡೊಂಕನೆಣಿಸುವರು ಮತ್ತೆ
ಪೋಕರಾಡಿದ ಮಾತು ನಿಜವೆಂಬರು
ವಾಕುಶೂಲಗಳಿಂದ ನೆಡುವರು ಪರರನೀ
ಪೋಕುಮಾನವರಿಂದ ನೊಂದೆ ಹರಿಯೆ ೧

ತಾವೆ ತಮ್ಮನ್ನು ಕೊಂಡಾಡಿಕೊಳ್ಳುವರು
ನ್ಯಾಯವಿಲ್ಲದೆ ನುಡಿವರು ಪರರ
ಭಾವಿಸಲರಿಯರು ಗುರುಹಿರಿಯರನಿಂಥ
ಹೇಯ ಮನುಜರಿಂದ ನೊಂದೆ ಹರಿಯೆ ೨

ಬಡಜನರನು ಕೊಂದು ಅಡಗಿಸಿಕೊಂಬರು!
ಬಿಡಲೊಲ್ಲರು ಹಿಡಿದನ್ಯಾಯವ
ನುಡಿದು ಕೇಡನು ಒಡನೆ ತಪ್ಪಿಸಿಕೊಂಬಂಥ
ಕಡುಮೂರ್ಖರಿಂದ ನಾ ನೊಂದೆನು ಹರಿಯೆ ೩

ತೊತ್ತಿನೊಡನೆ ತನ್ನ ಸ್ನೇಹಸರಸ ಮಾತು
ತೆತ್ತಿಗರೊಡನೆ ಪಂಥವ ನುಡಿವರು
ಸತ್ತ ಬಳಿಕ ಸೃಷ್ಟಿ ಸಟೆಯೆಂಬರು ಇಂಥ
ಮತ್ತ ಮನುಜರಿಂದ ನೊಂದೆ ಶ್ರೀಹರಿಯೆ ೪

ಇಷ್ಟು ದಿನವು ನಿನ್ನ ನೆನೆಯದ ಕಾರಣ
ಕಷ್ಟಪಡುವ ಕೈಮೇಲಾಗಿ
ಸೃಷ್ಟಿಗೊಡೆಯ ಶ್ರೀಪುರಂದರವಿಠಲನೆ
ಮುಟ್ಟಿ ಭಜಿಸಬೇಕು ಧೃಷ್ಟಮನವು ನಿನ್ನ ೫

## ೨೮೦. ಸತ್ಯ ಜಗತಿದು ಪಂಚಭೇದವು

**[ ಶ್ರೀಹರಿ ಸ್ತುತಿ-ಮಾಧ್ವ ಪರಂಪರೆ ]**

**ರಾಗ: ಸೌರಾಷ್ಟ್ರ** **ತಾಳ: ಝಂಪೆ**

ಸತ್ಯ ಜಗತಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ
ಕೃತ್ಯವರಿತು ತಾರತಮ್ಯದಿ ಕೃಷ್ಣನಧಿಕವೆಂದು ಸಾರಿರೈ ಪ.

ಜೀವ ಈಶಗೆ ಭೇದ ಸರ್ವತ್ರ ಜೀವ ಜೀವಕೆ ಭೇದವು
ಜೀವ ಜಡಕೆ ಜಡ ಜಡಕೆ ಭೇದ ಜೀವಜಡ ಪರಮಾತ್ಮಗೆ ೧

ಮಾನುಷೋತ್ತಮರಧಿಕ ಕ್ಷಿತಿಪರು ಮನುಜ ದೇವ ಗಂಧರ್ವರು
ಜಾನಪಿತರಜಾನಜ ಕರ್ಮಜರು ಉಕ್ತ ಶೇಷ ಶತಸ್ಥರು ೨

ಗಣಪಮಿತ್ರರು ಸಪ್ತಋಷಿಗಳು ವಹ್ನಿ ನಾರದ ವರುಣರು
ಇನಜಗೆ ಸಮ ಚಂದ್ರ ಸೂರ್ಯರು ಮನುಸತಿಯು ಹೆಚ್ಚು ಪ್ರವಹನು ೩

ದಕ್ಷ ಸಮ ಅನಿರುದ್ಧ ಗುರು ಶಚಿ ರತಿಸ್ವಾಯಂಭುವರಾರ್ವರು
ಕಕ್ಷಪ್ರಾಣನಿಗಿಂತ ಕಾಮನು ಕಿಂಚಿದಧಿಕನು ಇಂದ್ರನು ೪

ದೇವೇಂದ್ರನಿಂದಧಿಕ ಮಹರುದ್ರ ರುದ್ರ ಸಮ ಶೇಷಗರುಡರು
ಗರುಡಶೇಷರಿಗಧಿಕರೆನಿಪರು ದೇವಿ ಭಾರತಿ ಸರಸ್ವತಿ ೫

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು
ವಾಯು ಬ್ರಹ್ಮಗೆ ಕೋಟಿ ಗುಣದಿಂ ಅಧಿಕಶಕ್ತಳು ಶ್ರೀರಮಾ ೬

ಅನಂತ ಗುಣದಿಂ ಲಕುಮಿಗಧಿಕನು ಶ್ರೀ ಪುರಂದರವಿಠಲನು
ಘನ ಸಮರು ಇವಗಿಲ್ಲ ಜಗದೊಳು ಹನುಮ ಹೃತ್ಪದ್ಮವಾಸಿಗೆ ೭

---

ಮಧ್ವಸಿದ್ಧಾಂತದ ಜಗತ್ಸತ್ಯ, ಪಂಚಭೇದ, ದೇವತಾ ತಾರತಮ್ಯಗಳನ್ನು ಇಲ್ಲಿ ವಿವರಿಸಿದೆ. ಜಾನಪಿತರು, ಎಂದರೆ ತಾರತಮ್ಯೋತ್ತ್ವೇನ ೨೯ನೆಯ ಕಕ್ಷೆಯಲ್ಲಿ ಬರುವ ಚಿರಪಿತೃಗಳು. ಆಜಾನಜಶರ್ಮರು-ಎಂದರೆ ೨೮ನೆಯ ಕಕ್ಷೆಯ ಋಷಿಗಳು. ಅದರಂತೆ ಶೇಷಶತಸ್ಥರು, ಗಣಪಮಿತ್ರ- ಮೊದಲಾದ ತಾರತಮ್ಯಗಳ ವಿವರಗಳಿಗಾಗಿ ಮುರಗೋಡು ಕೃಷ್ಣದಾಸ ಸಂಪಾದಿತ 'ಭಜನಚಂದ್ರಿಕಾ'ದ ಪು. ೨೨೦-೨೧ ನೋಡಬಹುದು.

## ೨೮೧. ಸತ್ಯವಂತರಿಗಿದು ಕಾಲವಲ್ಲ

**[ ಲೋಕನೀತಿ ]**

**ರಾಗ: ಮುಖಾರಿ** **ತಾಳ: ಝಂಪೆ**

ಸತ್ಯವಂತರಿಗಿದು ಕಾಲವಲ್ಲ ಪ.

ದುಷ್ಟ ಜನರಿಗೆ ಸುಭಿಕ್ಷ ಕಾಲ ಅ.ಪ.

ಹರಿಸ್ಮರಣೆ ಮಾಡುವಗೆ ಕ್ಷಯವಾಗುವ ಕಾಲ
ಪರಮ ಪಾಪಿಗಳಿಗೆ ಸುಭಿಕ್ಷ ಕಾಲ
ಸ್ಥಿರವಾದ ಪತಿವ್ರತೆಯ ಪರರು ನಿಂದಿಪ ಕಾಲ
ಧರೆಯರಿಯೆ ಜಾರೆಯನು ಕೊಂಡಾಡುವ ಕಾಲ ೧

ಉಪಕಾರ ಮಾಡಿದರೆ ಅಪಕರಿಸುವ ಕಾಲ
ಸಕಲವನು ತಿಳಿದವಗೆ ದುರ್ಭಿಕ್ಷ ಕಾಲ
ಸತಿಸುತರು ಎಂಬವರ ನಂಬಲರಿಯದ ಕಾಲ
ಸಟೆಯಲ್ಲವಿದು ಬಹು ವಿಪರೀತ ಕಾಲ ೨

ಧರ್ಮ ಮಾಡುವವ ನಿರ್ಮೂಲವಾಗುವ ಕಾಲ
ಕರ್ಮಿ ಪಾತಕರಿಗೆ ಬಹು ಸೌಖ್ಯಕಾಲ
ನಿರ್ಮಲಾತ್ಮಕ ಸಿರಿ ಪುರಂದರವಿಠಲನ
ಮರ್ಮದೊಳು ಭಜಿಸಲರಿಯದ ಕಾಲವಯ್ಯ ೩

## ೨೮೨. ಸಲ್ಲದೊ ಕೃಷ್ಣ ಸಲ್ಲದೊ

[ ಶ್ರೀಕೃಷ್ಣಲೀಲೆ-ಚತುರೋಕ್ತಿ ]

**ರಾಗ: ಕಲ್ಯಾಣಿ** **ತಾಳ: ಅಟ್ಟ**

ಸಲ್ಲದೊ ಕೃಷ್ಣ ಸಲ್ಲದೊ ಪ.

ಸಿರಿ ವಲ್ಲಭ ಇದ ನೋಡಿ ಪಾಲಿಸಬೇಕೊ ಅ.ಪ.

ಬಿತ್ತಿ ಬೆಳೆಸಿ ತಲೆಯೆತ್ತಿದ ಪೈರನು
ಮತ್ತೆ ತುರುವಿಂದು ಬಿಟ್ಟು ಮೆಲ್ಲಿಸುವುದು ೧

ಸಾವಿರ ಹೊನ್ನಿಕ್ಕಿ ಸದನವ ಸಾಧಿಸಿ
ಪಾವಕನುರಿಗೆ ನೀನೊಪ್ಪಿಸಿಕೊಡುವುದು ೨

ಕುಶಲದಿ ಬಣ್ಣಿಸಿ ಬರೆದ ಚಿತ್ತಾರವ
ಮಸಿ ಮಣ್ಣು ಮಾಡಿ ನೀ ಕೆಡಿಸುವುದು ೩

ಬಲು ಕಾಲ ಮುದ್ದಿಸಿ ಕಲಿಸಿ ಮಾತುಗಳ
ಗಿಳಿಯ ಸಾಕಿ ಬಾವುಗಗೆ ಒಪ್ಪಿಸುವುದು ೪

ಕರುಣಿಸು ಸಿರಿ ಪುರಂದರವಿಟ್ಠಲ ನಮ್ಮ
ಹಿರಿದು ಮಾಡಿ ಮತ್ತೆ ಕಿರಿದು ಮಾಡುವುದು ೫

## ೨೮೩. ಸಾಕು ಸಂಸಾರ ಸಜ್ಜಾಗಿಲ್ಲ

**[ ಲೋಕನೀತಿ-ಆಧ್ಯಾತ್ಮಿಕ ]**

**ರಾಗ: ಪಂತುವರಾಳಿ** **ತಾಳ: ಅಟ್ಟ**

ಸಾಕು ಸಂಸಾರ ಸಜ್ಜಾಗಿಲ್ಲ ಒಲ್ಲೆ ಒಗತನವ ಪ.

ಆರು ಮಂದಿ ಗಂಡರಾಳುವರು ಎನ್ನ
ಆರು ಮಂದಿಗೆ ಮೂರು ಸುತರೆನಗೆ
ಆರು ಮೂರೇಳ್ವರು ಭಾವ ಮೈದುನರೆಲ್ಲ
ಆರೇನೆಂದರೆ ಬಿಡರು ಆರಿಗುಸಿರಲಮ್ಮ ೧

ಹತ್ತುಮಂದಿ ಬೆನ್ನ ಮುತ್ತಿಕೊಂಡಿಹರೆ
ಮತ್ತೆ ಬಿಟ್ಟೇನೆಂದರೆ ಬಿಡಗೊಡರು
ಅತ್ತಿಗೆ ನೆಗವೆಣ್ಣೆ ಹೊತ್ತು ಹೊತ್ತಿನೊಳೆನ್ನ
ನೆತ್ತಿಯೊಳು ಹಸ್ತವಿಟ್ಟೆನ್ನ ಸೆಳೆವರಮ್ಮ ೨

ಪಂಚೈವರು ಎನ್ನ ತ್ವಂಚಾಹಂಚ ಎಂದು
ಸಂಚಿತ ಕರ್ಮವನುಣಿಸುವರು
ವಂಚನೆಯಳಿದ ಪ್ರಪಂಚವ ಕಳೆದಿಹ
ಮಿಂಚಿನ ಪರಿಯಲಿ ವಿರಿಂಚಿ ಬರೆದಿಹನಮ್ಮ ೩

ಜ್ಯೇಷ್ಠನಾಗಿಹ ಪುತ್ರ ಧರ್ಮನ ಅಗಲಿಸಿ
ಭ್ರಷ್ಟ ಅತ್ತೆಯು ಮೃತ್ಯುವಾಗಿಹಳು
ಮೆಟ್ಟಿಲ ಹೊರಗೆ ಕಣ್ಣೆಟ್ಟು ಸಾಧುಗಳನ್ನು
ದೃಷ್ಟಿಸಿ ನೋಳ್ಪೆನೆಂದರೆ ಕ್ಷಣ ಬಿಡರಮ್ಮ ೪

ಒಂಭತ್ತು ಬಾಗಿಲ ಊಳಿಗವನು ಮಾಳ್ಪ
ಕುಂಭಕದ ನರಕ ಕಾವರ ಧಾಳಿ
ಡಂಭಕವನು ಬಿಟ್ಟು ಇಂಬಿನೊಳಿಟ್ಟು ವಿ-
ಶ್ವಂಭರ ಪುರಂದರವಿಠಲ ಧ್ಯಾನದ ಗುಟ್ಟು ೫

---

ಆಧ್ಯಾತ್ಮದ ಸೆಳಕುಗಳಿರುವ ಕೀರ್ತನೆ. ಆರು ಮಂದಿ ಗಂಡರು-ಎಂದರೆ ಕಾಮಕ್ರೋಧಾದಿಗಳು. ತಾಪತ್ರಯಗಳೇ ಮೂರು ಸುತರು. ಆರು ಮೂರು (=೯) ನವದ್ವಾರಗಳು. ಏಳು ಜನ ಭಾವಮೈದುನರೆಂದರೆ ಸಪ್ತ ವ್ಯಸನಗಳು ಸ್ತ್ರೀವ್ಯಸನ, ಪಗಡೆಯಾಟ, ಬೇಟೆ, ಮದ್ಯಪಾನ, ಬಿರುಸು ಮಾತು, ಹಣದ ಮೋಹ ಮತ್ತು ಇನ್ನೊಬ್ಬರನ್ನು ದೂಷಿಸುವುದು. ತ್ವಂಚಾ ಹಂಚ=ಭೇದಭಾವ (ತ್ವಂಚ ಅಹಂಚ) ಅತ್ತೆ, ಅತ್ತಿಗೆಯರು-ಮಾಯೆ, ಬುದ್ಧಿ, ಕುಂಭಕ ಹೆಸರಿನ ಒಂದು ನರಕ.

## ೨೮೪. ಸಾರಿ ಬಂದನೆ ಪ್ರಾಣೇಶ ಬಂದನೆ

[ ವಾಯುದೇವರು-ಅವತಾರತ್ರಯ ]

ರಾಗ: ಹಿಂದೂಸ್ಥಾನಿ ಕಾಪಿ ತಾಳ: ಅಟ್ಟ

ಸಾರಿ ಬಂದನೆ ಪ್ರಾಣೇಶ ಬಂದನೆ ಪ.

ಸಾರಿ ಬಂದ ಲಂಕಾಪುರವ ಮೀರಿದ ರಾವಣನ ಕಂಡು
ಧೀರನು ವಯ್ಯಾರದಿಂದ ಅ.ಪ.

ವಾಯುಪುತ್ರನೆ ಶ್ರೀರಾಮನ ದೂತನೆ
ಪ್ರೀಯದಿಂದ ಸೀತಾಂಗನೆಗೆ ಮುದ್ರಿಕೆಯ ತಂದಿತ್ತವನೆ ೧

ಭೀಮಸೇನನೆ ಕುಂತಿತನಯನೆ ವಿರಾಟ-
ನಾ ಮನೆಯಲ್ಲಿ ನಿಂತು ಕೀಚಕನ ಸಂಹರಿಸಿದವನೆ ೨

ಮಧ್ವರಾಯನೆ ಸರ್ವಜ್ಞಶ್ರೇಷ್ಠ ಅದ್ವೈತವ
ಗೆದ್ದು ಪುರಂದರವಿಠಲನ ಮುಂದೆ ನಿಂತವನೆ ೩

## ೨೮೫. ಸಿಟ್ಟು ಮಾಡಿದರುಂಟೆ ಶ್ರೀಕೃಷ್ಣನಲ್ಲಿ

[ ಲೋಕನೀತಿ ]

ರಾಗ: ಕಾಂಬೋದಿ ತಾಳ: ಆದಿ

ಸಿಟ್ಟು ಮಾಡಿದರುಂಟೆ ಶ್ರೀಕೃಷ್ಣನಲ್ಲಿ ಪ.
ಕೊಟ್ಟು ಹುಟ್ಟದೆ ಮುನ್ನ ಈ ಸೃಷ್ಟಿಯಲ್ಲಿ ಅ.ಪ.

ನೆಲವ ತೋಡಿದರಿಲ್ಲ ಛಲದಿ ಹೋಲಿದರಿಲ್ಲ
ಕುಲಗೆಟ್ಟರಿಲ್ಲ ಕುಪ್ಪರಿಸಿದರು ಇಲ್ಲ
ಬಲವ ತೋರಿದರಿಲ್ಲ ಕೆಲಕೆ ಸಾರಿದರಿಲ್ಲ
ತಲೆಯ ಕಲ್ಲಿಗೆ ಹಾಯ್ದು ಒಡಕೊಂಡರಿಲ್ಲ ೧

ಧರಣಿಯಾಳುವ ದೊರೆಯ ಓಲೈಸಿದರು ಇಲ್ಲ
ಉರಗನಾ ಬಿಲದೊಳಗೆ ಹೋದರು ಇಲ್ಲ
ಗಿರಿಗಹ್ವರಂಗಳಲಿ ತೊಳಲಿ ಬಳಲಿದರಿಲ್ಲ
ಬರಿದೆ ಹಲವರಿಗೆ ಬಾಯ್ದೆರೆದರಿಲ್ಲ ೨

ದೊಂಬಲಾಗವ ಹಾಕಿ ದಿಂಡು ತಿರುಗಿದರಿಲ್ಲ
ತುಂಬಿರುವ ಊರೊಳಗೆ ತಿರಿತಿಂದರಿಲ್ಲ
ಅಂಬುಜಾಕ್ಷ ಪುರಂದರವಿಠಲನ್ನ ಪಾ
ದಾಂಬುಜವ ನೆನೆನೆನೆದು ಸುಖಿಯಾಗು ಮನವೆ ೩

## ೨೮೬. ಸುಂದರಮೂರುತಿ ಮುಖ್ಯಪ್ರಾಣ ಬಂದ ಮನೆಗೆ

**[ ವಾಯುದೇವರು-ಹನುಮಂತ ]**

**ರಾಗ: ಜಂಜೂಟ** **ತಾಳ: ಆದಿ**

ಸುಂದರಮೂರುತಿ ಮುಖ್ಯಪ್ರಾಣ ಬಂದ ಮನೆಗೆ
ಶ್ರೀರಾಮನಾಮ ಧ್ವನಿಗೆ ಪ.

ಕಣಕಾಲಂದುಗೆ ಗೆಜ್ಜೆ ಝಣ ಝಣರೆನುತ
ಝಣಕು ಝಣಕುರೆಂದು ಕುಣಿ ಕುಣಿದಾಡುತ ೧

ತುಂಬುರು ನಾರದ ವೀಣೆಯ ಬಾರಿಸುತ
ವೀಣೆ ಬಾರಿಸುತ ಶ್ರೀರಾಮನಾಮ ಪಾಡುತ ಕುಣಿದಾಡುತ ೨

ಪುರಂದರವಿಠಲನ ನೆನೆದು ಪಾಡುತಲಿ ನೆನೆದು ಪಾಡುತಲಿ
ಆಲಿಂಗನ ಮಾಡುತಲಿ ೩

## ೨೮೭. ಸುಮ್ಮನೆ ಬರುವುದೆ ಮುಕ್ತಿ

**[ ಲೋಕನೀತಿ-ಬೋಧೆ ]**

**ರಾಗ: ಆನಂದಭೈರವಿ** **ತಾಳ: ಅಟ್ಟ**

ಸುಮ್ಮನೆ ಬರುವುದೆ ಮುಕ್ತಿ ಪ.

ನಮ್ಮ ಅಚ್ಯುತನಾಂತನ ನೆನೆಯದೆ ಭಕ್ತಿ ಅ.ಪ.

ಮನದಲ್ಲಿ ದೃಢವಿರಬೇಕು ಪಾಪಿ
ಜನರ ಸಂಸರ್ಗವ ನೀಗಲಿ ಬೇಕು
ಅನುಮಾನವನು ಬಿಡಬೇಕು ತನ್ನ
ತನುಮನ ಧನವನೊಪ್ಪಿಸಿಕೊಡಬೇಕು ೧

ಕಾಮ ಕ್ರೋಧವ ಬಿಡಬೇಕು ಪರ-
ಕಾಮಿನಿಯರ ಹಂಬಲ ಬಿಡಬೇಕು
ಹೇಮದಾಸೆಯ ಸುಡಬೇಕು ಹರಿ-
ನಾಮ ಸಂಕೀರ್ತನೆ ಮಾಡಬೇಕು ೨

ಸಂದಣಿಗಳ ಬಿಡಬೇಕು ದೇಶ
ಬಂಧು ಬಾಂಧವರ ಸ್ನೇಹವ ಬಿಡಬೇಕು
ನಿಂದಿಸಿದರೆ ಹಿಗ್ಗಬೇಕು ಕೋಪ
ಬಂದಾಗ ಸೈರಣೆ ಬಿಡದಿರಬೇಕು ೩

ಹರಿಯೇ ಗುರುವೆನ್ನಬೇಕು
ಶ್ರೀಹರಿಯೇ ಪರದೈವವಂತೆನ್ನಬೇಕು
ಪರವಸ್ತು ಒಲ್ಲೆನಬೇಕು
ದೇಹಸ್ಥಿರವಲ್ಲವೆಂತೆಂದು ತಿಳಿಯಲುಬೇಕು ೪

ವ್ಯಾಪಾರವನು ಬಿಡಬೇಕು ನಮ್ಮ
ಶ್ರೀಪತಿ ಪುರಂದರವಿಠಲನೆನ್ನಬೇಕು
ಪಾಪರಹಿತನಾಗಬೇಕು
ಜ್ಞಾನದೀಪ ಬೆಳಕಿನಲಿ ಓಡಾಡಬೇಕು ೫

## ೨೮೮. ಸುಲಭ ಪೂಜೆಯ ಮಾಡಿ

[ಶ್ರೀಹರಿ ಸ್ತುತಿ-ಚತುರೋಕ್ತಿ]

ರಾಗ: ಕಾಂಬೋದಿ ತಾಳ: ಝಂಪೆ

ಸುಲಭ ಪೂಜೆಯ ಮಾಡಿ ಬಲವಿಲ್ಲದವರು ಪ.

ನಳಿನನಾಭನ ಪಾದ ನಳಿನ ಸೇವಕರು ಅ.ಪ.

ಇರುಳು ಹಚ್ಚುವ ದೀಪ ಹರಿಗೆ ನೀರಾಜನವು
ಮರೆಮಾಡುವ ವಸ್ತ್ರ ಪರಮ ಮಡಿಯು
ತಿರುಗಾಡಿ ದಣಿಯುವುದೆ ಹರಿಗೆ ಪ್ರದಕ್ಷಿಣೆಯು
ಹೊರಳಿ ಮಲಗುವುದೆಲ್ಲ ಹರಿಗೆ ವಂದನೆಯು ೧

ನುಡಿವ ಮಾತುಗಳೆಲ್ಲ ಕಡಲಶಯನನ ಜಪವು
ಮಡದಿ ಮಕ್ಕಳು ಮತ್ತೆ ಒಡನೆ ಪರಿವಾರ
ನಡುಮನೆಯು ಅಂಗಳವು ಉಡುಪಿ ವೈಕುಂಠಗಳು
ಎಡಬಲದ ಮನೆಯವರು ಕಡುಭಾಗವತರು ೨

ಹೀಗೆ ಅನುದಿನ ತಿಳಿದು ಹಿಗ್ಗುವ ಜನರ ಭವ-
ರೋಗ ಪರಿಹರವು ಮೂಜಗದಿ ಸುಖವು
ಹೋಗುತಿದೆ ಈ ಆಯು ಬೇಗದಿಂದಲಿ ನಮ್ಮ
ಯೋಗೇಶ ಪುರಂದರವಿಠಲನ ನೆನೆನೆನೆದು ೩

---

ಭಗವಂತನನ್ನು ನೆನೆಯುತ್ತ ಯಾವುದೇ ಪ್ರಾಪಂಚಿಕ ಕೈಂಕರ್ಯದಲ್ಲಿ ತೊಡಗಿದ್ದರೂ ಅದು ಹರಿಸೇವೆಯೇ ಆಗಿ ಪರಿಣಮಿಸುತ್ತದೆ-ಎನ್ನುವುದು ಇಲ್ಲಿಯ ಭಾವ.

## ೨೪೯. ಸ್ಮರಣೆಯೊಂದೇ ಸಾಲದೆ

**[ ಶ್ರೀಹರಿಸ್ತುತಿ-ಸಮರ್ಪಣಭಾವ ]**

**ರಾಗ: ಅಠಾಣ** **ತಾಳ: ಛಾಪು**

ಸ್ಮರಣೆಯೊಂದೇ ಸಾಲದೆ ಗೋವಿಂದನ
ಸ್ಮರಣೆ ಒಂದೇ ಸಾಲದೆ ಪ.

ಪರಿಪರಿ ವಿಧವೆಲ್ಲ ಭ್ರಾಂತಿಯೆಂದು ತಿಳಿದು
ಪರಮಪುರುಷ ಹರಿಯ ನೆರೆ ನಂಬಿದವರಿಗೆ ಅ.ಪ.

ಪಾತಕಿಯಾದರೇನೋ ಸರ್ವಪ್ರಾಣಿ
ಘಾತಕಿಯಾದರೇನೊ
ನೀತಿಯ ಬಿಟ್ಟು ದುಷ್ಕರ್ಮಿಯಾದರೇನೋ
ಪ್ರೀತಿಯಿಂದಜಾಮಿಳನ ಸಲಹಿದ ಹರಿಯ ೧

ಕಡುಮೂರ್ಖನಾದರೇನೋ ದುಷ್ಕರ್ಮವ
ಹಿಡಿದಾತನಾದರೇನೊ
ಜಡನಾದರೇನಲ್ಪಜಾತಿಯಾದರೇನೋ
ಬಿಡದೆ ಪ್ರಹ್ಲಾದನ ಸಲಹಿದ ಹರಿಯ ೨

ಸಕಲ ತೀರ್ಥಕ್ಷೇತ್ರದಿ ಮಾಡಿದಂಥ
ನಿಖಿಳ ಪುಣ್ಯದ ಫಲವು
ಭಕುತಿ ಪೂರ್ವಕವಾಗಿ ಬಿಡದನುದಿನದಲಿ
ಪ್ರಕಟ ಪುರಂದರವಿಠಲನ ನಾಮ ೩

## ೨೯೦. ಹನುಮನ ಮತವೆ ಹರಿಯ ಮತವೊ

[ ವಾಯುದೇವರು-ಹನುಮಂತ ]

ರಾಗ: ಖರಹರಪ್ರಿಯ ತಾಳ: ಆದಿ

ಹನುಮನ ಮತವೆ ಹರಿಯ ಮತವೊ ಪ.

ಹರಿಯ ಮತವೆ ಹನುಮನ ಮತವೊ ಅ.ಪ.

ಹನುಮನ ನಂಬಿದ ಸುಗ್ರೀವ ಗೆದ್ದ
ಹನುಮನ ನಂಬದ ವಾಲಿಯು ಬಿದ್ದ ೧

ಹನುಮನ ನಂಬಿದ ವಿಭೀಷಣ ಗೆದ್ದ
ಹನುಮನ ನಂಬದ ರಾವಣ ಬಿದ್ದ ೨

ಹನುಮ ಪುರಂದರವಿಠಲನ ದಾಸ
ಪುರಂದರವಿಠಲನು ಹನುಮನೋಲ್ಲಾಸ ೩

## ೨೯೧. ಹರಿ ಕುಣಿದ

[ ಶ್ರೀಕೃಷ್ಣಲೀಲೆ ]

ರಾಗ: ಬೇಹಾಗು ತಾಳ: ಆದಿ

ಹರಿ ಕುಣಿದ ನಮ್ಮ
ಹರಿ ಕುಣಿದ ಪ.

ಅಕಳಂಕ ಚರಿತ
ಮಕರ ಕುಂಡಲಧರ
ಸಕಲರ ಪಾಲಿಪ ಹರಿ ಕುಣಿದ ೧

ಅರಳೆಲೆ ಮಾಗಾಯಿ
ಕೊರಳ ಮುತ್ತಿನ ಸರ
ತರಳೆಯರೊಡಗೂಡಿ ಹರಿ ಕುಣಿದ ೨

ಅಂದುಗೆ ಪಾಡಗ
ಬಿಂದಲಿ ಬಾಪುರಿ
ಚಂದದಿ ನಲಿವುತ ಹರಿ ಕುಣಿದ ೩

ಉಟ್ಟ ಪಟ್ಟೆಯ ದಟ್ಟಿ
ಇಟ್ಟ ಕಾಂಚಿಯ ದಾಮ
ದಿಟ್ಟ ಮಲ್ಲರ ಗಂಡ ಹರಿ ಕುಣಿದ ೪

ಪರಮ ಭಾಗವತರ
ಕೇರಿಯೊಳಾಡುವ
ಪುರಂದರವಿಠಲ ಹರಿ ಕುಣಿದ ೫

## ೨೯೨. ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ

[ ಲೋಕನೀತಿ ]

ರಾಗ: ಪೂರ್ವಿಕಲ್ಯಾಣಿ

ತಾಳ: ಅಟ್ಟ

ಹರಿ ಕೊಟ್ಟ ಕಾಲಕ್ಕೆ ಉಣಲಿಲ್ಲ ಪ.

ಹರಿ ಕೊಡದ ಕಾಲಕ್ಕೆ ಬಾಯ್ ಬಿಡುವೆಯಲ್ಲೊ ಪ್ರಾಣಿ ಅ.ಪ.

ಹತ್ತು ಸಾವಿರ ಹೊನ್ನು ತಿಪ್ಪೇಲಿ ಹೂಳಿಟ್ಟು
ಮತ್ತೆ ಉಪ್ಪಿಲ್ಲದೆ ಉಂಡೆಯಲ್ಲೊ ಪ್ರಾಣಿ
ಹತ್ತುಸಾವಿರ ಹೊನ್ನು ತಿಪ್ಪೇಲಿ ಪೋಪಾಗ
ಮೃತ್ತಿಕೆ ಬಾಯಲ್ಲಿ ಬಿತ್ತಲ್ಲೊ ಪ್ರಾಣಿ ೧

ಹುಗ್ಗಿಯು ತುಪ್ಪವು ಅಗ್ಗವಾಗಿರಲಿಕ್ಕೆ
ಗುಗ್ಗರಿಯನ್ನವ ತಿಂದೆಲ್ಲೊ ಪ್ರಾಣಿ
ಹೆಗ್ಗಳದ ಭಾಗ್ಯವು ಫಳಿಗೇಲಿ ಪೋಪಾಗ
ಬುಗ್ಗೆಯ ಹೊಯ್ಕೊಂಡು ಹೋದೆಯಲ್ಲೊ ಪ್ರಾಣಿ ೨

ನೆಂಟರಿಷ್ಟರು ಬಂದು ಮನೆ ಮುಂದೆ ಕುಳಿತಿರೆ
ಕುಂಟ ಸುದ್ದಿಯನಾಡಿದೆಯಲ್ಲೋ ಪ್ರಾಣಿ
ಕಂಟಕ ಯಮನವರು ಕುಂಠಿಸುತ್ತೆಳೆವಾಗ
ನಂಟ ಶ್ರೀ ಪುರಂದರವಿಠಲನು ಪ್ರಾಣಿ ೩

## ೨೯೩. ಹರಿ ಚಿತ್ತ ಸತ್ಯ ಹರಿ ಚಿತ್ತ

[ ಲೋಕನೀತಿ ]

ರಾಗ: ಪೂರ್ವಿಕಲ್ಯಾಣಿ ತಾಳ: ಅಟ್ಟ

ಹರಿ ಚಿತ್ತ ಸತ್ಯ ಹರಿ ಚಿತ್ತ ಪ.

ನರ ಚಿತ್ತಕ್ಕೆ ಬಂದದ್ದು ಲವಲೇಶ ನಡೆಯದು ಅ.ಪ.

ಮಡದಿ ಮಕ್ಕಳ ಭಾಗ್ಯ ಬಯಸೋದು ನರಚಿತ್ತ
ಮದುವ್ಯಾಗದಿರುವುದು ಹರಿಚಿತ್ತವು
ಕುದುರೆ ಅಂದಣ ಆನೆ ಬಯಸೋದು ನರಚಿತ್ತ
ಪದಚಾರಿಯಾಗೋದು ಹರಿಚಿತ್ತವಯ್ಯ ೧

ವಿಧವಿಧ ಯಾತ್ರೆಯ ಬಯಸೋದು ನರಚಿತ್ತ
ಒದಗಿ ಬರುವ ರೋಗ ಹರಿಚಿತ್ತವು
ಸದಾ ಅನ್ನದಾನವ ಬಯಸೋದು ನರಚಿತ್ತ
ಹಸಿದು ಅಳುವುದು ಹರಿಚಿತ್ತವಯ್ಯ ೨

ಧರಣಿಯನಾಳಬೇಕೆಂಬುದು ನರಚಿತ್ತ
ಪರರ ಸೇವಿಸುವುದು ಹರಿ ಚಿತ್ತವು
ಪುರಂದರವಿಠಲನ ಬಯಸೋದು ನರಚಿತ್ತ
ದುರಿತವ ಕಳೆವುದೆ ಹರಿಚಿತ್ತವಯ್ಯ ೩

## ೨೯೪. ಹರಿದಾಸರಿಗಿನ್ನು ಸರಿಯುಂಟೆ

[ ಹರಿದಾಸರು ]

ರಾಗ: ಪಂತುವರಾಳಿ ತಾಳ: ಅಟ್ಟ

ಹರಿದಾಸರಿಗಿನ್ನು ಸರಿಯುಂಟೆ ನರ
ಹರಿಯ ನಂಬಿದರಿಗೆ ಕೇಡುಂಟೇ ಮನುಜಾ? ಪ.

ಮಾರಿಯ ಕೈಯಲಿ ನೀರ ಹೊರಿಸುವರು
ಘೋರ ಮಸಣಿಯಿಂದ ಕಸ ಬಳಿಸುವರು
ಕ್ರೂರ ಮೃತ್ಯುವಿನ ಕೈಲಿ ಭತ್ತ ಕುಟ್ಟಿಸುವರು
ಜವನ ಕೈಯಲಿ ಜಂಗುಳಿ ಕಾಯಿಸುವರು ೧

ಬೊಮ್ಮ ಬೀರ ಬೇತಾಳ ಜಟ್ಟಿಗರೆಲ್ಲ
ಕರ್ಮದ ಕಡಲೊಳು ಮುಳುಗಿರಲು
ಒಮ್ಮೆ ಹರಿದಾಸರ ಪಾದ ಸೋಕಲು ಬೇಗ
ಕರ್ಮದ ಕಡಲಿಂದ ಕಡೆಹಾಯ್ವುವರು ೨

ಜಕ್ಕಣಿ ಜಲದೇವರು ಮೊದಲಾದ
ಭಿಕ್ಕಾರಿ ದೈವವ ಪೂಜಿಸಲು
ಲೋಕನಾಯಕ ಸಿರಿ ಪುರಂದರವಿಠಲನ
ಸಾಕಾರವಾದಂಥ ಪರಮ ಭಾಗವತರು ೩

---

ಹರಿದಾಸರ ಮಹಾತ್ಮ್ಯ ಮಿಗಿಲಾದದ್ದು ಎಂಬುದನ್ನು ವಿವಿಧ ದೃಷ್ಟಾಂತಗಳಿಂದ ಬಿಂಬಿಸಲಾಗಿದೆ. ಮಸಣಿ-ಪಿಶಾಚ ದೇವತೆ, ಬೊಮ್ಮಬೀರ, ಬೇತಾಳಗಳು ಗ್ರಾಮದೇವತೆಗಳು. ಜಕ್ಕಣಿ ಉತ್ತರ ಕರ್ನಾಟಕದಲ್ಲಿಯ ಇಂಥದೇ ದೇವತೆ.

## ೨೯೫. ಹರಿಕಥಾ ಶ್ರವಣ ಮಾಡೋ

[ ಶ್ರೀಹರಿಸ್ತುತಿ ]

ರಾಗ: ಯಮುನಾ ಕಲ್ಯಾಣಿ ತಾಳ: ಆದಿ

ಹರಿಕಥಾ ಶ್ರವಣ ಮಾಡೋ ಪಾಡೋ
ಹರಿಕಥಾ ಶ್ರವಣ ಮಾಡೋ ಪ.

ಪಥಾ ವೈಕುಂಠಕಿದು ನೋಡೊ ಅ.ಪ.

ಸರಸಿಜನಾಭನ ಸರ್ವದಾ ಹೊಗಳುತ
ದುರಿತ ದೂರಕೀಡ್ಯಾಡೋ ೧

ಜ್ಞಾನ ಭಕುತಿ ವೈರಾಗ್ಯವೀವ ನಮ್ಮ
ಆನಂದತೀರ್ಥರ ಪಾಡೋ ೨

ಪರಮ ಪುರುಷ ಶ್ರೀ ಪುರಂದರವಿಠಲನ
ಚರಣಕಮಲದಲಿ ಕೂಡೋ ೩

## ೨೯೬. ಹರಿನಾಮದರಗಿಣಿಯು ಹಾರುತಿದೆ

[ ಶ್ರೀಹರಿಸ್ತುತಿ-ಚತುರೋಕ್ತಿ ]

ರಾಗ: ಕಾಂಬೋದಿ
ತಾಳ: ಅಟ್ಟ

ಹರಿನಾಮದರಗಿಣಿಯು ಹಾರುತಿದೆ ಜಗದಿ
ಪರಮ ಭಾಗವತರು ಬಲೆಯ ಬೀಸುವರು ಪ.

ಕೋಪವೆಂಬ ಮಾರ್ಜಾಲ ಕಂಡರೆ ನುಂಗುವುದು
ತಾಪವೆಂಬುವ ಹುಲಿಯ ಕೊಂಡೊಯ್ವುದು
ಕಾಪಾಡಲದನೊಯ್ದು ಹೃದಯದೊಳಗಿಂಬಿಟ್ಟು
ಆಪತ್ತಿಗೊದಗುವುದು ಆ ಮುದ್ದು ಅರಗಿಣಿಯು ೧

ದಾರಿಯಲಿ ನಡೆವಾಗ ಚೋರರುಪಟಳವಿಲ್ಲ
ಮಾರಿ ಬಂದರೆ ಅದನು ಹೊಡೆದು ನೂಕುವುದು
ಕ್ರೂರ ಯಮಭಟರನ್ನು ಮೂಗು ರೆಕ್ಕೆಲಿ ಬಡಿದು
ದಾರಿ ತೋರುವುದು ಮುರಾರಿ ಪಟ್ಟಣಕೆ ೨

ಎಷ್ಟು ವರ್ಣಿಸಲಿ ನಾ ಈ ಮುದ್ದು ಅರಗಿಣಿಯ
ಹೊಟ್ಟೆಯೊಳಗೀರೇಳು ಜಗವನಿಂಬಿಟ್ಟು
ಸೃಷ್ಟೀಶ ಪುರಂದರವಿಟ್ಠಲನ ನೆನೆನೆನೆದು ಮುಟ್ಟಿ
ಭಜಿಸುವುದು ನೀವೀ ಮುದ್ದು ಅರಗಿಣಿಯ ೩

## ೨೯೭. ಹರಿ ನಿನ್ನೊಲುಮೆಯು ಆಗುವತನಕ

[ ಲೋಕನೀತಿ-ಸಮರ್ಪಣಭಾವ ]

ರಾಗ: ಧನಾಸರಿ
ತಾಳ: ಆದಿ

ಹರಿ ನಿನ್ನೊಲುಮೆಯು ಆಗುವತನಕ
ಅರಿತು ಸುಮ್ಮನಿರುವುದೆ ಲೇಸು ಪ.

ಮರಳಿ ಮರಳಿ ತಾ ಪಡೆಯದ ಭಾಗ್ಯಕೆ
ಹೊರಳಿ ಹೊರಳಿ ಅತ್ತರೆ ಬಂದೀತೆ ಅ.ಪ.

ದೂರುಬರುವ ತೆರ ನಂಬಿಕೆ ಕೊಟ್ಟರೆ ದುರ್ಜನ ಬರುವುದು ತಪ್ಪೀತೆ
ದೂರದಿ ನಿಂತು ಮೊರೆಯಿಟ್ಟು ಕೂಗಲು ಚೋರರಿಗೆ ದಯ ಪುಟ್ಟೀತೆ
ಬಾರಿ ಬಾರಿಗೆ ಪಾತಿವ್ರತ್ಯವ ಬೋಧಿಸೆ ಜಾರೆಗದರ ನಿಜ ಸೊಗಸೀತೆ
ಊರು ಬಿಟ್ಟು ಪರವೂರಿಗೆ ಪೋದರೆ ಪ್ರಾರಬ್ಧವು ಬೇರಾದೀತೆ ೧

ಪಟ್ಟೆಮಂಚ ತಿರುವಿಟ್ಟರೆ ಫಣೆಯೊಳು ಪುಟ್ಟಿದ ಭ್ರಮೆಯು ಬಿಟ್ಟೀತೆ
ಹೊಟ್ಟೆಲಿ ಸುತರಿಲ್ಲೆಂದತ್ತು ಕರೆದರೆ ಹುಟ್ಟುಬಂಜೆಗೆ ಮಕ್ಕಳಾದೀತೆ
ಬೆಟ್ಟದ ನವಿಲಿಗೆ ಕಣ್ಣೀರು ಬಂದರೆ ಬೇಟೆಗಾರನಿಗೆ ದಯ ಪುಟ್ಟೀತೆ
ಕೆಟ್ಟ ಹಾವು ಕಚ್ಚಿದ ಘಾಯಕ್ಕೆ ಹಳೆ ಬಟ್ಟೆಯೊರಸೆ ವಿಷ ಹೋದೀತೆ ೨

ಧನಿಕರ ಕಂಡು ದೈನ್ಯವಪಟ್ಟರೆ ತನ ದಾರಿದ್ರ್ಯವು ಹಿಂಗೀತೆ
ಎಣಿಸಿಕೊಂಡೇಳುಹಂಜಿಯ ನೂತರೆ ಮಣಿಯದ ಸಾಲವು ತೀರೀತೆ
ಮುನಿಸಿಂದ ಬೈದಾಡುತಲಿದ್ದರೆ ಮುರಹರ ಭಜನೆಯು ಆದೀತೆ
ಅನುದಿನ ನಮ್ಮ ಪುರಂದರವಿಠಲನ ನೆನೆದಲ್ಲದೆ ಭವ ಹಿಂಗೀತೆ ೩

## ೨೯೮. ಹರಿಭಕುತಿ ಉಳ್ಳವರ ಶರೀರವೆ

**[ಶ್ರೀಹರಿ ಸ್ತುತಿ-ಚತುರೋಕ್ತಿ]**

**ರಾಗ: ಯದುಕುಲ ಕಾಂಬೋದಿ** **ತಾಳ: ಝಂಪೆ**

ಹರಿಭಕುತಿ ಉಳ್ಳವರ ಶರೀರವೆ ಕುರುಕ್ಷೇತ್ರ ಪ.

ಅವರು ನರರೆಂದು ಬಗೆವವರೆ ನರಕವಾಸಿಗಳು ಅ.ಪ.

ಪದುಮಲನ ನೆನೆಸುವ ಹೃದಯ ಕಾಶೀಪುರವು
ಮಧುವೈರಿ ನೆನೆವ ಮನ ಮಣಿಕರ್ಣಿಕೆಯು
ಪದುಮನಾಭನ ಪಾಡುವ ವದನವೆ ವೈಕುಂಠ
ಪದುಮಲನ ಬಣ್ಣಿಸುವ ಜಿಹ್ವೆ ಶ್ರೀಮುಷ್ಣ ೧

ನರಹರಿಯನೀಕ್ಷಿಸುವ ನಯನ ದ್ವಾರಾವತಿಯು
ಸಿರಿಧರಗೆ ಶರಣೆಂಬ ಶಿರವೆ ಬದರಿ
ಮುರಹರನ ಕಥೆಯ ಕೇಳುವ ಕಿವಿಯೆ ಕೇದಾರ
ಹರಿಯ ನಿರ್ಮಾಲ್ಯ ಘ್ರಾಣಿಪ ಮೂಗು ಮಧುರೆ ೨

ಲಕ್ಷ ಪ್ರದಕ್ಷಿಣೆ ಮಾಡುವಾ ಚರಣ ಮಾಯಾವತಿಯು
ಲಕ್ಷ್ಮೀಪತಿಯ ಪೂಜಿಸುವ ಕರವೆ ಕಂಚಿ
ಶಿಕ್ಷಿಸುವುದು ಸುಕೃತ ದುಷ್ಕೃತ ಆಲಿಸಿ ಕೇಳೊ
ಪಕ್ಷಿವಾಹನ ಪುರಂದರವಿಠಲನು ಕೊಡುವ ಮುಕುತಿ ೩

---

ಹರಿಭಕ್ತರು ಪವಿತ್ರ ಕ್ಷೇತ್ರವಿದ್ದಂತೆ. ಅವರ ಒಂದೊಂದು ಅಂಗವನ್ನು, ದೇಶದ ತೀರ್ಥಕ್ಷೇತ್ರಗಳಿಗೆ ಹೋಲಿಸಿದ್ದಾಗಿದೆ. ಶ್ರೀಮುಷ್ಣದಲ್ಲಿ ವರಾಹದೇವರ ಮೂರ್ತಿಯಿದ್ದು ಇಲ್ಲಿಯೇ ವರಾಹವತಾರವಾಗಿದೆಯೆಂದು ಪ್ರತೀತಿ.

## ೨೯೯. ಹರಿ ಸ್ಮರಣೆ ಮಾಡೊ ನಿರಂತರ

**[ ಶ್ರೀಹರಿ ಸ್ತುತಿ-ನಾಮ ಮಹಿಮೆ ]**

**ರಾಗ: ಯಮುನಾಕಲ್ಯಾಣಿ** **ತಾಳ: ಏಕ**

ಹರಿ ಸ್ಮರಣೆ ಮಾಡೊ ನಿರಂತರ ಪ.

ಪರಗತಿಗೆ ಇದು ನಿಧಾನ ಅ.ಪ.

ದುರಿತಗಜಕ್ಕೆ ಕಂಠೀರವನೆನಿಸಿದ
ಶರಣಾಗತ ರಕ್ಷಕ ಪಾವನ ನೀ ೧

ಸ್ಮರಣೆಗೈದ ಪ್ರಹ್ಲಾದನ ರಕ್ಷಿಸಿದ
ದುರುಳ ಹಿರಣ್ಯಕನುದರವ ಸೀಳಿದ ೨

ತರುಣಿ ದ್ರೌಪದಿ ಮೊರೆಯಿಡಲಾಕ್ಷಣ
ಭರದಿಂದಕ್ಷಯವಿತ್ತ ಮಹಾತ್ಮನ ೩

ಅಂದು ಅಜಾಮಿಳ ಕಂದನ ಕರೆಯಲು
ಬಂದು ಸಲಹಿ ಆನಂದವ ತೋರಿದ ೪

ಶ್ರೀಶ ಪುರಂದರವಿಟ್ಠಲರಾಯನ
ಸೃಷ್ಟಿಗೊಡೆಯನ ಮುಟ್ಟಿ ಭಜಿಸಿ ನೀ ೫

## ೩೦೦. ಹರಿಯ ದರುಶನಕಾಗಿ ನಾರದರು ಬರಲು

[ ಶ್ರೀಹರಿ ಸ್ತುತಿ-ನಾರದೀಯ ]

ರಾಗ: ಸಾವೇರಿ ತಾಳ: ತ್ರಿವಿಡೆ

ಹರಿಯ ದರುಶನಕಾಗಿ ನಾರದರು ಬರಲು
ಸಿರಿದೇವಿ ಹೊರಗಿನ ಬಾಗಿಲಲ್ಲಿರಲು ಪ.

ಕರಕಮಲ ಮುಗಿದು ದೊರೆ ಸಮಯವೇನೆನಲು
ನಾರಿಮಣಿ ಲಕುಮಿಯು ಅರುಹುವಳಾಗ ಅ.ಪ.

ವರದೇವತಾರ್ಚನೆಗೆ ಅರಮನೆಯೊಳಗೆ
ಭರದಿಂದ ಕುಳಿತಿಹನು ಪರಮಾತ್ಮನು
ಸರಸಿಜೋದ್ಭವ ಮುಖ್ಯ ಸುರರಿಗೆ ದೊರೆಯೀತ
ಪರಮ ಆಶ್ಚರ್ಯವನರಿಯಬೇಕೆಂದ ೧

ಕಳವಳಿಸುತ ಮನೆಯೊಳಗೆ ದೂರುತೆ ಕಂಡ
ಥಳಿಥಳಿಸುವ ರನ್ನ ಸಂಪುಟದಿ
ಕಲುಷದೂರರಾದ ಪ್ರಹ್ಲಾದ ನಾರದ
ಬಲಿ ಅಂಬರೀಷ ಮುಖ್ಯರ ಪೂಜೆಗೈವುದನು ೨

ಹರಿದಾಸರ ಚರಣ ರಜಗಳ ತುಂಬಿಟ್ಟು
ತೆರೆದು ತೋರಿದ ಮುನಿಗೆ ಪರಮಾತ್ಮನು
ಪರಮಾನಂದಭರಿತನಾಗಿ ನಾರದಮುನಿ
ಸಿರಿಪತಿ ಪುರಂದರವಿಠಲನನು ಸ್ತುತಿಸಿದ ೩

---

ವೈಕುಂಠದಲ್ಲಿ, ಲಕ್ಷ್ಮೀಸಹಿತನಾದ ಶ್ರೀಹರಿಯು ನಾರದರಿಗೆ ಭಕ್ತರ, ಹರಿದಾಸರ ಪಾದರಜವನ್ನು ಹಾಕಿದ ರತ್ನಸಂಪುಟವನ್ನು ತೆರೆದು ತೋರಿಸುತ್ತಾನೆ.

## ೩೦೧. ಹರಿಯ ನೆನೆಯದ ನರಜನ್ಮವೇಕೆ

[ ಲೋಕನೀತಿ ]

ರಾಗ: ಶಂಕರಾಭರಣ ತಾಳ: ಅಟ್ಟ

ಹರಿಯ ನೆನೆಯದ ನರಜನ್ಮವೇಕೆ ನರ-
ಹರಿಯ ಕೊಂಡಾಡದ ನಾಲಿಗೆಯೇಕೆ ಪ.

ಸತ್ಯಶೌಚವಿಲ್ಲದಾಚಾರವೇಕೆ
ನಿತ್ಯ ನೇಮವಿಲ್ಲದ ಜಪತಪವೇಕೆ
ಭಕ್ತಿಲಿ ಮಾಡದ ಹರಿಪೂಜೆಯೇಕೆ
ಉತ್ತಮರಿಲ್ಲದ ಸಭೆಯು ತಾನೇಕೆ ೧

ವೇದವನೋದದ ವಿಪ್ರ ತಾನೇಕೆ
ಕಾದಲರಿಯದ ಕ್ಷತ್ರಿಯನೇಕೆ
ಕ್ರೋಧವ ಬಿಡದ ಸಂನ್ಯಾಸಿ ತಾನೇಕೆ
ಆದರವಿಲ್ಲದ ಅಮೃತಾನ್ನವೇಕೆ ೨

ಸಾಲದಿ ಹೂಳಿದ ಸಂಸಾರವೇಕೆ
ಬಾಲಕರಿಲ್ಲದ ಭಾಗ್ಯವಿದ್ದೇಕೆ
ವೇಳೆಗೆ ಒದಗದ ನಂಟರಿದ್ದೇಕೆ ಅನು-
ಕೂಲವಿಲ್ಲದ ಸತಿ ಸಂಗ ತಾನೇಕೆ ೩

ಮಾತಾಪಿತರ ಪೊರೆಯದ ಮಕ್ಕಳೇಕೆ
ಮಾತು ಕೇಳದ ಸೊಸೆಗೊಡವೆ ತಾನೇಕೆ
ನೀತಿನೇರಿಲ್ಲದ ಕೂಟ ತಾನೇಕೆ ಅ-
ನಾಥನಾದ ಮೇಲೆ ಕೋಪವದೇಕೆ ೪

ಅಳಿಸಿ ಅಳಿದು ಪೋಪ ಮಕ್ಕಳಿದ್ದೇಕೆ
ತಿಳಿದು ಬುದ್ಧಿಯ ಪೇಳದ ಗುರುವೇಕೆ
ನಳಿನನಾಭ ನಮ್ಮ ಪುರಂದರವಿಠಲನ
ಚೆಲುವಮೂರ್ತಿಯ ನೋಡದ ಕಂಗಳೇಕೆ ೫

## ೩೦೨. ಹರಿಯೆಂದು ಮನದಲಿ ಮರೆದೊಮ್ಮೆ

[ಶ್ರೀಹರಿಸ್ತುತಿ-ನಾಮಮಹಿಮೆ]

**ರಾಗ: ಬಿಲಹರಿ** **ತಾಳ: ತ್ರಿವಿಡೆ**

ಹರಿಯೆಂದು ಮನದಲಿ ಮರೆದೊಮ್ಮೆ ನೆನೆದರೆ
ದುರಿತ ಪರ್ವತಗಳ ಖಂಡಿಪುದು ವಜ್ರದಂತೆ ಪ.

ಮೇರು ಸುವರ್ಣ ದಾನವ ಮಾಡಲು ಪುಣ್ಯ
ನೂರು ಕನ್ಯಾದಾನವ ಮಾಡಲು
ಧಾರುಣಿಯೆಲ್ಲವ ಧಾರೆಯನೆರೆಯಲು
ನಾರಾಯಣ ಸ್ಮರಣೆಗೆ ಸರಿಯಹುದೆ ೧

ಹತ್ತು ಲಕ್ಷ ಗೋದಾನ ಮಾಡಲು ಪುಣ್ಯ
ವ್ರತಗಳ ಅನುದಿನ ಆಚರಿಸಲು
ಶತಕೋಟಿ ಯಜ್ಞವ ಮಾಡಲು ಲಕ್ಷ್ಮೀ
ಪತಿ ನಾಮಸ್ಮರಣೆಗೆ ಸರಿಯೆನ್ನಬಹುದೆ ೨

ಗಂಗೆ ಕಾಳಿಂದಿ ಗೋದಾವರಿ ಕಾವೇರಿ
ತುಂಗಭದ್ರೆಯಲಿ ಸ್ನಾನವ ಮಾಡಲು
ಮಂಗಳ ಮೂರುತಿ ಪುರಂದರವಿಟ್ಠಲ
ರಂಗನ ಸ್ಮರಣೆಗೆ ಸರಿಯೆನ್ನಬಹುದೆ ೩

## ೩೦೩. ಹರಿಯೇ ಸರ್ವೋತ್ತಮು

[ ಶ್ರೀಹರಿಸ್ತುತಿ ]

ರಾಗ: ಸಾವೇರಿ ತಾಳ: ಝಂಪೆ

ಹರಿಯೇ ಸರ್ವೋತ್ತಮ ಹರಿಯೇ ಪರದೇವತೆ
ಹರಿ ಸರ್ವ ವಿಶ್ವಮಯಂ ಜಗತು ಪ.

ಹರಿಯಲ್ಲದನ್ಯತ್ರ ದೈವಂಗಳಿಲ್ಲವೆಂದು
ಉರಗನ ಹೆಡೆಯನ್ನು ಪಿಡಿದು ಹೇಳುವೆನಯ್ಯ ಅ.ಪ.

ಜಗವ ಪುಟ್ಟಿಸುವ ಬ್ರಹ್ಮ ನಿನ್ನ ಮಗ
ಜಗವ ಸಂಹರಿಸುವ ರುದ್ರ ಮೊಮ್ಮಗನು
ಜಗದ ಪಾವನೆ ಭಾಗೀರಥಿ ನಿನ್ನ ಮಗಳಯ್ಯ
ಜಗವ ಜೀವರ ಮಾತೆ ನಿನ್ನರಸಿಯೊ ದೇವ ೧

ವಿಶ್ವತೋಮುಖ ನೀನೇ ವಿಶ್ವತಶ್ಚಕ್ಷು ನೀನೆ
ವಿಶ್ವತೋಬಾಹು ವಿಶ್ವಪಾದನು ನೀನೆ
ವಿಶ್ವಉದರ ನೀನೇ ವಿಶ್ವವ್ಯಾಪಕ ನೀನೆ
ವಿಶ್ವನಾಟಕ ಸೂತ್ರದಾರಿಯೆ ವಿಷ್ಣುವೆ ೨

ಆಗಮ ನಿಗಮ ಪುರಾಣಶಾಸ್ತ್ರಂಗಳಲ್ಲಿ
ಯೋಗಿಗಳರಸಿ ನಿಮ್ಮ ಕಾಣದಿಪ್ಪರೊ
ನಾಗಶಯನ ಭೋಗಿ ಭೂಷಣವಂದಿತ
ಭಾಗವತ ಪ್ರಿಯ ಶ್ರೀ ಪುರಂದರವಿಠಲ ೩

## ೩೦೮. ಹರಿ ಹರಿಯೆನಲಿಕ್ಕೆ ಹೊತ್ತಿಲ್ಲ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಪೂರ್ವಿ ತಾಳ: ಏಕ

ಹರಿ ಹರಿಯೆನಲಿಕ್ಕೆ ಹೊತ್ತಿಲ್ಲ
ನರಜನ್ಮ ವ್ಯರ್ಥವಾಗಿ ಹೋಗುತದಲ್ಲ ಪ.

ಹರಿ ಜಾಗರಣೆಯಲ್ಲಿ ಪಾರಣೆ ಚಿಂತೆ
ನಿರತ ಯಾತ್ರೆಯಲ್ಲಿ ಶಾಕದ ಚಿಂತೆ
ಸರುತ ಸತ್ಕಾರ್ಯದಿ ಧನದ ಮೇಲಿನ ಚಿಂತೆ
ಪುರಾಣ ಕೇಳ್ವಾಗ ಗೃಹದ ಚಿಂತೆ ೧

ಕರ್ಮದಿ ಒಂದು ಚಿಂತೆ ಧರ್ಮದಿ ಒಂದು ಚಿಂತೆ
ಪೆರ್ಮನ ಮಾಡಲು ಬಲು ಚಿಂತೆ
ವರ್ಮ ವೈರದಿ ಚಿಂತೆ ಈರ್ಮನಸ್ಸಾಗೆ ಚಿಂತೆ
ದುರ್ಮದದಿ ನಡೆಯೆ ಪ್ರಾಣದ ಚಿಂತೆ ೨

ಗಂಗೆ ಮುಳುಗುವಾಗ ಚೆಂಬುಮೇಲಿನ ಚಿಂತೆ
ಸಂಗಡದವರು ಪೋಗುವ ಚಿಂತೆ
ಪನ್ನಗಶಯನ ಶ್ರೀಪುರಂದರವಿಠಲನ್ನ
ಹಿಂಗದೆ ಭಜಿಸಲು ಸತತ ನಿಶ್ಚಿಂತೆ ೩

## ೩೦೫. ಹಿಂದಿಲ್ಲ ಸ್ವಾಮಿ ಮುಂದಿಲ್ಲ

[ಲೋಕನೀತಿ-ಚತುರೋಕ್ತಿ]

ರಾಗ: ಪಂತುವರಾಳಿ ತಾಳ: ಅಟ್ಟ

ಹಿಂದಿಲ್ಲ ಸ್ವಾಮಿ ಮುಂದಿಲ್ಲ
ಗೋವಿಂದ ನೀನಲ್ಲದೆ ಇಹಪರವಿಲ್ಲ ಪ.

ಪರರ ಬೇಡಿಪ್ಪಂತೆ ಗತಿಯಾಯಿತಲ್ಲ
ನರರ ತುತಿಸಿ ನಾಲಿಗೆ ಬರಡಾಯಿತಲ್ಲ
ಪರವಿಲ್ಲ ಇಹವಿಲ್ಲ ನರಜನ್ಮ ಸ್ಥಿರವಿಲ್ಲ
ನರಗೆ ಪಾಮರಗೆ ಪಾಪದ ಪಂಜರಗೆ ೧

ತನುವು ತನ್ನದಲ್ಲ ತನ್ನವರಾರಿಲ್ಲ
ಘನವಾಗಿ ಇರುವಾಗ ಸತಿ ಸುತರೆಲ್ಲ
ತನು ಮನ ಧನ ತಪ್ಪಿ ತಲ್ಲಣಿಸುವಾಗ
ವನಜನಾಭ ನೀನಲ್ಲದೆ ಯಾರಿಲ್ಲ ೨

ಮಾತಾಪಿತ ಮೊದಲಾದ ಗೋತ್ರಜರು ಸಂ-
ಪ್ರೀತಿಯೊಳಿರುವಾಗ ಮನ್ನಿಪರೆಲ್ಲ
ಕಾತರನಾಗಿ ಯಮ ಕೊಂಡೊಯ್ಯುವಾಗ ಸಂ-
ಗಾತ ಇನ್ನಾರಯ್ಯ ಪುರಂದರವಿಠಲ ೩

## ೩೦೬. ಹಿಗ್ಗುವೆ ಯಾಕೊ ಈ ದೇಹಕ್ಕೆ

[ ಲೋಕನೀತಿ-ಪ್ರಾಪಂಚಿಕ ]

ರಾಗ: ಭೈರವಿ ತಾಳ: ಅಟ್ಟ

ಹಿಗ್ಗುವೆ ಯಾಕೊ ಈ ದೇಹಕ್ಕೆ ಹಿಗ್ಗುವೆ ಯಾಕೊ ಪ.

ಹಿಗ್ಗುವ ತಗ್ಗುವ ಮುಗ್ಗುವ ಕುಗ್ಗುವ
ಅಗ್ನಿಯೊಳಗೆ ಬಿದ್ದು ದಗ್ಧವಾಗೊ ದೇಹಕ್ಕೆ ಅ.ಪ.

ಸತಿ ಪುರುಷರು ಕೂಡಿ ರತಿಕ್ರೀಡೆಗಳ ಮಾಡಿ
ಪತನಾದ ಇಂದ್ರಿಯ ಪ್ರತಿಮೆಯ ದೇಹಕ್ಕೆ ೧

ಆಗದ ಭೋಗಗಳ ಆಗುಮಾಡುತಲಿದ್ದು
ರೋಗ ಬಂದರೆ ಬಿದ್ದು ಹೋಗುವ ದೇಹಕ್ಕೆ ೨

ಪರರ ಸೇವೆಯ ಮಾಡಿ ನರಕ ಭಾಜನನಾಗಿ
ಮರಳಿ ಮರಳಿ ಬಿದ್ದು ಉರುಳುವ ದೇಹಕ್ಕೆ ೩

ಸೋರುವುದೊಂಭತ್ತು ಬಾಗಿಲ ಮಲಗಳು
ನೀರಿಲ್ಲದಿದ್ದರೆ ನಾರುವ ದೇಹಕ್ಕೆ ೪

ಪುರಂದರವಿಠಲನ ಚರಣ ಕಮಲಕ್ಕೆ
ಎರಗದೆ ತಿರುಗುವ ಗರುವದ ದೇಹಕ್ಕೆ ೫

---

ನಶ್ವರವಾದ, ಕೊನೆಗೊಮ್ಮೆ ಬಿದ್ದುಹೋಗುವ ದೇಹದ ಬಗ್ಗೆ ಹಿಗ್ಗುವುದು ಬೇಡ. ಈ ದೇಹಕ್ಕೆ ಒಂಬತ್ತು ಬಾಗಿಲುಗಳಿವೆ ಕಣ್ಣುಗಳು, ಕಿವಿಗಳು, ಮೂಗಿನ ಹೊಳ್ಳಗಳು-ಇವು ಆರರ ಜೊತೆಗೆ ಬಾಯೊಂದು, ಮಲದ್ವಾರ ಮತ್ತು ಮೂತ್ರದ್ವಾರ.

## ೩೦೭. ಹುಚ್ಚು ಕುನ್ನಿ ಮನವೇ ನೀ

[ ಲೋಕನೀತಿ ]

**ರಾಗ: ಶಂಕರಾಭರಣ** **ತಾಳ: ಆದಿ**

ಹುಚ್ಚು ಕುನ್ನಿ ಮನವೇ ನೀ
ಹುಚ್ಚುಗೊಂಬುದು ಘನವೇ
ಕಚ್ಚುಕದತನವ ಬಿಟ್ಟು
ಅಚ್ಯುತನ ಪದವ ಮುಟ್ಟು ಪ.

ಸ್ನಾನ ಮಾಡಿದರೇನು ಸಂ-
ಧ್ಯಾನ ಮಾಡಿದರೇನು
ಹೀನತನವ ಬಿಡಲಿಲ್ಲ ನೀ
ಸ್ವಾನುಭವವ ಕೂಡಲಿಲ್ಲ ೧

ಜಪವ ಮಾಡಿದರೇನು ನೀ
ತಪವ ಮಾಡಿದರೇನು
ಕಪಟ ಕಲ್ಮಷ ಕಳೆಯಲಿಲ್ಲ
ನಿಪುಣತನ ಪಡೆಯಲಿಲ್ಲ ೨

ಮೂಗು ಹಿಡಿದರೇನು ನೀ
ಮುಸುಕನಿಕ್ಕಿದರೇನು
ಭೋಗಿಶಯನನ ಭಜಿಸಲಿಲ್ಲ
ಬೇಗೆ ಕಳೆಯದೆ ಪೂಜೆ ಮಾಡಲಿಲ್ಲ ೩

ಗುರುವು ನೀನಾದರೇನು ಅತಿ
ಗರುವನಾದಡೇನು
ಗುರುಮಹಿಮೆ ತಿಳಿಯಲಿಲ್ಲ
ಗುರೂಪದೇಶವ ಪಡೆಯಲಿಲ್ಲ ೪

ಹೋಮ ಮಾಡಿದರೇನು ನೀ
ನೇಮ ಮಾಡಿದರೇನು
ರಾಮನಾಮವನು ಸ್ಮರಿಸಲಿಲ್ಲ
ಧಾಮಪಥವ ಹಿಡಿಯಲಿಲ್ಲ ೫

ನವರಂಧ್ರಗಳ ಕಟ್ಟು ನೀ
ನಡೆವ ದಾರಿಯ ಮುಟ್ಟು
ಕವಿದ ಕಾಮಕ್ರೋಧಗಳಟ್ಟು
ರವಿಮಂಡಲ ಮುಟ್ಟು ೬

ಏನು ನೋಡಿದರೇನು ನೀ-
ನೆಂತು ಮಾಡಿದರೇನು
ಜ್ಞಾನದಿಂದ ಪುರಂದರವಿಠಲನ
ಧ್ಯಾನಿಸಲಿಲ್ಲ ಮನವೇ ೭

---

ನಿಜವಾಗಿ ದೈವವನ್ನು ನೆಚ್ಚದ ಬಾಹ್ಯಾಚರಣೆ ತೊಡುಗುವುದು ಸಲ್ಲ. ಕಚ್ಚುಕವತನ-ಚಾಂಚಲ್ಯ, ಧಾಮಪಥ-ಭಕ್ತಿಮಾರ್ಗ.

## ೩೦೮. ಹೂವ ತರುವರ ಮನೆಗೆ ಹುಲ್ಲ ತರುವ

ರಾಗ: ಕಾಂಬೋದಿ

ತಾಳ: ಝಂಪೆ

ಹೂವ ತರುವರ ಮನೆಗೆ ಹುಲ್ಲ ತರುವ ಪ.

ಅವ್ವೆ ಲಕುಮೀರಮಣ ಇವಗಿಲ್ಲ ಗರುವ ಅ.ಪ.

ಒಂದು ದಳ ಶ್ರೀ ತುಳಸಿ ಬಿಂದು ಗಂಗೋದಕವ
ಇಂದಿರಾರಮಣಗರ್ಪಿತವೆನ್ನಲು
ಒಂದೆ ಮನದಲಿ ಸಿಂಧುಶಯನ ಮುಕುಂದಯೆನೆ
ಎಂದೆಂದು ವಾಸಿಪನು ಮಂದಿರದೊಳಗೆ ೧

ಪರಿಪರಿಯ ಪುಷ್ಪಗಳ ಪರಮಾತ್ಮಗರ್ಪಿಸಿ
ಪರಿಪೂರ್ಣನೆಂದು ಪೂಜೆಯನು ಮಾಡೆ
ಸರಸಿಜಾಕ್ಷನು ತನ್ನ ಸಕಲ ಸ್ವಾತಂತ್ರ್ಯದಲಿ
ಸರಿಭಾಗ ಕೊಡುವ ತನ್ನರಮನೆಯ ಒಳಗೆ ೨

ಪಾಂಡವರ ಮನೆಯೊಳಗೆ ಕುದುರೆಗಳ ತಾ ತೊಳೆದು
ಪುಂಡರೀಕಾಕ್ಷ ತಾ ಹುಲ್ಲ ತಂದ
ಅಂಡಜಾಧಿಪ ನಮ್ಮ ಪುರಂದರವಿಟ್ಠಲನು
ತೊಂಡರಿಗೆ ತೊಂಡನಾಗಿ ಸಂಚರಿಸುತಿಹನು ೩

---

ಒಂದು ಹೂವನ್ನಿತ್ತರೂ ಸಾಕು ಹೆಚ್ಚಿನ ಸೇವೆಯನ್ನು ಹರಿಯು ಕೈ ಕೊಳ್ಳುವನು. ಈ ಬಗೆಯ ಸುಲಭಪೂಜೆಯ ಮಹಿಮೆಯನ್ನು ಇಲ್ಲಿ ನಿರೂಪಿಸಿದ್ದಾರೆ. ಸರಿಭಾಗ ಕೊಡುವ-ಭಕ್ತನ ಶ್ರದ್ಧೆಗೆ ಅನುಗುಣವಾಗಿ ವೈಕುಂಠದಲ್ಲಿ ಸ್ಥಾನವನ್ನು ಕೊಡುವ. ಅಂಡಜಾಧಿಪ-ಗರುಡ. ತೊಂಡರು-ಭಕ್ತರು.

## ೩೦೯. ಹೆತ್ತ ತಾಯ್ತಂದೆಗಳ ಚಿತ್ತವ ನೋಯಿಸಿ

**[ ಲೋಕನೀತಿ–ಪ್ರಾಪಂಚಿಕ ]**

**ರಾಗ: ಬಿಲಹರಿ** **ತಾಳ: ಅಟ್ಟ**

ಹೆತ್ತ ತಾಯ್ತಂದೆಗಳ ಚಿತ್ತವ ನೋಯಿಸಿ
ನಿತ್ಯ ದಾನವ ಮಾಡಿ ಫಲವೇನು
ಸತ್ಯ ಸದಾಚಾರ ಇಲ್ಲದವನು ಜಪ
ಹತ್ತು ಸಾವಿರ ಮಾಡಿ ಫಲವೇನು ೧

ತನ್ನ ಸತಿಸುತರು ಬಂಧುಗಳ ನೋಯಿಸಿ
ಚಿನ್ನದಾನವ ಮಾಡಿ ಫಲವೇನು
ಬಿನ್ನಣದಿಂದಲಿ ದೇಶದೇಶವ ತಿರುಗಿ
ಅನ್ನದಾನವ ಮಾಡಿ ಫಲವೇನು ೨

ಗೋಪ್ಯ ಗುಣ ಗುಟ್ಟು ಇಲ್ಲದ ಹೆಣ್ಣಿಗೆ
ರೂಪ ಯವ್ವನವಿದ್ದು ಫಲವೇನು
ತಾಪತ್ರಯದಿ ಸಂಸಾರ ಕೆಡಿಸುವಂಥ
ಪಾಪಿ ಮಗನು ಇದ್ದು ಫಲವೇನು ೩

ತಾಂಡವ ಧನದಿಂದ ತಂದೆ ಮಾತು ಕೇಳದ
ತೊಂಡ ಮಗನು ಇದ್ದು ಫಲವೇನು
ಭಂಡು ಮಾಡಿ ಅತ್ತೆ ಮಾವನ ಬೈವ
ಪುಂಡು ಸೊಸೆಯಿದ್ದು ಫಲವೇನು ೪

ಸ್ನಾನಕ್ಕೆ ಪಾನಕ್ಕೆ ಆಗುವ ತಿಳಿನೀರು
ಕಾನನದೊಳಗಿದ್ದು ಫಲವೇನು
ಆನಂದಮೂರುತಿ ಪುರಂದರವಿಠಲನ
ನೆನೆಯದ ತನುವಿದ್ದು ಫಲವೇನು ೫

## ೩೧೦. ಹೇವವೆಲ್ಲಿಹುದಯ್ಯ ವೈಕುಂಠಪತಿಗೆ

**[ ಶ್ರೀಹರಿಸ್ತುತಿ-ಚತುರೋಕ್ತಿ ]**

**ಶಂಕರಾಭರಣ** **ಅಟ್ಟ**

ಹೇವವೆಲ್ಲಿಹುದಯ್ಯ ವೈಕುಂಠಪತಿಗೆ ಪ.

ಮೌನದಿಂ ಭಾರ್ಗವನು ಮಾತೆಯ ಶಿರವ ತರಿದ ಅ.ಪ.

ಒಬ್ಬ ಮಾವನ ಕೊಂದ ಒಬ್ಬ ಮಾವನ ಎಸೆದ
ಒಬ್ಬ ಮಾವನ ಕೂಡೆ ಕಡಿದಾಡಿದ
ಒಬ್ಬ ಭಾವನ ಹಿಡಿದು ಹೆಡೆ ಮುರಿಯ ಕಟ್ಟಿದ
ಒಬ್ಬ ಮೈದುನಗೆ ಬಂಡಿಯ ಬೋವನಾದ ೧

ಕುಂಭಿನಿಗೆ ಪತಿಯಾದ ಕುಂಭಿನಿಗೆ ಸುತನಾದ
ಕುಂಭಿನೀ ಮಗನ ಸಂಹಾರ ಮಾಡಿದ
ಅಂಬುಧಿಗೆ ಪಿತನಾದ ಅಂಬುಧಿಗೆ ಸುತನಾದ
ಅಂಬುಧೀಜಾತೆಗೆ ಸ್ವಾಮಿಯಾದ ೨

ಬೊಮ್ಮನ ಸಂಹರಿಸಿ ಅವನ ಮಕ್ಕಳನು
ಈ ಮಹಿಯೊಳಗವರ ಹತಮಾಡಿದ
ರಮ್ಮೆ ವೈಕುಂಠಪತಿ ಪುರಂದರವಿಟ್ಠಲ
ಬೊಮ್ಮ ಮೂರುತಿಗೇಕೆ ಬಂಧು ಬಳಗ ೩

---

ವೈರುಧ್ಯವೆನಿಸುವ ಕೆಲವು ಪೌರಾಣಿಕ ಪ್ರಸಂಗಗಳಿವು. ಮಾವ ಕಂಸನನ್ನು ಕೊಂದ, ಮಾವ ಸಮುದ್ರರಾಜನನ್ನು ಶ್ರೀಲಂಕದ ಬಳಿ ಬಾಣದಿಂದ ದೂರಸೆದ. ಸ್ಯಮಂತಕ ಮಣಿಯನ್ನು ತರುವಾಗ, ಪತ್ನಿ ಜಾಂಬವತಿಯ ತಂದೆಯೊಡನೆ ಕಾದಾಡಿದ. ಪತ್ನಿ ರುಕ್ಮಿಣಿಯ ಅಣ್ಣ ರುಕ್ಮ ಈ ಭಾವನನ್ನು, ರುಕ್ಮಿಣೀಕಲ್ಯಾಣದ ಕಾಲಕ್ಕೆ ಕಟ್ಟಿಹಾಕಿದ. ಇನ್ನು ತಂಗಿ ಸುಭದ್ರೆಯ ಗಂಡ (ಮೈದುನ)ಗೆ ಸಾರಥಿಯಾದ. ಕುಂಭಿನಿ ಎಂದರೆ ಭೂದೇವಿಗೆ ಪತಿಯಾದ. ಬೇರೊಬ್ಬ ಕುಂಭಿನಿ-ಯಶೋದೆಗೆ ಮಗನಾದ. ಮತ್ತೊಬ್ಬ ಕುಂಭಿನಿಯ ಮಗ ಶಿಶುಪಾಲನನ್ನು ಸಂಹಾರಮಾಡಿದ.

ಗಂಗಾನದಿಯು ವಿಷ್ಣುವಿನ ಪಾದದಿಂದ ಒಗೆತಂದವಳು ಹಾಗಾಗಿ ಈ ಅಂಬುಧಿಗೆ ಪಿತನೇ ಸೈ. ಇನ್ನೊಂದು ಅಂಬುಧಿ ಸಮುದ್ರರಾಜನ ಮಗಳು ಲಕ್ಷ್ಮಿಗೆ ಪತಿಯಾದ. ಎರಡೇ ನುಡಿಗಳಲ್ಲಿ ಇಷ್ಟೊಂದು ಪೌರಾಣಿಕ ಸಂರ್ಭಗಳನ್ನು ತಂದಿದ್ದಾರೆ.

## ೩೧೧. ಹೊಲೆಯ ಹೊರಗಿಹನೆ

**[ ಲೋಕನೀತಿ-ಬೋಧೆ ]**

**ರಾಗ: ಮುಖಾರಿ** **ತಾಳ: ಝಂಪೆ**

ಹೊಲೆಯ ಹೊರಗಿಹನೆ ಊರೊಳಗಿಲ್ಲವೆ
ಶ್ರೀಹರಿಯ ಭಕುತರು ಪೇಳಿ ಮತ್ತಿದನು ಪ.

ಶೀಲವನು ಕೈಕೊಂಡು ನಡೆಸದಾತನೆ ಹೊಲೆಯ
ಹೇಳಿದ ಹರಿಕತೆಯ ಕೇಳದವ ಹೊಲೆಯ
ಆಳಾಗಿ ಅರಸಂಗೆ ಕೇಡು ಬಗೆವವ ಹೊಲೆಯ
ಸೂಳೆಯನು ಕಾಮಿಸುವ ಶುದ್ಧ ಹೊಲೆಯ ೧

ಕೊಂಡ ಸಾಲಗಳನ್ನು ತಿದ್ದದಾತನೆ ಹೊಲೆಯ
ಲಂಡತನದಲಿ ನಡೆವ ನರ ಭಂಡ ಹೊಲೆಯ
ಉಂಡ ಮನೆಗೆರಡನ್ನು ಬಗೆವಾತನೇ ಹೊಲೆಯ
ಹೆಂಡತಿಯ ಇಚ್ಛೆಯವ ಹೇಡಿ ಹೊಲೆಯ ೨

ಇದ್ದಾಗ ದಾನಧರ್ಮವ ಮಾಡದವ ಹೊಲೆಯ
ಮದ್ದಿಕ್ಕಿ ಕೊಲ್ಲುವವ ಮಾರಿ ಹೊಲೆಯ
ಬದ್ಧವಹ ನಯನುಡಿಯು ಇಲ್ಲದಾತನೆ ಹೊಲೆಯ
ಶುದ್ಧ ತಾನೆಂಬಾತ ಶುಂಠ ಹೊಲೆಯ ೩

ಆಸೆ ಮಾತನು ಕೊಟ್ಟು ಭಾಷೆ ತಪ್ಪುವ ಹೊಲೆಯ
ಲೇಸು ಉಪಕಾರಗಳ ಮಾಡದವ ಹೊಲೆಯ
ಮೋಸದಲಿ ಜೀವನವ ಮುನಿದು ಕೆಡಿಸುವ ಹೊಲೆಯ
ಹುಸಿಯ ಬೊಗಳುವನೊಬ್ಬ ಹುಚ್ಚ ಹೊಲೆಯ ४

ಅರಿತು ಆಚಾರವನು ನಡೆಸದಾತನೆ ಹೊಲೆಯ
ಪರಸತಿಗೆ ಅಳುಕಿದವ ಪಾಪಿ ಹೊಲೆಯ
ಗುರುಹಿರಿಯರನು ಕಂಡು ನಮಿಸದಾತನೆ ಹೊಲೆಯ
ಪುರಂದರವಿಠಲನ ನೆನೆಯದವ ಹೊಲೆಯ ೫

ಪುರಂದರದಾಸರು 'ಹೊಲೆಯ' ಎಂಬುದನ್ನು ಜಾತಿ ವಾಚಕವಾಗಿ ತೆಗೆದುಕೊಂಡಿಲ್ಲ. ದುರ್ಗುಣದಿಂದ ಕೂಡಿದವರು ಹೊಲೆಯರು. ಅವರು ಊರೊಳಗೇ ಇದ್ದಾರೆ-ಎಂಬುದು ಇಲ್ಲಿನ ಆಶಯ. ಇದೇ ಹಾಡು ಬೇರೆಯಾಗಿಯೇ ಬೆಟಗೇರಿ-ಬೆಂಗೇರಿ ಸಂಗ್ರಹದಲ್ಲಿ ಬಂದಿದೆ. ಪಲ್ಲವಿ ಮಾತ್ರವೇ ಇಲ್ಲಿಯದೇ.

~ ~ ~ * * * ~ ~ ~

# ಅನುಬಂಧ

## ಅಂಕಿತನಾಮಗಳ ಅಕಾರಾದಿ ಸೂಚಿ

48. ಚೌ ಚೌ ಚೌಕಿ (ವಿಜ್ಞಾನ-ವಿನೋದ) / ಟಿ. ಆರ್. ಅನಂತರಾಮು, ಶರಣ ಬಸವೇಶ್ವರ ಅಂಗಡಿ 90/-
49. ಶಿವ ಕರುಣಾಮಯ / ಉಮಾ ಶಿವಾನಂದ 80/-
50. ಹೊಸಗನ್ನಡ ಸಾಹಿತ್ಯ ಚರಿತ್ರೆ / ಪ್ರೊ. ಎಲ್. ಎಸ್. ಶೇಷಗಿರಿರಾವ್ 130/-
51. ಯೂಲಿಸಿಸ್ಸಿನ ಸಾಹಸಗಳು / ಡಾ. ಕೆ. ಎಸ್. ಉಮಾಪತಿ 30/-
52. ಒಂದು ಊರಿನ ಕತೆಗಳು / ಬರಗೂರು ರಾಮಚಂದ್ರಪ್ಪ 60/-
53. ಮದುವೆಯ ಮೊದಲ ವರ್ಷ / ಪದ್ಮ ಮತ್ತು ಕೆ. ಎಸ್. ಉಮಾಪತಿ 60/-
54. ತಂಬರೆ (ಕಾದಂಬರಿ) / ಎಂ. ವೀರಪ್ಪ ಮೊಯಿಲಿ 96/-
55. ಸಂಕ್ಷಿಪ್ತ ಕನ್ನಡ ಭಾಷೆಯ ಚರಿತ್ರೆ / ಎಂ. ಎಚ್. ಕೃಷ್ಣಯ್ಯ 90/-
56. ಚಿತ್ರಪಟ, ಅಗ್ನಿವರ್ಣ, ಉರಿಯ ಉಯ್ಯಾಲೆ (ನಾಟಕಗಳು) / ಎಚ್.ಎಸ್. ವೆಂಕಟೇಶಮೂರ್ತಿ 40/-
57. ನಟಸಾರ್ವಭೌಮ (ಕಾದಂಬರಿ) / ಅನಕೃ 200/-
58. ಹೆರೋಡೊತನ ಸಮರ ಕತೆಗಳು / ಅನು: ಡಾ. ಎಚ್.ವಿ. ರಂಗಾಚಾರ್ 350/-
59. ಗ್ರಾಮಾಯಣ (ಕಾದಂಬರಿ) / ರಾವಬಹದ್ದೂರ 150/-
60. ಯಯಾತಿ (ಕಾದಂಬರಿ) / ವಿ.ಎಸ್. ಖಾಂಡೇಕರ್ ಅನು: ವಿ.ಎಂ. ಇನಾಂದಾರ್ 150/-
61. ಪದಸಂಚಯ (ಸಾದೃಶ್ಯಾರ್ಥಕ ಪದಕೋಶ) / ಪ್ರಕಾಶ್ ಮತ್ತು ಮಧುಸೂದನ 40/-
62. ಊರುಕೇರಿ (ಆತ್ಮಕಥನ) / ಡಾ. ಸಿದ್ಧಲಿಂಗಯ್ಯ 45/-
63. ಸೃಜನಕ್ರಿಯೆ ಮತ್ತು ಸಂವೇದನೆ (ವಿಮರ್ಶೆ) / ಡಾ. ಸುರೇಂದ್ರನಾಥ ಮಿಣಜಗಿ 80/-
64. ಮೆರವಣಿಗೆ (ಇಲ್ಲಿಯವರೆಗಿನ ಕವನಗಳು) / ಡಾ. ಸಿದ್ಧಲಿಂಗಯ್ಯ 70/-
65. ಅಳಿಲು ಸೇವೆ (ಹನಿಗವನಗಳು) / ಡುಂಡಿರಾಜ್ 30/-
66. ಹನಿಖಜಾನೆ (ಇಲ್ಲಿಯವರೆಗಿನ ಹನಿಗವನಗಳು) / ಡುಂಡಿರಾಜ್ 95/-
67. ಠಕ್ಕನೊಬ್ಬನ ಆತ್ಮಚರಿತ್ರೆ (ಕಾದಂಬರಿ) / ಅನು: ಎನ್.ಪಿ. ಶಂಕರನಾರಾಯಣರಾವ್ 90/-
68. ವೈಕುಂಠಕೆ ಬುಲಾವ್ (ನಗೆಬರಹಗಳು) / ಎಂ. ಎಸ್. ನರಸಿಂಹಮೂರ್ತಿ 70/-
69. ಕಾವ್ಯ ಭಾಷೆ (ವಿಮರ್ಶೆ) / ಎಂ. ಎಚ್. ಕೃಷ್ಣಯ್ಯ 95/-
70. ಉತ್ತರಭೂಪ / ಬೀchi 150/-
71. ಇಹದ ಪರಿಮಳದ ಹಾದಿ (ವಿಮರ್ಶೆ) / ನರಹಳ್ಳಿ ಬಾಲಸುಬ್ರಹ್ಮಣ್ಯ 150/-
72. ಯಾಪಿಲ್ಲು (ಕಾದಂಬರಿ) / ಕುಂ. ವೀರಭದ್ರಪ್ಪ 45/-
73. ಬಡವರ ನಗುವಿನ ಶಕ್ತಿ (ಸಿದ್ಧಲಿಂಗಯ್ಯನವರ ಸಾಹಿತ್ಯ ಕುರಿತ ವಿಮರ್ಶೆ) ಸಂ: ದಂಡಪ್ಪ 150/-
74. ಟಾಲ್‌ಸ್ಟಾಯ್ ಅವರ ಮಹಾಪ್ರಸ್ಥಾನ ಮತ್ತು ಇತರ ಕಥೆಗಳು / ಅನು: ಜಿ.ಎನ್.ಆರ್. 80/-
75. ಸಂಸ್ಕೃತಿ, ಶ್ರಮ ಮತ್ತು ಸೃಜನಶೀಲತೆ (ವಿಮರ್ಶೆ) / ಬರಗೂರು ರಾಮಚಂದ್ರಪ್ಪ 330/-
76. ಕಾಂಟೆಸಾದಲ್ಲಿ ಕಾವ್ಯ (ಕವನ ಸಂಕಲನ) / ಬರಗೂರು ರಾಮಚಂದ್ರಪ್ಪ 90/-
77. ಮಹಿಳಾ ಅಧ್ಯಯನ / ನೇಮಿಚಂದ್ರ 80/-
78. ಗಾಂಪರ ಗುಂಪು (ಹಾಸ್ಯ) / ದಾಶರಥಿ ದೀಕ್ಷಿತ್ 80/-
79. ಓ ಹೆನ್ರಿ ಕಥೆಗಳು / ಅನು: ಜಿ.ಎನ್. ರಂಗನಾಥ ರಾವ್ 80/-
80. ಮರಳಿ ಮಠಕ್ಕೆ (ಹಾಸ್ಯ) / ದಾಶರಥಿ ದೀಕ್ಷಿತ್ 70/-
81. ನೇಮಿಚಂದ್ರರ ಕಥೆಗಳು / ನೇಮಿಚಂದ್ರ 160/-
82. ಪ್ರಾಸಂಗಿಕ ಪ್ರಬಂಧಗಳು (ವಿಮರ್ಶೆ) / ಎನ್. ಬಾಲಸುಬ್ರಹ್ಮಣ್ಯ 95/-
83. ರಂಗಣ್ಣನ ಕನಸಿನ ದಿನಗಳು / ಎಂ.ಆರ್. ಶ್ರೀನಿವಾಸಮೂರ್ತಿ 90/-
84. ಜ್ಞಾನರಥ (ಕಥೆಗಳು) ಸುಬ್ರಹ್ಮಣ್ಯ ಭಾರತಿ / ಅನು: ಬಿ.ಜಿ.ಎಲ್. ಸ್ವಾಮಿ 70/-
85. ಕೈಲಾಸಂ Jokಸ್ಸು ... Sonಗ್ಸು ... (ನಗೆ ಹನಿಗಳು) / ಬಿ. ಎಸ್. ಕೇಶವರಾವ್ 40/-
86. ಅಡವಿ (ಕಾದಂಬರಿ) / ಮಾಸ್ತಿ ಕೆ. ಆರ್. ಕೃಷ್ಣಪ್ಪ 90/-
87. ಅವತಾರಗಳು / ಡಾ. ಸಿದ್ಧಲಿಂಗಯ್ಯ 60/-
88. ಆಧುನಿಕ ಕನ್ನಡ ನಾಟಕ (ವಿಮರ್ಶೆ) / ಡಾ. ಕೆ. ಮರುಳಸಿದ್ದಪ್ಪ 250/-
89. ಪಕೋಡ ಪ್ರಿಯ (ಹಾಸ್ಯ) / ದಾಶರಥಿ ದೀಕ್ಷಿತ್ 50/-
90. ಆಫ್ ದಿ ರೆಕಾರ್ಡ್ / ಬೋನಂತಾಯ ಹರಿಶ್ಚಂದ್ರಭಟ್ 80/-
91. ಕರಗ ಸಂಪ್ರದಾಯ / ಡಾ। ಎಂ. ಸುಮಿತ್ರ 90/-
92. ಪುರಂದರದಾಸರ ಜನಪ್ರಿಯ ಹಾಡುಗಳು / ಸಂ: ಶ್ರೀನಿವಾಸ ಹಾವನೂರ, ಹೊ. ರಾ. ಸತ್ಯನಾರಾಯಣರಾವ್ 90/-
93. ಬೆಳುದಿಂಗಳಲ್ಲಿ ಅರಳಿದ ಮೊಲ್ಲೆ / ಬಿ.ಜಿ.ಎಲ್. ಸ್ವಾಮಿ
94. ಎಂ. ವ್ಯಾಸರ ಮಿನಿ ಕಾದಂಬರಿಗಳು
95. ಜನಪ್ರಿಯ ಭಾವಗೀತೆಗಳು / ಎನ್. ಪ್ರಭಾ
96. ಕುವೆಂಪು ನಾಟಕಗಳು (ವಿಮರ್ಶೆ) / ನರಹಳ್ಳಿ ಬಾಲಸುಬ್ರಹ್ಮಣ್ಯ
97. ಜಯಂತ ಕಾಯ್ಕಿಣಿಯವರ ಆಯ್ದ ಕಥೆಗಳು
98. ಬೀಚಿ ನಗೆಹನಿಗಳು / ಸಂ: ಬಿ. ಎಸ್. ಕೇಶವರಾವ್
99. ವ್ಯಾಸರಾಯಬಲ್ಲಾಳರ ಸಮಗ್ರ ಕಥೆಗಳು

## ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು

ಕಲ್ಲುಸಕ್ಕರೆ ಕೊಳ್ಳಿರೋ ನೀವೆಲ್ಲರು
ಕಲ್ಲುಸಕ್ಕರೆ ಕೊಳ್ಳಿರೋ

ಕಲ್ಲುಸಕ್ಕರೆ ಸವಿ ಬಲ್ಲವರೆ ಬಲ್ಲರು
ಫುಲ್ಲಲೋಚನ ಶ್ರೀಕೃಷ್ಣನಾಮವೆಂಬ

ಎತ್ತು ಹೇರುಗಳಿಂದ ಹೊತ್ತು ಮಾರುವುದಲ್ಲ
ಒತ್ತೊತ್ತಿ ಗೋಣಿಯೊಳು ತುಂಬುವದಲ್ಲ
ಎತ್ತ ಹೋದರು ಬಾಡಿಗೆ ಸುಂಕವಿದಕಿಲ್ಲ
ಉತ್ತಮ ಸರಕಿದು ಅತಿ ಲಾಭ ಬರುವಂಥ

ನಷ್ಟ ಬೀಳುವುದಲ್ಲ ನಾತ ಹುಟ್ಟುವುದಲ್ಲ
ಎಷ್ಟು ಒಯ್ದರು ಬೆಲೆ ರೊಕ್ಕವಿದಕಿಲ್ಲ
ಕಟ್ಟಿರುವೆಯು ತಿಂದು ಕಡಮೆಯಾಗುವುದಲ್ಲ
ಪಟ್ಟಣದೊಳಗೆ ಪ್ರಸಿದ್ಧವಾಗಿರುವಂಥ

ಸಂತೆ ಸಂತೆಗೆ ಹೋಗಿ ಶ್ರಮಪಡುವುದಲ್ಲ
ಸಂತೆಯೊಳಗೆ ಇಟ್ಟು ಮಾರುವುದಲ್ಲ
ಸಂತತ ಭಕ್ತರ ನಾಲಗೆ ಸವಿಗೊಂಬ
ಕಾಂತ ಪುರಂದರವಿಠಲ ನಾಮವೆಂಬ

---

ರೂ. 90/-    ISBN: 81-87321-71-7




ಅಂಕಿತ ಪುಸ್ತಕ
53, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್, ಗಾಂಧಿಬಜಾರ್ ಮುಖ್ಯರಸ್ತೆ
ಬಸವನಗುಡಿ, ಬೆಂಗಳೂರು - 560 004
☎ 661 7100 (O) 652 6134 (R)